


# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿ ತ್ರೈಮಾಸಿಕ

ಸಂಪಾದಕರು

ಡಾ. ಮಲ್ಲಿಕಾ ಘಂಟಿ

## ದಯವಿಟ್ಟು ಗಮನಿಸಿ

☆ ಅಕಾಡೆಮಿಯ ಎಲ್ಲ ಪ್ರಕಟಣೆಗಳಿಗೆ ಮುಖ ಬೆಲೆಯ ಶೇ. ೨೦ ರಷ್ಟು ರಿಯಾಯಿತಿ ನೀಡಲಾಗುವುದು.

☆ ಒಂದು ಸಾವಿರ ರೂಪಾಯಿಗಳಿಗೆ ಮೇಲ್ಪಟ್ಟು ಪುಸ್ತಕಗಳನ್ನು ಖರೀದಿಸಿದರೆ ಶೇ. ೩೩ರಷ್ಟು ರಿಯಾಯಿತಿಯಿದೆ.

☆ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳಲ್ಲಿ ಪ್ರಕಟಿಸುತ್ತಿರುವ ತ್ರೈಮಾಸಿಕ ಪತ್ರಿಕೆ 'ಅನಿಕೇತನ'ಕ್ಕೆ ಚಂದಾದಾರರಾಗಿರಿ.

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ

ಅಕ್ಟೋಬರ್ – ಡಿಸೆಂಬರ್ ೨೦೦೭

ಸಂಪಾದಕರು

**ಡಾ. ಮಲ್ಲಿಕಾ ಘಂಟಿ**



ಕರ್ನಾಟಕ ಸಾಹಿತ್ಯ ಅಕಾಡೆಮಿ

ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು–೫೬೦ ೦೦೨

✆ ೦೮೦–೨೨೨೧ ೧೭೩೦ / ೨೨೧೦೬೪೬೦

ANIKETHANA : A Literary Journal (Quarterly)
Edited by : Dr. Mallika Ghanti
Published by : V. N. Mallikarjunaswamy, Registrar, Karnataka Sahithya Academy, Kannada Bhavana, J.C. Road, Bengalooru-02.

Pages : V + 147
Registration No. 45646/88

ಸಂಪುಟ : ೧೯
ಸಂಚಿಕೆ : ೨
ಪ್ರತಿಗಳು : ೧೫೦೦
ಪುಟಗಳು : V + ೧೬೩

ಪ್ರಕಾಶಕರು :
ವಿ. ಎನ್. ಮಲ್ಲಿಕಾರ್ಜುನಸ್ವಾಮಿ
ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ,
ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು– ೫೬೦ ೦೦೨

ಬಿಡಿ ಪ್ರತಿ : ರೂ. ೩೦/–
ವಾರ್ಷಿಕ ಚಂದಾ : ರೂ. ೧೦೦/–
ಆಜೀವ ಚಂದಾ : ರೂ. ೩೦೦/–

ಮುಖಪುಟ ಕಲೆ : ಕೃಷ್ಣ ಎಂ ರಾಯಚೂರು

ಕೃಪೆ : ಕರ್ನಾಟಕ ಲಲಿತಕಲಾ ಅಕಾಡೆಮಿ

ಮುದ್ರಕರು : ಭಾಗ್ಯಂ ಬೈಂಡಿಂಗ್ ವರ್ಕ್ಸ್
ನಂ. ೨೫/೧, ೧ನೇ ಮುಖ್ಯರಸ್ತೆ, ೧ನೇ ಅಡ್ಡರಸ್ತೆ
ನ್ಯೂ ಟಿಂಬರ್ ಯಾರ್ಡ್ ಲೇಔಟ್
ಮೈಸೂರು ರಸ್ತೆ ಬೆಂಗಳೂರು – ೫೬೦ ೦೨೬
ದೂರವಾಣಿ : ೨೬೭೫೮೨೮೦, ಫ್ಯಾಕ್ಸ್ : ೨೬೭೫೯೦೮೮

## ಸಂಪಾದಕೀಯ

ನನ್ನ ಸಂಪಾದಕರಲ್ಲಿ ಹೊರಬರುತ್ತಿರುವ ಕೊನೆಯ ಸಂಚಿಕೆಯಿದು. ಹಿಂದಿನ ಮೂರು ಸಂಚಿಕೆಗಳನ್ನು ಪ್ರೀತಿಯಿಂದ ಸ್ವೀಕರಿಸಿದಂತೆ ಇದನ್ನೂ ಸ್ವೀಕರಿಸುತ್ತೀರಿ ಎಂದು ಭಾವಿಸುವೆ. ಅಭಿವೃದ್ಧಿ ಮತ್ತು ಬದಲಾವಣೆ ಎಂಬ ಗಾಲಿಗಳ ಬಂಡಿಯನ್ನು ಭ್ರಮಿತರು, ಗರಬಡಿದವರು (ಸಿರಿಗರ, ಅಧಿಕಾರದಗರ) ಓಡಿಸುತ್ತಿರುವುದರಿಂದ ಆಗಬಹುದಾದ ಆಘಾತ, ಅಪಘಾತಗಳನ್ನು ನೆನೆಸಿಕೊಂಡು ಜಗತ್ತು ಹೆದರಿದೆ, ತಲ್ಲಣಿಸಿದೆ. ಈ ಬಂಡಿಗೆ ಬೌದ್ಧಿಕ ಕಡೆಗೀಲು ಇದ್ದರೆ ಬೀಳುವ, ಒಗ್ಗಾಲಿಯಾಗುವ ಭಯವಿರುವುದಿಲ್ಲ. ಕಡೆಗೀಲಿನಂತಿರುವ ಬುದ್ಧಿಜೀವಿ ವರ್ಗ ಇತ್ತೀಚಿನ ದಿನಗಳಲ್ಲಿ ಯಾಕೋ ನೇಪಥ್ಯಕ್ಕೆ ಸರಿದಿದೆ. ಅಷ್ಟೇ ಅಲ್ಲ ತಟಸ್ಥವಾಗಿದೆ. ಹೀಗಾಗಿಯೇ ಜಗತ್ತಿನಾದ್ಯಂತ ಜನವಿರೋಧಿಯಾದ, ಜೀವವಿರೋಧಿಯಾದ ಯೋಜನೆಗಳು ಕಾಣಿಸಿಕೊಂಡಿವೆ. ಸದ್ಯದ ಜಾಗತಿಕ ಮತ್ತು ದೇಶೀಯ ವಿದ್ಯಮಾನಗಳು ಸೃಜನಶೀಲ ಸಾಮರ್ಥ್ಯ ಶಕ್ತಿಗೆ ಸವಾಲೆಸೆಯುವಂತಿವೆ. ಸಮಾಜದ, ವ್ಯಕ್ತಿಯ ಹಿತಗಳನ್ನು ಗುರುತಿಸುವುದು ಕೂಡ ಕಷ್ಟಸಾಧ್ಯವೆನ್ನುವ ಹಾಗಿದೆ ಸ್ಥಿತಿ. ವ್ಯಕ್ತಿ ಸಮುದಾಯದಿಂದ ದೂರವಾಗುತ್ತ ದೂರವಾಗುತ್ತ ಏಕಾಂಗಿಯಾಗಿ ಭ್ರಮಾತ್ಮಕ ಮತ್ತು ಯಾವುದೇ ಆಧಾರವಿಲ್ಲದೆ ಗೂಡುಕಟ್ಟಿಕೊಳ್ಳುವ ದುರಂತಕ್ಕೆ ಹತ್ತಿರವಾಗುತ್ತಿರುವನು. ಎಲ್ಲ ಸಮ್ಮಂದಗಳು ದುಡ್ಡಿನ ಮತ್ತು ಲಾಭ ನಷ್ಟದ ಮಾನದಂಡಗಳಿಂದ ಅಳೆಯಲ್ಪಡುತ್ತಿರುವುದರಿಂದ ಎಲ್ಲವೂ ಕೃತ್ರಿಮಗೊಂಡಿದೆ. ಇಂತಹ ನಿರ್ವಾತ ಸ್ಥಿತಿಯಲ್ಲಿ ಎಲ್ಲರೆದುರಿಗಿರುವ ಬಹುದೊಡ್ಡ ಪ್ರಶ್ನೆಯೆಂದರೆ ಮುಂದೇನು? ಈ ಸ್ಥಿತಿ ಕೇವಲ ನಮ್ಮೆದುರಿಗಿಲ್ಲ. ಹಿಂದೆಯೂ ಇಂತಹ ಸ್ಥಿತಿ ಕಾಣಿಸಿಕೊಂಡಿತ್ತು. ಕಾಲ ಅದಕ್ಕೆ ಉತ್ತರ ನೀಡಿದೆ. ಕಾಲದ ಉತ್ತರಗಳನ್ನು ನೆನಪಿಸಿಕೊಳ್ಳುತ್ತ ವರ್ತಮಾನದಲ್ಲಿ ಭವಿಷತ್ತಿನ ಕನಸುಗಳನ್ನು ಪೋಣಿಸಬೇಕಾಗಿದೆ. ಕನಸುಪೋಣಿಸುವ ತಾಳ್ಮೆ ಏಕಾಗ್ರತೆಯ ಕೊರತೆ ಸೃಜನಶೀಲ ಮನಸ್ಸುಗಳಿಗೆ ಕಾಡಬಾರದು. ಸಂತೆಯೊಳಗಿದ್ದು ಸಂತನಾಗುವ, ಸಂತನಾಗುತ್ತಲೇ ಸಂತೆ ಮಾಡುವದೆಲ್ಲ ನಮ್ಮೊಳಗೆ ಇದೆ. ಇಂತಹ ಸ್ಥಿತಿಗೆ ವ್ಯಕ್ತಿ ಲೋಕವೆಲ್ಲ ಬರಬೇಕು. ಅದಕ್ಕಾಗಿಯೆ ಬರೆಯುವುದೊಂದು ತಪಸ್ಸಾಗಬೇಕು.

ನಮ್ಮ ಹಿರಿಯರು ವೇದಕ್ಕಿಂತಲೂ ಮಿಗಿಲಾದ ಗಾದೆ ಮಾತುಗಳನ್ನು ಆಡಿರುವರು. 'ದುಃಖ ನುಂಗು ಸುಖ ಹಂಚು' ಎಂದು ಝುಮಿರುಲ್ಲಾ ಷರೀಫರ 'ಮಯೂರ ಸಿಂಹಾಸನ' ಕಥೆ ಈ ಮಾತನ್ನು ನೆನಪಿಸುತ್ತದೆ. 'ಗುರುಮೂರ್ತಿ ಪೆಂಡಕೂರ ಅವರು ತೆಲುಗು ಮೂಲದ 'ಮಾಕಳಿದುರ್ಗದ ನಾಯಿ' ಕಥೆ ಮನುಷ್ಯನ ಸ್ವಾರ್ಥದ

ಬಗ್ಗೆ ಅಸಹ್ಯ ಹುಟ್ಟಿ ನಾಯಿಯೊಂದು ಮನುಷ್ಯರಿಂದಲೇ ದೂರವಾಗಿ ಅಡವಿಯಲ್ಲಿ ಬದುಕುವುದು ಸುರಕ್ಷಿತ, ಸುಖವೆಂದು ಭಾವಿಸಿರುವುದು 'ಮನುಷ್ಯತ್ವ ಸತ್ತ ಸಮಾಜ'ದ ಸ್ಥಿತಿಯನ್ನು ಮನುಷ್ಯರಾದವರೆ ಸರಿಪಡಿಸಬೇಕು. 'ವೃತ್ತಾಂತ' ಕಥೆ ಬದುಕಿನ ಸಂಕೀರ್ಣತೆಯನ್ನು ಎತ್ತಿ ತೋರಿಸುತ್ತದೆ.

ಪ್ರಸಿದ್ಧ ಲೇಖಕ ಆ್ಯಂಟಿನ್ ಚೆಕಾಫ್‌ರವರ 'ಪಂದ್ಯ' ಕಥೆಯನ್ನು ವಿ.ನಾಗೇಶರವರು ಅನುವಾದಿಸಿರುವರು. ಮನುಷ್ಯನ ವಸ್ತು ಮೂಲದ ದುರಹಂಕಾರದ ಹಲವು ಮುಖಗಳನ್ನು ಪರಿಚಯಿಸುವುದು. ನೀಳಾದೇವಿಯವರು ಅನುವಾದಿಸಿರುವ ಅರ್ನೆಸ್ಟ್ ಹೆಮ್ಮಿಗ್ವೆನ 'ಪರದೇಶ'ದಲ್ಲಿ ಕಥೆ ಬತ್ತಿದ ಕಣ್ಣಲ್ಲಿ ತೇವ ಹುಟ್ಟಿಸುತ್ತದೆ. ಡಾ. ವೈರ ಮುತ್ತು ತಮಿಳು ಮೂಲದ 'ಮಾತನಾಡುವ ಮಂಚ' ಕಥೆಯನ್ನು ಮಲರವಿಳಿಯವರು ಅನುವಾದಿಸಿರುವರು. ನಮ್ಮ ಆಸ್ಪತ್ರೆಗಳಲ್ಲಿಯ ಮಂಚ ಟೇಬಲ್ಲುಗಳು ಮಾತನಾಡುವಂತಿದ್ದರೆ ಏನೆಲ್ಲ ಕಥೆಗಳನ್ನು ಹೇಳುತ್ತಿದ್ದವು ಎಂಬುದನ್ನು ನೆನಪಿಸಿಕೊಳ್ಳುವುದೆ ಮಿಶ್ರಭಾವಕ್ಕೆ ಎಡೆಕೊಡುವುದು. ಕನ್ನಡ ಕಥಾಲೋಕ ಹೊಸ ಹೊಸ ಪ್ರಯೋಗಗಳಿಗೆ ತೆರೆದುಕೊಂಡಿದೆ. ಅದರ ಇವತ್ತಿನ ವಿನ್ಯಾಸವನ್ನು ಗುರುತಿಸುವುದೇ ಪ್ರಯಾಸದ ಕೆಲಸವಾಗಿದೆ. ಬಿ. ಪ್ರಭಾಕರ ವರ್ಣ ಅವರ ಸರಿದ ತೆರೆ' ಕಥೆ ಆಧುನಿಕ ಮನುಷ್ಯನ ದಾವಂತತನ ಮನುಷ್ಯನನ್ನು ಉತ್ತಮನಾಗುವ ಹಾದಿಯಿಂದ ಹೇಗೆ ವಿಮುಖಿಗೊಳಿಸಿ ಸ್ವಾರ್ಥದ ದಂಡೆಗುಂಟ ನಡೆಸಿಕೊಂಡು ಹೋಗುತ್ತಿರುತ್ತದೆ ಎಂಬುದನ್ನು 'ಸರಿದ ತೆರೆ' ತೋರಿಸುತ್ತದೆ.

ಈ ಸಂಚಿಕೆ ಕೇವಲ ಭಾವಲೋಕದ ಕನಸಿನ ಮರಿಗಳಿಗೆ ಗುಟುಕು ನೀಡದೆ ಬುದ್ಧಿಗೂ ಸುಗ್ರಾಸ ಭೋಜನವನ್ನು ನೀಡಲೆಂದೆ ಪ್ರೊ. ಪರಿಮಳಾ ನಾಯಕ 'ಅನುವಾದದ ತೊಡಕುಗಳು' ಮತ್ತು ಬಸವರಾಜ ಡೋಣೂರ ಅವರ 'ಭಾಷಾಂತರ ಮತ್ತು ಸಂವಹನದ ಸಾಧ್ಯತೆಗಳು', ಡಾ. ವಿಜಯಕುಮಾರಿ ಕರಿಕಲ್‌ರ 'ಯಶೋಧರೆಯ ನೆಪದಲ್ಲಿ' ಹಾಗೂ ಡಾ. ವೆಂಕಟಗಿರಿ ದಳವಾಯಿಯವರ 'ಚಿರಸ್ಮರಣೆ : ಅನಾಗತ ಹಿಂಸಾ ಬೀಜಗ ಪರಿಶೋಧನೆ' ಲೇಖನಗಳು ವಿಮರ್ಶೆಯ ಮತ್ತು ಭಾಷಾಂತರದ ಸಾಧ್ಯತೆಗಳ ಮತ್ತು ಅದರ ಬಿಕ್ಕಟ್ಟುಗಳನ್ನು ಗುರುತಿಸುತ್ತಲೇ ಅದನ್ನು ಬಿಡಿಸುವ ಹಾದಿಗಳನ್ನು ತೋರಿಸುವುದರಿಂದ ಈ ಲೋಕ ಪ್ರವೇಶಿಸುವವರಿಗೆ ಉಪಯುಕ್ತ ಮಾಹಿತಿಯನ್ನು ನೀಡುತ್ತವೆ.

ಅನುವಾದ ಮತ್ತು ಕನ್ನಡದ ಕಂಪಿನ ಕಾವ್ಯ ಕವಿತೆ ಹಿಡಿದಿರುವ ಇತ್ತೀಚಿನ ಜಾಡಿನ ಬಗ್ಗೆ ಸೂಕ್ಷ್ಮವಾಗಿ ತಿಳಿಸುತ್ತಲೆ ಅದರ ಸಾಧ್ಯತೆಗಳ ಕುರಿತ ಹಾಗೇ ಬೆರಗನ್ನು ಮೂಡಿಸುವುದು.

ಈ ಸಂಚಿಕೆಯನ್ನು ರೂಪಿಸಲು ಕಾರಣೀಭೂತರಾದ ಹಿಂದಿನ ಮತ್ತು ಇಂದಿನ ಅಧ್ಯಕ್ಷರಿಗೆ ರಿಜಿಸ್ಟಾರ್‌ರಿಗೆ ಮತ್ತು ಎಲ್ಲ ಸದಸ್ಯರಿಗೆ, ಸಂಚಿಕೆಯ ಶಕ್ತಿಯಾಗಿರುವ ಎಲ್ಲ ಲೇಖಕರಿಗೂ ಕೃತಜ್ಞತೆಗಳು.

**ಸಂಪಾದಕರು**

## ಪರಿವಿಡಿ

I ಸಂಪಾದಕೀಯ

# ಪದ್ಮಶ್ರೀ ಡಾ. ವೈರಮುತ್ತು

**ಮಲರ್‌ವಿಳಿ ಕೆ.**

ಕವಿತೆ, ಕಾದಂಬರಿ, ಪ್ರಬಂಧ, ಲೇಖನ, ಪ್ರವಾಸ ಕಥನ, ಅನುವಾದ, ಚಿತ್ರಗೀತೆ, ಚಿತ್ರಕಥೆ, ಸಂಭಾಷಣೆ–ಹೀಗೆ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರಖ್ಯಾತಿಯನ್ನು ಗಳಿಸಿರುವ ಬಹುಮುಖ ಪ್ರತಿಭೆಯ ಪ್ರಬುದ್ಧ ಚಿಂತಕರಾದ ಪದ್ಮಶ್ರೀ ಡಾ. ವೈರಮುತ್ತು ರವರ ಜನನ 13–7–1953 ಹುಟ್ಟೂರು ತೇನಿ ಜಿಲ್ಲೆಯ (ಮಧುರೈ) ಮೆಟ್ಟೂರು ಎಂಬ ಕುಗ್ರಾಮ. ನಂತರ ವಡುಗಪಟ್ಟಿ ಎಂಬ ಹಳ್ಳಿಗೆ ಇವರ ಕುಟುಂಬ ಸ್ಥಳಾಂತರ ಗೊಂಡು ಅಲ್ಲಿಯೇ ಇವರ ಶಾಲಾ ವಿದ್ಯಾಭ್ಯಾಸ. ನಂತರ ಚೆನ್ನೈಗೆ ಬಂದು 'ಪಚ್ಚಯಪ್ಪ' ಕಾಲೇಜಿನಲ್ಲಿ ಪದವಿ ವ್ಯಾಸಂಗ ಹಾಗೂ ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಪ್ರಥಮ ಸ್ಥಾನವನ್ನು ಪಡೆದು ಸ್ನಾತಕೋತ್ತರ ಪದವೀಧರರಾದರು. ಇವರ ತಂದೆ ರಾಮಸ್ವಾಮಿ ದೇವರ್, ತಾಯಿ ಅಂಗಮ್ಮಳ.

ಹನ್ನೊಂದು ವರ್ಷದ ಬಾಲಕನಾಗಿರುವಾಗಲೇ ಕವಿತೆ ರಚಿಸಲು ಪ್ರಾರಂಭಿಸಿದ ವೈರಮುತ್ತುರವರು ತಮ್ಮ ಹದಿನಾಲ್ಕನೇ ವಯಸ್ಸಿನಲ್ಲಿಯೇ ತಮಿಳಿನ 'ವೆಣ್ಬಾ' ಎಂಬ ಕಠಿಣಕರವಾದ ಸಾಹಿತ್ಯ ಪ್ರಕಾರದಲ್ಲಿ ಪ್ರಾವೀಣ್ಯತೆಯನ್ನು ಹೊಂದಿದ್ದರು. ಶಾಲಾ ದಿನಗಳಲ್ಲಿಯೇ ತಮಿಳಿನಲ್ಲಿ ಉನ್ನತ ಅಂಕಗಳನ್ನು ಪಡೆದು ಬೆಳ್ಳಿಬಟ್ಟಲನ್ನು ಪಡೆದರು.

1972ರಲ್ಲಿ ದ್ವಿತೀಯ ಬಿ.ಎ. ವ್ಯಾಸಂಗ ಮಾಡುವಾಗಲೇ ಇವರ ಮೊದಲ ಕವಿತಾ ಸಂಕಲನವಾದ 'ವೈಗರೈ ಮೇಘಂಗಳ್' ಬಿಡುಗಡೆಯಾಯಿತು. ಇವರ ವಿದ್ಯಾರ್ಥಿ ದಿಸೆಯಲ್ಲಿಯೇ ಇವರ ಕವಿತಾ ಸಂಕಲನ ಪಠ್ಯಪುಸ್ತಕವಾಗಿತ್ತು.

ಸಾಂಪ್ರದಾಯಿಕ ಹಾಗೂ ಆಧುನಿಕ ಎರಡರ ಸಮ್ಮೇಳನದ ಒಂದು ಪ್ರತ್ಯೇಕ ಸೃಜನಾತ್ಮಕ ಭಾಷಾಶೈಲಿಯನ್ನು ಬಳಸಿಕೊಂಡರು. 1979ರಲ್ಲಿ ಡಾ. ವೈರಮುತ್ತುರವರ 'ತಿರುತ್ತಿ ಎಳಂದಿಯ ತೀರ್ಪುಗಳ್' (ತಿದ್ದಿ ಬರೆದ ತೀರ್ಪುಗಳು) ಕೃತಿ ಬಿಡುಗಡೆಯಾಗಿ ಇಡೀ ತಮಿಳು ಸಾಹಿತ್ಯ ವಲಯದಲ್ಲಿಯೇ ಒಂದು ಅಲ್ಲೋಲ ಕಲ್ಲೋಲವನ್ನುಂಟು ಮಾಡಿತು.

ಇವರ ಸಾಹಿತ್ಯ ಪ್ರಪಂಚ ಅನನ್ಯ. ತಮಿಳು ಸಾಹಿತ್ಯದ ನಿರಂತರ ಅಭ್ಯಾಸ ವಿಶ್ವಸಾಹಿತ್ಯದಲ್ಲಿರುವ ಅತ್ಯಾಸಕ್ತಿ ಬಾಳನ್ನು ಕುರಿತ ಸೂಕ್ಷ್ಮ ಹಾಗೂ ಹರಿತವಾದ ನೋಟ, ಪ್ರಬುದ್ಧ ಚಿಂತನೆ, ಸೌಂದರ್ಯಪ್ರಜ್ಞೆ ಭಾಷಾ ಪ್ರೌಢಿಮೆ ಭಾಷೆಯನ್ನು

ನಾವೀನ್ಯಗೊಳಿಸಿ ನೂತನ ಸಾಹಿತ್ಯ ಪರಂಪರೆಯ ಆವಿಷ್ಕಾರದಲ್ಲಿ ಇವರ ರಚನೆ ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ. ಸುಮಾರು 37ಕ್ಕೂ ಹೆಚ್ಚು ಉತ್ಕೃಷ್ಟವಾದ ಕೃತಿಗಳ ರಚನೆ. 500ಕ್ಕೂ ಹೆಚ್ಚು ಕವಿತೆಗಳನ್ನು ರಚಿಸಿದ್ದಾರೆ. ಶ್ರೇಷ್ಠ ಗೀತರಚನಾಕಾರರೆಂದು (ಚಲನಚಿತ್ರಗೀತೆ) ರಾಜ್ಯಪ್ರಶಸ್ತಿಯನ್ನು ನಾಲ್ಕು ಬಾರಿ ಪಡೆದವರಾಗಿದ್ದಾರೆ.

1980ರಲ್ಲಿ ಭಾರದಿರಾಜ ರವರ 'ನಿಳಲ್ಗಳ್' ಎಂಬ ಚಲನಚಿತ್ರದ ಮುಖೇನ ಚಲನಚಿತ್ರರಂಗಕ್ಕೆ ಪ್ರವೇಶ. ಇವರ ಪ್ರವೇಶಾನಂತರ ಚಲನಚಿತ್ರಗೀತೆ ವಿನೂತನ ಶಿಖರಗಳನ್ನು ತಲುಪಿತು. ಇದುವರೆಗೂ ಸುಮಾರು 6,500 ಚಿತ್ರಗೀತೆಗಳನ್ನು ರಚಿಸಿದ್ದಾರೆ. ಹತ್ತು ನಿಮಿಷಕ್ಕೊಂದಾವರ್ತಿ ಇವರ ಗೀತೆ ವಿಶ್ವದ ಆಕಾಶವಾಣಿಯಲ್ಲೋ ಅಥವಾ ದೂರದರ್ಶನದಲ್ಲೋ ಪ್ರಸಾರಗೊಳ್ಳುತ್ತದೆ.

ಜೇಲ್‌ಸಿಂಗ್, ಡಾ. ಎ.ಪಿ.ಜೆ. ಅಬ್ದುಲ್ ಕಲಾಂ, ಡಾ. ಶಂಕರ್ ದಯಾಳ್ ಶರ್ಮಾ, ಕೆ. ಆರ್. ನಾರಾಯಣ್ ಇವರುಗಳಿಂದ ಶ್ರೇಷ್ಠ ಗೀತರಚನಕಾರರೆಂದು ರಾಷ್ಟ್ರ ಪ್ರಶಸ್ತಿಯನ್ನು ಐದು ಬಾರಿ ಪಡೆದ ಏಕೈಕ ವ್ಯಕ್ತಿಯಾಗಿ ಭಾರತದಲ್ಲೇ ರಾರಾಜಿಸುತ್ತಿದ್ದಾರೆ.

ಇವರು ರಚಿಸಿದ 'ಕಳ್ಳಿಕ್ಕಾಟ್ಟು ಇದಿಗಾಸಂ' ಕಾದಂಬರಿಗೆ 2003ರಲ್ಲಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸದೆ.

ಇವರ ಸಾಹಿತ್ಯ ಸೇವೆಗಾಗಿ 2003ರಲ್ಲಿ ಡಾ. ಅಬ್ದುಲ್ ಕಲಾಂ ಮೂಲಕ ಪದ್ಮಶ್ರೀ ಪ್ರಶಸ್ತಿ.

ತಮಿಳುನಾಡು ಮುಖ್ಯಮಂತ್ರಿ ಕರುಣಾನಿಧಿಯವರಿಂದ ಕಲೈಪ ೨ಮಣಿ ಹಾಗೂ ಕವಿಪೇರರಸು (ಕವಿಮಹಾರಾಜ) ಬಿರುದನ್ನು ಪಡೆದಿರುವವರು.

ಇವರ ಸಾಹಿತ್ಯ ಸೇವೆಗಾಗಿ 'ತಮಿಳುನಾಡು ಮುಕ್ತ ವಿಶ್ವವಿದ್ಯಾಲಯ' 2007ರಲ್ಲಿ ಗೌರವ, ಡಾಕ್ಟರೇಟ್ ಪದವಿ 'ಮಧುರೈ ಕಾಮರಾಜ್' ವಿಶ್ವವಿದ್ಯಾಲಯ 2008ರಲ್ಲಿ ಗೌರವ ಡಾಕ್ಟರೇಟ್, ಕೊಯಮುತ್ತೂರಿನ ಭಾರದಿಯಾರ ವಿಶ್ವವಿದ್ಯಾಲಯದಿಂದ 2009ರಲ್ಲಿ ಗೌರವ ಡಾಕ್ಟರೇಟ್ ನೀಡಿ ಗೌರವಿಸಿರುವರು.

ಇವರ ಸಾಹಿತ್ಯದ ಸಾಧನೆಯನ್ನು ಮೆಚ್ಚಿ ಕಲ್ಕತ್ತೆಯ ಭಾರತೀಯ ಭಾಷಾ ಪರಿಷತ್ 2009 ಏಪ್ರಿಲ್ 18 ರಂದು ಸಾಧನ ಸಮ್ಮಾನ್ ಪ್ರಶಸ್ತಿ ನೀಡಿ ಗೌರವಿಸಿತು.

80 ಮಿಲಿಯನ್ ತಮಿಳರು ದಿನನಿತ್ಯ ಉಚ್ಚರಿಸುವ ಈ ಕವಿಯನ್ನು ಆಗಿನ ರಾಷ್ಟ್ರಪತಿಗಳಾದ ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ರವರು 'ಎಪಿಕ್ ಪೊಯಟ್' ಎಂದು ಬಿರುದನ್ನಿತ್ತು ಹೊಗಳಿದ್ದಾರೆ. ಲಂಡನ್ ಮಹಾನಗರದ ಶಿಕ್ಷಣಮಂತ್ರಿ ಮಿಸ್ಟರ್ ಸ್ಟೀಫನ್ ಟಿಮ್ಸ್ ಇವರ ಕವಿತೆಗಳನ್ನು ಭಾವ ಹಾಗೂ ಜ್ಞಾನದ ಸರಿಸಮಾನ ಮಿಶ್ರಣವೆಂದು ಹೊಗಳಿದ್ದಾರೆ.

ಹಾಗೂ ಲಂಡನ್ ನಗರದ ಮೇಯರ್ ರಾಬಿನ್ ವೇಲ್ಸ್ ಸ್ಕಾಟ್‌ಲ್ಯಾಂಡ್‌ನ 'ರಾಬರ್ಟ್ ಬರ್ನ್ಸ್' ಎಂಬ ಕವಿಯೊಂದಿಗೆ ಡಾ. ವೈರಮುತ್ತುರವರನ್ನು ಹೋಲಿಸಿದ್ದಾರೆ.

ಒಂದು ಖಾಸಗಿ ಸಂಸ್ಥೆ ಕೆನಡಾ ಸರ್ಕಾರದ ಸಹಯೋಗದೊಂದಿಗೆ ಕವಿ 'ವೈರಮುತ್ತು' ರವರ ಭಾವಚಿತ್ರವಿರುವ ಅಂಚೆ ಚೀಟಿಯನ್ನು ಟೊರೆಂಟೋದಲ್ಲಿ ಬಿಡುಗಡೆ ಮಾಡಿ ಗೌರವಿಸಿತು.

ಡಾ. ವೈರ ಮುತ್ತುರವರು ತಮ್ಮ ಹುಟ್ಟಿದ ದಿನವನ್ನು 'ಕವಿಗಳ ದಿನ'ವೆಂದು ಅಂದಿನ ದಿನ ಹಿರಿಯ ಹಾಗೂ ಕಿರಿಯ ಕವಿಗಳನ್ನು ಗುರುತಿಸಿ ಪ್ರಶಸ್ತಿ ನೀಡಿ ಪ್ರೋತ್ಸಾಹಿಸುವರು.

ಇವರ ಕೃತಿಗಳ ಮೇಲೆ ಹತ್ತು ಪ್ರಾಧ್ಯಾಪಕರು ಡಾಕ್ಟರೇಟ್ ಪದವಿಯನ್ನು 30ಕ್ಕೂ ಹೆಚ್ಚು ಸಂಶೋಧಕರು ಎಂ.ಫಿಲ್ ಪದವಿಯನ್ನು ಪಡೆದಿದ್ದಾರೆ.

ಭಾರತದ ಹಲವು ವಿಶ್ವವಿದ್ಯಾಲಯಗಳಲ್ಲಿ ಹಾಗೂ ಕಡಲಾಚೆಗೂ ಇವರ ಸಾಹಿತ್ಯ ಪಕ್ವವಾಗಿದೆ.

ಡಾ. ವೈರ ಮುತ್ತುರವರ ಸಾಹಿತ್ಯ ಸಾಧನೆಯನ್ನೂ ಹೊಗಳಿ ಇವರ 'ತಣ್ಣೀರ್ ದೇಸಂ' ಕೃತಿಗೆ ಮುಖ್ಯಮಂತ್ರಿ ಕರುಣಾನಿಧಿ ಮುರಸೊರಿ ಟ್ರಸ್ಟ್ ಮೂಲಕ ಒಂದು ಲಕ್ಷ ರೂಪಾಯಿ ನಗದು ಹಾಗೂ ಬಿರುದನ್ನಿತ್ತು ಗೌರವಿಸಿತು.

ಇವರ ಕವಿತೆಗಳು ಇಂಗ್ಲಿಷ ಹಿಂದಿ, ತೆಲುಗು, ಕನ್ನಡ, ಮಲಯಾಳಂ, ರಷ್ಯನ್, ನಾರ್ವೆಜಿಯನ್ ಇತ್ಯಾದಿ ಭಾಷೆಗಳಲ್ಲಿ ಅನುವಾದಗೊಂಡಿದೆ.

"A Drop in search of the ocean" ಎಂಬ ಶೀರ್ಷಿಕೆಯಡಿ ಇವರ ಪ್ರಾತಿನಿಧಿಕ ಕವಿತೆಗಳನ್ನು ಆಂಗ್ಲ ಭಾಷೆಯಲ್ಲಿ ಅನುವಾದಿಸಲಾಗಿದೆ. ಈ ಕೃತಿ ಡಾ. ಎ.ಪಿ.ಜೆ. ಅಬ್ದುಲ್ ಕಲಾಂರವರಿಂದ ಬಿಡುಗಡೆಯಾಯಿತು.

"ಬಿಂದು ಸಿಂಧು ಕಿ–ಓರ್" ಎಂಬ ಹೆಸರಿನಲ್ಲಿ ಇವರ ಕವಿತೆಗಳು ಹಿಂದಿಯಲ್ಲಿ ದೊಡ್ಡ ಸಂಕಲನವಾಗಿ ಅನುವಾದಗೊಂಡು ದೆಹಲಿಯಲ್ಲಿ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಿಂದ ಬಿಡುಗಡೆಯಾಯಿತು.

ಭಾರತದ 50 ಶ್ರೇಷ್ಠ ಯುವಕರಲ್ಲಿ ಒಬ್ಬರು ಎಂದು 'ಇಂಡಿಯಾ ಟುಡೆ' ಪತ್ರಿಕೆ ಇವರನ್ನು ಆಯ್ಕೆ ಮಾಡಿ ಪ್ರಕಟಿಸಿತು.

ಅಮೇರಿಕ 'ಲೈಬ್ರರಿ ಆಫ್ ಕಾಂಗ್ರೆಸ್' ಸ್ವತಃ ವೈರಮುತ್ತುರ ಕವಿತೆಗಳನ್ನು ಅವರಿಂದಲೇ ವಂಚಿಸಿ, ಧ್ವನಿಮುದ್ರಿಸಿ ವಿಶ್ವಸಾಹಿತ್ಯದ ದಾಖಲೆಗಳಲ್ಲಿ ರಕ್ಷಿಸಿಕೊಂಡು ಬರುತ್ತಿದೆ.

ಇವರ ಪತ್ನಿ ಪ್ರಾಧ್ಯಾಪಕಿ, ಸಾಹಿತಿ, ಕವಯಿತ್ರಿಯೂ ಆದ ಡಾ. ಪೊನ್‌ಮಣಿ ವೈರಮುತ್ತು, ಆಸ್ಟ್ರೇಲಿಯಾದ ಕ್ವೀನ್ಸ್‌ಲ್ಯಾಂಡ್ ವಿಶ್ವವಿದ್ಯಾಲಯದಲ್ಲಿ ಡಾಕ್ಟರೇಟ್ ಪದವಿ ಪಡೆದ ಹಿರಿಯ ಮಗ ಕಬಿಲನ್ ವೈರಮುತ್ತು ಇವರೆಲ್ಲರೂ ಚೆನ್ನೈನಲ್ಲಿ ವಾಸವಾಗಿದ್ದಾರೆ.

"ಇಂದು ತಮಿಳು ಭಾಷೆಯನ್ನು ಆಳುತ್ತಿರುವ ಕವಿಯಾಗಿ, ವಿಶ್ವದಲ್ಲಿರುವ ಸಮಸ್ತ ವಸ್ತುಗಳ ಬಗ್ಗೆ ಕಾವ್ಯ ರಚಿಸಬಲ್ಲ ಪ್ರತಿಭಾನ್ವಿತರಾಗಿ ಅನನ್ಯ ಕಲ್ಪನಾ ಪ್ರತಿಭೆಯುಳ್ಳವರಾಗಿ ವೈರಮುತ್ತು ಹೊಳೆಯುತ್ತಿದ್ದಾರೆ" ಎಂದು ತಮಿಳುನಾಡು

ಮುಖ್ಯಮಂತ್ರಿ ಕರುಣಾನಿಧಿ ಇವರನ್ನು ಹೊಗಳಿದ್ದಾರೆ.

ಸಾಹಿತ್ಯವೆಂಬುದು ವಿಶ್ವಮಾನವರು ಕುಡಿಯುವ ತಾಯಿ ಹಾಲಿನಂತಿರಬೇಕೆಂಬುದು ಅವರ ಸಾಹಿತ್ಯ ಧ್ಯೇಯ.

ಪ್ರಪಂಚವನ್ನು ಕುರಿತು ಆಶ್ಚರ್ಯ, ಅಸ್ತಿತ್ವದ ಬಗ್ಗೆ ಹೆಮ್ಮೆ, ವಿಶ್ವ ಸಮಾಧಾನ, ಸಮರಗಳಿಲ್ಲದ ಸಮುದಾಯ ಇವು ವೈರಮುತ್ತುರವರ ಸಾಹಿತ್ಯದ ಅಂತಃಸತ್ತ್ವ

ಮನುಕುಲದ ಏಳಿಗೆಯನ್ನೇ ಗುರಿಯಾಗಿಟ್ಟುಕೊಂಡು ಸಾಗುತ್ತಿರುವ ಪ್ರಯಾಣದಲ್ಲಿ ವೈರಮುತ್ತುರವರ ದಾರಿ ಬಯಲು ವಿಸ್ತರಿಸುತ್ತಲೇ ಹೋಗುತ್ತದೆ.

**ಪ್ರಕಟಣೆ : ಸೂರ್ಯ ಸಾಹಿತ್ಯ**

## ಶಾಸನ

ತಮಿಳು ಮೂಲ : ಡಾ. ವೈರಮುತ್ತು ಅನುವಾದ : ಮಲರ್‌ವಿಳಿ ಕೆ.

ಏ ಅಹಲ್ಯೆ !

..............................................

ಎಂದಿಗೆ ನೀ ಹೆಣ್ಣಾಗುವೆ?
ಈ
ಪುರುಷ ರಾಮಂದಿರು
ಎಲ್ಲರೂ
ಕಲ್ಲಾಗಿರುವ ನಿನ್ನನ್ನು
ನೋಡಿ ಅವಿತು
ತಮ್ಮ
ಪಾದಗಳು ಕಾಣಸಿದಂತೆ (ಕಾಣಿಸದಂತೆ)
ಪಲ್ಲಕ್ಕಿಯಲ್ಲಿ ಹತ್ತಿ ಪ್ರಯಾಣಿಸುವಾಗ

ಏ ಅಹಲ್ಯೆ !
ಎಂದಿಗೆ ನೀ ಹೆಣ್ಣಾಗುವೆ?

ಕಾಡಿನಲ್ಲಿ............
ಅಂದು ಕಥಾ ಕಲ್ಲಾಗಿ
ಇದ್ದ ನೀ
ಸಮೂಹ ಸಂತೆಯಲಿ
ಇಂದು
ಮಾಂಸದ ಕಲ್ಲಾಗಿದ್ದೀಯೆ !

ಕಣ್ಣೀರೇತಕೆ ಮಗಳೇ !
ಕಲ್ಲಾಗಿ ಹೋದದ್ದು

ನೀನೆಂದು ತಿಳಿದೆಯಾ?
ಕಾವಿ ಸ್ವಾಮಿ
ಆ ಗೌತಮನ ಮನಸಲ್ಲವೇ?

ಒಂದು ರೀತಿ ನೋಡಿದರೆ
ನಿನ್ನ ಪಾಡೇ ಎಷ್ಟೋ ವಾಸಿ

ಕಲ್ಲಾಗಿ ಹೋದುದರಿಂದ
ಚಿಂತೆಯಿಲ್ಲ

ನೋಡು ಹೆಣ್ಣೇ
ನಮ್ಮ
ಭಾರತೀಯ ನಾರಿಯರು
ಯಾ ದೋ ಒಂದಕ್ಕಾಗಿ
ಇರುಳಿನಲ್ಲಿ ಹೆಣ್ಣಾಗಿ

ಹಗಲು ಹೊತ್ತೆಲ್ಲಾ
ಹಾಳು ಬಿದ್ದ ಕಲ್ಯಾಗೆ
ಶಾಪಕ್ಕೆ ಗುರಿಯಾಗಿರುವ
ಶಾಪದ ಕಥೆ ಗೊತ್ತೇನು?

ಇಲ್ಲಿ .....................
ವಿಮೋಚನೆ ಇಲ್ಲದ
ಶಾಪ ಪಡೆದಿದ್ದಾರೆ

ಅಮ್ಮಾ ಅಹಲ್ಯೆ !
ಕಲ್ಲು ಗರ್ಭದಿಂದ
ಹೆಣ್ಣಾಗಿ ನೀನಿನ್ನೂ
ಜನಿಸಲಿಲ್ಲವಲ್ಲಾ !

ಇನ್ನೂ
ನಿನ್ನ ಶಾಪದ ಕಲ್ಲು

ಅನಿಕೇತನ/೭

ಇಲ್ಲಿಯೇ ಬಿದ್ದಿದೆ
ಇಲ್ಲೇ ............

ಕಾರ್ಖಾನೆಗಳಲಿ ಕಛೇರಿಗಳಲಿ...........
ಹೊಲಗದ್ದೆಗಳಲಿ ........ ಮಂಚಗಳಲಿ
ಬೀದಿಯಲಿ .......... ಇನ್ನೂ
ಸಮೂಹ ಸಂತೆಗಳಲಿ ..........

ಇನ್ನೂ
ನಿನ್ನ ಶಾಪದ ಕಲ್ಲು
ಇಲ್ಲಿಯೇ ಬಿದ್ದಿದೆ !

ಪುರುಷ ವರ್ಗವೇ !
ನಿನ್ನ
ಅನೀತಿ ಕೊಳೆಯನು
ಆ
ಶಾಪದ ಕಲ್ಲಿನಲಿ ಒಗೆದು
ಶುಚಿ ಮಾಡಿಕೊಳ್ಳುವೆಯಾ?

* * *

## ಉಯಿಲು

ತಮಿಳು ಮೂಲ : ಡಾ. ವೈರ ಮುತ್ತು    ಅನುವಾದ : ಮಲರ್‌ವಿಳಿ ಕೆ.

ಮಗಂದಿರೇ
ನನ್ನ ವಾರಸುದಾರರೇ

ತಂದೆಯ ಮಾತಿಗಿಂತ ಮೀರಿದ
ಮಂತ್ರ ಇಲ್ಲವಂತೆ

ಸುಳ್ಳು

ಮಂತ್ರದಲ್ಲಿಯೂ
ಸುಳ್ಳುಂಟು
ಮಕ್ಕಳೇ

ಈಗ ಹೇಳುವ
ನನ್ನ ಮಾತು
ಮಂತ್ರಕ್ಕಿಂತ ಮಿಗಿಲಾದುದು
ಮಗಂದಿರೇ

ಕೇಳಿರಿ
ನನ್ನ ಮನೆಯ ಬಾಗಿಲನ್ನೂ
ಮರಣ ತಟ್ಟುತ್ತದೆ

ನಾಲಗೆ
ಲಂಗರು ಹಾಖುತ್ತದೆ.

ತುಟಿ ಅಲುಗಿದರೂ
ಪ್ರಾಣ ಖರ್ಚಾಗುವುದು
ಸನ್ನೇ ಮಾಡಲೂ
ಶಕ್ತಿ ಇರದು
ಆದುದರಿಂದ ಮಕ್ಕಳೇ
ಹೇಳಬೇಕಾದುದೀಗಲೇ
ಹೇಳುತ್ತಿದ್ದೇನೆ

ಇದನ್ನು
ಅಂತರಂಗದಲ್ಲಿ ಬರೆದುಕೊಳ್ಳಿ

ನನ್ನ ನಂತರ
ನನ್ನ ಸ್ನೇಹಿತರು
ನಾನು ಹಿನಿದ್ದೆಲ್ಲಾ
ಸಂಗೀತವೆನ್ನುವರು

ನನ್ನ ನಂತರ
ನನ್ನ ಶತ್ರುಗಳು
ನನ್ನ
ಸಂಗೀತವನ್ನೆಲ್ಲಾ
ಹೀನು ಎನ್ನುವರು

ಎರಡು ಅತಿರೇಕವೆಂದು
ಹೇಳಿ ಮಗಂದಿರೇ

ಇವನು
ರೇಖೆಗಳನ್ನು
ನಂಬದವನು

ರೇಖೆ ಸವೆಸವೆಯುವಂತೆ
ದುಡಿದವನು
ಎಂದು ಹೇಳಿ

ಇವನು
ಪುಷ್ಪಗಳ ಪುತ್ರ
ಸಸ್ಯ ಸ್ನೇಹಿ
ಆದರೆ
ಸೂರ್ಯನನ್ನು ಜೀರ್ಣಿಸಿದವ
ಎಂದು ಹೇಳಿ
ನಾಯಿಯ ವೇಷ
ತೊಟ್ಟರೂ
ಬೊಗಳಿದವನಲ್ಲ
ಕೂಗಿದವನು ಎಂದು
ಹೇಳಿ

ಇವನೇ
ವಿಮರ್ಶಕರನ್ನು ಗೌರವಿಸಿದವನು
ವಿಮರ್ಶೆಗಳನ್ನು ಗೌರವಿಸಿದವನು
ಎಂದು ಪ್ರಕಟಪಡಿಸಿ

ವೆಲ್‌ವೆಟ್ ಹಾಸಿನಲಿ
ನಡೆದರೂ
ಕೆಸರನ್ನೇ
ಚಿಂತಿಸಿದವನು ಎಂದು
ಹೇಳಿ

ಮಂತ್ರಿಗಳನ್ನು
ಸ್ನೇಹಿತರನ್ನಾಗಿ
ಸ್ನೇಹಿತರನ್ನು
ಮಂತ್ರಿಗಳನ್ನಾಗಿ
ಪಡೆದವನು ಎಂದು
ತಿಳಿಸಿ

ಎಲ್ಲರೊಂದಿಗೂ
ಆತ್ಮೀಯನಾಗಿದ್ದವನು

ಆದರೆ ಯಾವಾಗಲೂ ಸ್ವಲ್ಪ ದೂರದಲ್ಲಿಯೇ ಉಳಿದವನು
ಎಂದು ಬರೆಯಿರಿ
ಪಂಚೇಂದ್ರಿಯಗಳು
ಸವೆಸವೆಯಲು
ಪಂಚಭೂತಗಳನ್ನು
ಅನುಭವಿಸಿದವನು
ಇವನೇ
ಆಗಿದ್ದ ಎಂಬುದನ್ನು
ಬರೆಯಿರಿ

ಒಂದೊಂದು ಯುದ್ಧದಲ್ಲಿಯೂ
ಗೆದ್ದವನೂ
ಆದರೂ
ಎಂದೂ ಯುದ್ಧವನ್ನು
ಇಚ್ಛಿಸದವನು
ಇವನೇ ಎಂದು
ಬರೆಯಿರಿ

ವಿಶ್ವದ ಭೂಗೋಳವನ್ನು
ಅಪ್ಪಿದರೂ
ಇಂಡಿಯಾವನ್ನು ಮಾತ್ರ
ಮುತ್ತಿಟ್ಟವನು ಎಂದು
ಮೊದಲು ಹೇಳಿ

ತೆಂಗಿನ ಮರವೂ
ನದೀ ತೀರವೂ
ಕಂಡರೆ
ಅಲ್ಲಿ
ಸಮಾಧಿಯಾಗಲು
ಸಮ್ಮತಿಸಿದವನು ಎಂಬ
ಸಂಗತಿ ಹೇಳಿ

ಇವನ ಲೇಖನಿ
ಒಂದೊಂದು ಬಾರಿ
ಬಾಗಿದಾಗಲೂ
ಮನುಕುಲ ತಲೆಯೆತ್ತಿತೆಂದು
ಸಂತಸದಿಂದ ಹೇಳಿ

ಯಾವ ದೇವತೆಯೊ
ಇವನನ್ನು
ಆಶೀರ್ವದಿಸಲಿಲ್ಲ

ಕಣ್ಣೀರಿನಲ್ಲೂ
ರಕ್ತದಲ್ಲೂ
ಕವಿತೆಗೆ
ಶಾಯಿ ತಯಾರಿಸಿದವನು
ಎಂದು ಬರೆಯಿರಿ

ಗಾಳಿಯಿಲ್ಲದ ಗ್ರಹ
ಕವಿತೆಯಿಲ್ಲದ ನರಕ
ಎರಡೂ
ಒಂದೆಂದವನು
ಇವನೇ ಎಂದು
ಹೇಳಿ

ನನ್ನ
ಸಮಾಧಿಯಲ್ಲಿ
ಜನನ ಬರೆಯಿರಿ
13–7–1953

ಮರಣ ............?
ಬರೆಯಬೇಡಿ
ಇಲ್ಲವೇ ...........?
ಸಾವೇ ಇಲ್ಲವೇ.........?

ಉಂಟು
ಎಂದು?
ಆಗಸ ಎಂದು
ಇಲ್ಲವಾಗುವುದೋ (ಬರಿದಾಗುವುದೋ)
ಅಂದು.....

ಭೂಮಿ ಎಂದು
ಹುದುಗಿ ಹೋಗುವುದೋ
ಅಂದು.......
ಗಾಳಿಗೆ ಎಂದು
ಮೂರ್ಛೆ ಬರುವುದೋ
ಅಂದು......
ಕಡಲು ಎಂದು
ಕಾಣೆಯಾಗುವುದೋ
ಅಂದು......
ಸೂರ್ಯ ಎಂದು
ಇಂಗಿ ಹೋಗುವುದೋ
ಅಂದು.....

ಹೇಳಿ
ಮಕ್ಕಳೇ
ಹೇಳಿ

ಆಗಸ ನಿರಂತರ
ಭೂಮಿ ನಿರಂತರ
ಗಾಳಿ ನಿರಂತರ
ಕವಿತೆ ನಿರಂತರ

* * *

## ಮಾತನಾಡುವ ಮಂಚ

ತಮಿಳು ಮೂಲ : ಪುದುಮೈಪಿತ್ತನ್ ಅನುವಾದ : ಮಲರ್‌ವಿಳಿ ಕೆ.

ಸರ್ಕಾರೀ ಆಸ್ಪತ್ರೆಯಲ್ಲಿ ಪೂರ್ವದ ಕಡೆಯ ವಾರ್ಡ್‌ನ ಹಾಸಿಗೆಯಲ್ಲಿ, ನನ್ನ ರೋಗಕ್ಕೆ ಏನೋ ಒಂದು ಉದ್ದನೆಯ ಲ್ಯಾಟಿನ್ ಹೆಸರನ್ನು ಹೇಳಿ, ನನ್ನನ್ನು ಕರೆದುಕೊಂಡು ಹೋಗಿ ಮಲಗಿಸಿದರು.

ನನ್ನ ಇಕ್ಕೆಲಗಳಲ್ಲಿಯೂ ನನ್ನಂತೆ ಹಲವು ರೋಗಿಗಳು ಗೋಳಿಡುತ್ತಾ, ಹೂಂಗುಡುತ್ತಾ ನರಕದ ಉದಾಹರಣೆಯಂತೆ.

ಒಂದೊಂದು ಮಂಚದ ಪಕ್ಕದಲ್ಲಿಯೂ ಔಷಧಿಯನ್ನು ಗಂಜಿಯನ್ನು ಇಡಲು ಒಂದು ಚಿಕ್ಕ ಅಲಮಾರು. ಮಂಚದ ಕಂಬಿಯಲ್ಲಿ ಡಾಕ್ಟರ ಗೆಲುವು ಅಥವಾ ರೋಗದ ಗೆಲುವು ಎರಡರಲ್ಲೊಂದನ್ನು ತಿಳಿಸುವ 'ಚಾರ್ಟ್' ಎಂಬ ಚಿತ್ರ.

ಹಾಲ್'ನ ಮಧ್ಯದಲ್ಲಿ ಒಂದು ವಿದ್ಯುದ್ದೀಪ; ನಿದ್ರಿಸುವಾಗ ಕಣ್ಣುಗಳಿಗೆ ಬೆಳಕು ಚುರುಗುಟ್ಟದಂತೆ ಮಂದವಾದ ಒಂದು 'ಗಾಜಿನ ಕವಚ'.

ಅದರ ಕೆಳಗೆ ಬಿಳಿಯ ಬಣ್ಣ ಬಳಿದ ಒಂದು ಮೇಜು, ಕುರ್ಚಿ (ಆರಾಮ) ಅದರಲ್ಲಿ ಬಿಳಿವಸ್ತ್ರವನ್ನು ಧರಿಸಿದ, ಒಬ್ಬ ನರ್ಸ್ ಏನನ್ನೋ ಬರೆಯುತ್ತಿದ್ದಾಳೆ.

ಯಾವುದರ ಪರಿವೆಯೂ ಇಲ್ಲದೆ ಬೇಸತ್ತಿರುವ ಮನಸ್ಸು

ಅಯ್ಯೋ! ಮತ್ತೆ ಮರುಕಳಿಸಿದ ಆ ಹೊಟ್ಟೆನೋವು ಕರುಳನ್ನಿರಿಯುವಂತೆ ಬರುವಂತಿದೆಯಲ್ಲಾ ! ಒಂದು ಕೈಯಿಂದ ಹೊಟ್ಟೆಯನ್ನು ಅದುಮಿಟ್ಟುಕೊಂಡು ಒಂದು ಮಗ್ಗುಲಿಗೆ ತಿರುಗಿ ಮಲಗಿದೆ. ಥೀ! 'ಸ್ಪ್ರಿಂಗ್' ಮಂಚವಂತೆ !

ಏನಪ್ಪಾ ಹೀಗೆ ಒತ್ತುತ್ತಿದೆ!

ಸ್ವಲ್ಪ ಆಯಾಸ .......

"ಏನಿದು ಆಶ್ಚರ್ಯ ! ಮಂಚ ನನ್ನೊಂದಿಗೆ ಮಾತನಾಡುತ್ತಿದೆ!

"ಏನೋ ಅಪ್ಪಾ ! ನನ್ನ 'ಸ್ಪ್ರಿಂಗ್' ಗೆ ಏನು ಕೊರತೆ? ನೀನು ನಾಳೆಗೆ, ತುಂಬಾ....... ನನ್ನ ಬಳಿ ಬರುವವರನ್ನು, ಮರ್ಯಾದೆಯಿಂದ ನಾಲ್ಕು ಜನರೊಂದಿಗೆ, ಶಂಖ ಊದಿ ಅಥವಾ ವೇದಮಂತ್ರ ಸಹಿತವಾಗಿಯೇ ದೀರ್ಘ ಪ್ರಯಾಣವಾಗಿ ಕಳುಹಿಸುವುದು! ಏನು, ಅರ್ಥವಾಯಿತೆ? ನಿನಗೂ ಅದೇ ಗತಿಯೇ!"

'ಸೀಝನ್ ಡಲ್.' ನನ್ಮೇಲೆ ತಂದು ಮಲಗಿಸಿದರು. ಜೊತೇಲಿ ಸೇರು. ಪಾವು. ಚಟಾಕು. ಎಷ್ಟೊಂದು ಮಂದಿ! ಇಷ್ಟು ಸಾಲದೆಂಬಂತೆ ಇವನ ವಯಸ್ಸಾದ ಅಜ್ಜಿ. ಡಾಕ್ಟರ್ ಬಂದರು. ಬಂತು ನೋಡಿ ಕೋಪ! "ಕತ್ತೇನ್ನಾ ಹಿಡಿದು ಕೆಳಗೆ ಹಾಕು"ಎಂದು ಕಿರುಚಿದರು. ನಾನು ಬಿಟ್ಟುಬಿಡ್ತೀನಾ? ಒಂದೇ ಸಲಕ್ಕೆ ಆ ಬಾಲಕನನ್ನು 'ಕ್ಲೋಸ್' ಮಾಡಿಬಿಟ್ಟೆ!

"ಮತ್ತಿನ್ನೇನು?"

"ನಾನು ಯಾರು ಗೊತ್ತುಂಟಾ? ರ್! ಹೇಳಿ ಭಯಪಡಬೇಡ!"

ನಾನು ಒಬ್ಬ ಜೋಲಿಪಕ್ಕಿ (ಸಮತಾವಾದಿ)

"ಪ್ಲು! ಪ್ಲು! ಪ್ಲು!........."

ಮತ್ತೆ ಆ ಭಯಾನಕವಾದ ಕಂಚಿಪಲ್ಲಿನ ನಗೆ! ಯಾರೋ ನನ್ನನ್ನು ಬಂದು ಎಳಿಸಿದರು.

"ಏಕೆ ಗೊಣಗುಟ್ಟುತ್ತಿದ್ದೀಯ? ನಿದ್ರೆ ಬರುವಂತೆ ಔಷಧಿ ಕೊಡಲಾ?" ಎಂದಳು ನನ್ನ ಮೇಲೆ ಬಾಗಿಕೊಂಡಿದ್ದ ನರ್ಸ್.

ಎಲ್ಲೋ ಟಕ್. ಟಕ್. ಟಕ್ ಎಂಬ ಬೂಟ್ಸ್ ಶಬ್ದ.

ಡಾಕ್ಟ್ರೇನು?

* * *

## “Seed is wordless” Holan.

ತೆಲುಗು : ಡಾ ಕೆ. ಶಿವಾರೆಡ್ಡಿ ಅನು : ವೆಂಕಟಾಪು ಸತ್ಯಂ. ಮಾಲೂರು

ಕುರ್ಚಿಯಲ್ಲೊ, ಸೋಫಾದಲ್ಲೊ
ಗಿಡದ ಕೆಳಗೊ, ಬೆಟ್ಟದ ಮೇಲೊ,
ಬಿಸಿಲಿನಲ್ಲೊ, ಎಳೆ ಬಿಸಿಲಿನಲ್ಲೊ, ನೆರಳಿನಲ್ಲೊ
ಅವನು ಹಾಗೆ ಗಂಟೆಗಟ್ಟಲೆ ಕೂತಿರುತ್ತಾನೆ
ಕಣ್ಣು ಮುಚ್ಚಿಕೊಂಡು, ಗಲ್ಲಕ್ಕೆ ಕೈಯಾನಿಸಿಕೊಂಡು–
ಅವನು ಮನುಷ್ಯನಂತೆ ಇರುವುದಿಲ್ಲ
ಜೀವದೊಂದಿಗೆ ಇರುವಂತೆ ಕಾಣುವುದೂ ಇಲ್ಲ
ಅಂದವಾಗಿ ಮಾಡಿದ ಶಿಲ್ಪದಂತೆ–

ಅವನು ಎಲ್ಲರಿಗೂ ಪರಿಚಿತ
ಅವನು ಎಲ್ಲರ ಸ್ಮೃತಿಗಳ ಆಳದ ಒಳಗೆ ಜಾರಿ,
ಅವನು ಎಲ್ಲರಿಗೂ ಇರುವಂತೆ, ಇಲ್ಲದಂತೆ.
ಇದ್ದು ಇಲ್ಲದಂತೆ, ಇಲ್ಲದೆಯು ಇರುವಂತೆ.
ಅವನು ಮಾತನಾಡಿದ್ದು
ಯಾರೂ ಈವರೆಗೂ ಒಂದೇ ಒಂದು ಸಾರಿ ನೋಡಿಲ್ಲ.

ಮುಂದೊಂದು ದಿನ, ಒಂದು ಸಣ್ಣ ಪಕ್ಷಿ
ಅವನ ಗಡ್ಡದೊಳಗೊ, ನೆತ್ತಿ ಮೇಲೊ, ಕಣ್ಣುಗಳೊಳಗೊ
ಗೂಡು ಕಟ್ಟಿಕೊಳ್ಳುತ್ತದೆ

ಬಹುಶ; ಈ ಹೊತ್ತಿಗಾಗಲೆ ಕಟ್ಟಿದೆಯೇನೊ, ಯಾರು ನೋಡುವವರು,
ನಿಶ್ಶಬ್ದವನ್ನು ಮಾತಾಡಿಸುವುದು
ಅವನಿಂದಲೆ ಸಾಧ್ಯವಾಗುವುದು.

ನನ್ನೆದುರಿಗೆ ತಲೆತಗ್ಗಿಸಿಕೊಂಡು ಕುಳಿತು
ಭುಜಸ್ಕಂದಗಳ ಮೇಲೆ ಅಷ್ಟೊಂದು ಭಾರದಿಂದ.
ಮಾತುಗಳಿಲ್ಲ- ಮಾತುಗಳು ಸಾಕಾಗುತ್ತಿಲ್ಲ.
ಯಾರು ಕತ್ತರಿಸುವರು ದೂರವನ್ನ.
ಮುಖ್ಯವಾಗಿ ಕಾಣಿಸದ ದೂರವನ್ನ-
ನೀನು ತುಂಬಾನೆ ಹೇಳಬೇಕೆಂದು
ನಾನು ತುಂಬಾನೆ ಮಾತನಾಡಬೇಕೆಂದು
ಮಾತುಗಳು ತುಂಬಾನೆ ನಿರರ್ಥಕವಾಗಿ
ಹಸಿ ಹುಲ್ಲಿನಂತೆ ಉಳಿದ ಸಣ್ಣ ನೂಲಿನ ಅಸ್ಥಿಪಂಜರದಂತೆ-
ನಿನ್ನ ಕಣ್ಣುಗಳ ಹಿಂದೆ ಉಳಿದು ಹೋದ ಕಣ್ಣೀರ ಪರ್ವತಗಳಿರುವುದು
ನನಗೆ ಗೊತ್ತು

ನಾನು ಬಗೆ ಬಗೆಯ ಸುಡು ಕಂದಕಗಳನ್ನು ತುಳಿದಿಟ್ಟು
ನೀರುಹಾವುಗಳಂತೆ ಮಡಿಕೆಯೊಳಗೆ ಹಾಕಿ ಮೂತಿ ಬಿಗಿದು-
ಇವು ಯಾವುದು ಕಾಣಿಸದು- ಇಲ್ಲವೆಂದು ಯಾರು ಹೇಳಬಲ್ಲರು
ರೈಲೊಂದು ಹೊರಟು ಹೋದ ಮೇಲೆ ರೈಲು ಹಳಿಗಳ
ನಡುವೆ ಉಳಿದ

ಬಂದು ಮೃತ್ಯುವು; ಅವಯವಗಳೆಲ್ಲ ಕತ್ತರಿಸಿ ಬಿದ್ದು ಹೋಗಿ
'ಬದುಕೆ ಇರುವೆಯಾ' ಎನ್ನಲು ಹೋಗಿ
'ಆಫೀಸಿನಿಂದ ತಾನೆ' ಎಂದು ಕೇಳುವುದು

ನೀನು ಹೊರಡಲು ಎದ್ದುನಿಂತೆ
ಕಣ್ಣುಗಳ ನರಕಗಳನ್ನು ನೋಡಬೇಕು

ಚಿಕನ್ ಷಾಪ್‌ಗಳಲ್ಲಿ ಕೋಳಿ ತಲೆಯನ್ನು ಒಂದೇಟಗೆ ಕತ್ತರಿಸಿ
ಡಬ್ಬದೊಳಗೆ ಹಾಕಿ ಮುಚ್ಚಳ ಬಿಗಿದಂತೆ

ಪ್ರಾಣ ಹೋಗುವ ಮೊದಲು ಬಡಿದುಕೊಳ್ಳುವ ಶಬ್ದ
ನಾನು ನಿಶ್ಶಬ್ದವಾಗಿ ಕಣ್ಣೀರಿನಿಂದಲೇ ಹೋದರೆ' ಎನ್ನುವಂತೆ
ಕ್ಲೋಫೆಗೆ ರೆಕ್ಕೆಗಳಿರುವವೆ ಹೊರತು ಬಾಯಿ ಇಲ್ಲ.

ನೀನು ಹೊರಟು ಹೋಗಿರುವೆ
ಆದರೆ, ಕುರ್ಚಿಯಲ್ಲಿ ನೀನಿರುವೆ
ಇಲ್ಲದೆ ಇರುವುದು
ಒಂದು ದುಃಖಕ್ಕೆ ಮಾತ್ರ ಸಾಧ್ಯವಾಗುವುದು !
ಇಷ್ಟು ದೂರ ಬಂದ ಮೇಲೆ
ಇನ್ನು ಸ್ವಲ್ಪ ಆಳಕ್ಕೆ ಹೋಗುವುದು
ಇನ್ನು ಸ್ವಲ್ಪ ಸಮಾಧಾನದಿಂದ ಇರುವುದು
ವಸ್ತುವೊಂದನ್ನು ಅದರ ತಳದಿಂದ
ಅದರ ಅಂತಃಸತ್ವದಿಂದ ನೋಡುವುದು–
ಈಗ ಈ ಸಮಯದಲ್ಲಿ
ಅದೊಂದು ಸೌಂದರ್ಯ
ನಾನು ಮಾಡುವ ಪದ್ಧತಿಯಲ್ಲೊ. ನೋಡುವ ಪದ್ಧತಿಯಲ್ಲೊ
ನೆನ್ನೆ ಕಾಣಿಸದೆ ಇರುವುದು ಈ ದಿನ ಕಾಣಸಿಗುತ್ತದೆ.
ದಿನನಿತ್ಯ ನೋಡುವ ನಿಂಬೆಗಿಡ, ನೀಲಿ ಜೇನುಗೂಡೆ
ಆದರೂ ಈ ಹೊತ್ತು ಆದಾಗಲೆ, ಹೊಸದಾಗಿ ನೋಡುತ್ತಿರುವಂತೆ
ಒಂದು ಗಟ್ಟಿ ಮಳೆ ಬಿದ್ದು ಹೋದ ಮೇಲೆ, ಎಲೆಗಳು, ಕಾಯಿಗಳು,
ಹೂಗಳು ಒಂದು ಮಿಂಚು ತಣ್ಣಗೆ ಮಾರ್ದವವಾಗುತ್ತವೆ

ಆಕೆಯ ಕೈಯನ್ನು ನನ್ನ ಕೈಯೊಳಗೆ
ತೆಗೆದುಕೊಂಡು ನೋಡುತ್ತೇನೆ ತುಂಬಾ ಹೊತ್ತು,
ಅಸಂಖ್ಯಾತ ರಹದಾರಿಗಳಾಗಿ ಸೀಳಿ ಹೋಗಿ
ಒಂದು ಅದ್ಭುತ ಕೇಂದ್ರವನ್ನು ನೋಡಿದಂತೆ–
ಆಕೆಗೇನು ಅರ್ಥವಾಗುವುದಿಲ್ಲ
ನನ್ನ ಕಡೆಗೆ ನೋಡುತ್ತಿರುತ್ತಾಳೆ

ಆಕೆ ಕೈಯನ್ನು ಈ ಕಡೆಯಿಂದ ಆ ಕಡೆಗೆ ತಿರುಗಿಸುತ್ತೇನೆ
ಭೂಗೋಳವನ್ನು ಇತ್ತಿಂದ ಅತ್ತ ತಿರುಗಿಸಿದಂತೆ–
ಮತ್ತೆ ಮಾಮೂಲಾಗಿ ಹಿಡಿದುಕೊಂಡು ನೋಡುತ್ತಿರುತ್ತೇನೆ
ಚಿಕ್ಕಂದಿನಲ್ಲಿ ಬಾವಿಯೊಳಗಿನ ನೀರನ್ನು ಬಗ್ಗಿ ನೋಡಿದಂತೆ–
ಆಕೆ ನನ್ನ ಕಡೆಯೇ ನೋಡುತ್ತಿದ್ದರೆ– ಕೇಳಿದೆ
ಏನೂ ಇಲ್ಲ ಸುಮ್ಮನೆ ನೋಡಿದೆ– ಎಂದಳು.
ಸುಮ್ಮನೆ ನೋಡುವುದು
ಎಲ್ಲರಿಗೂ ಸಾಧ್ಯವೆ–

* * *

## ''But not everytning silent is Dead"- Holan

ತೆಲುಗು : ಡಾ ಕೆ. ಶಿವಾರೆಡ್ಡಿ    ಅನು : ವೆಂಕಬಾಪು ಸತ್ಯಂ. ಮಾಲೂರು

ಒಂದು ರೆಕೆ ತೆರೆದ ಕಿಟಕಿ ವಿಶೇಷವಾದ ವಸ್ತುವೇನೂ ಅಲ್ಲ
ಕೋಣೆಯೊಳಗಿಂದ ಕದಲದೆ ಇರುವವನಿಗೆ, ಕದಲಲಾರದ ಅವನಿಗೆ
ತೆರೆದ ಕಿಟಕಿ ಒಂದು ಪ್ರಾಣ, ಒಂದು ಕಲ್ಪನೆ, ಒಂದು ಸೃಷ್ಟಿ
ಆ ಸಣ್ಣ ಕಿಟಕಿಯಿಂದಲೆ
ಸಿಗುವ ಪ್ರಪಂಚವನ್ನು ಬಲೆಬೀಸಿ ತನ್ನೊಳಕ್ಕೆ ಸೆಳೆದುಕೊಂಡು-
ಒಂದು ಮೋಡದ ಚೂರು, ವಿಮಾನವೊಂದು ಹೊರಟು ಹೋದ
ಮೇಲೆ ಉಳಿಯುವ ಹೊಗೆ ಜಾಲ

ಇನ್ನೂ ಸ್ವಲ್ಪ ಮೇಲೆ ನೀಲಿ ನೀಲಿಯಾಗಿ ಕಾಣಿಸೊ ಆಕಾಶ ಸಮುದ್ರ
ಇನ್ನೂ ಸ್ವಲ್ಪ ಪಕ್ಕಕ್ಕೆ ಸರಿದರೆ
ಕರೆಯುತ್ತಿರುವಂತೆ ಕದಲುತ್ತಿರುವ ಗಿಡದ ಕೊಂಬೆ

ಕೊಂಬೆಗಳಲ್ಲಿ ಕದಲುತ್ತಿರುವ ಹಕ್ಕಿಗಳ ಶಬ್ದಗಳು
ತೆರೆದ ಕಿಟಕಿಯ ಬಾಗಿಲು ತುಂಬ ವಿಶಾಲವಾಗಿ ಕಾಣುತ್ತಿದ್ದರೂ
ವಿದ್ಯುತ್ ತಂತಿ, ಅದರ ಮೇಲೆ ರೆಕ್ಕೆಗಳನ್ನು ಬಾಚಿಕೊಳ್ಳುತ್ತಿರುವ ಪಾರಿವಾಳ-
ಎರಡು ಮನೆಗಳ ನಡುವೆ ಇರುವ ಪ್ರಹಾರಿ ಗೋಡೆ ಮೇಲೆ
ನಿಶ್ಶಬ್ದವಾಗಿ ಮೆತ್ತಗೆ ಪಾದಗಳನ್ನು ಒತ್ತಿ ನಡೆಯುತ್ತಿರುವ ಬಿಳಿ ಬೆಕ್ಕು
ಸ್ವಲ್ಪ ದೂರ ನಡೆದು
ಸೆಮಿಕೋಲನ್‌ನಂತೆ ನಿಂತು ಹೋಗಿ, ಮುಂದಿನ ಪಾದವನ್ನು ಎತ್ತಿ ನೋಡಿಕೊಂಡು

ಕಿಟಕಿಯೊಳಗೆ ವಿಗ್ರಹದಂತೆ ಇರುವ ನನ್ನನ್ನು ನೋಡಿ
'ಹೋಗೊ ಹೋಗು' ಎನ್ನುತ್ತ ಬಾಲವನ್ನು ಆಡಿಸುತ್ತ ಮುಂದಕ್ಕೆ ಹೋಗಿ-
ಹಕ್ಕಿಯೊ, ಬೆಕ್ಕೊ, ಕತ್ತಲೊ, ಬೆಳಕಿನ ಚೂರೊ,

ಒಣಗಿದ ತೀರದ ಉಪ್ಪು ನೀರಿನ ಮೀನೊ.
ಇವು ಈಗಿನ ನನ್ನ ಭಾಷೆ.
ನಿಧಾನವಾಗಿ ನೋಡದ ಹೊರತು ಕಾಣಸಿಗದು
ನೆನ್ನೆ ಮೊನ್ನೆಯವರಿಗೂ ನನಗೂ ಕಾಣಿಸಲಿಲ್ಲ-
ಯಾಕೆ ಅಷ್ಟೊಂದು ವೇಗ? ದಾರಿಯಲ್ಲಿ ಮನುಷ್ಯರಿರುತ್ತಾರೆ, ಗಿಡಗಳಿರುತ್ತವೆ
ಕನಸುಗಳನ್ನು ಅಂಗೈಯೊಳಗೆ ತುಂಬಿಕೊಳ್ಳುತ್ತಿರುವ ಹೆಣ್ಣುಮಕ್ಕಳಿರುತ್ತಾರೆ

ಸ್ವಲ್ಪವೆ ಬಿಸಿಲು, ಗಾಳಿಗೆ ನಡುಗುತ್ತ ಕದಲುತ್ತಿರುತ್ತದೆ ಸೇತುವೆ ಮೇಲೆ ನಿಂತ ಒಬ್ಬ ಹುಡುಗ
ಕೆಳಗೆ ಹರಿಯುತ್ತ ಹೋಗುವ ನೀರನ್ನು ತದೇಕದಿಂದ ನೋಡುತ್ತಿರುತ್ತಾನೆ ಸೇತುವೆ ಮೇಲೆ ಹೂ ಮಾರುವವನು,
ಹಸಿವಿನ ಪರಿಮಳದೊಳಗೆ ಮುಳುಗಿ ಹೋಗುತ್ತಿರುತ್ತಾನೆ
ಎಲ್ಲಾ ಏನೂ ಇಲ್ಲದೆ ಪ್ರಾರಂಭವಾಗುತ್ತದೆ
ಹುಳುವೊಂದರ ಬಾಯಿಂದ ದಾರದಂತೆ ಬರುತ್ತದೆ ಒಂದರ ಪಕ್ಕದಲ್ಲಿ ಒಂದು ಪಕ್ಷಿಗಳಂತೆ ಸೇರಿಹೋಗುತ್ತಿರುತ್ತವೆ.

ಯಾಕೆ ಅಷ್ಟೊಂದು ವೇಗ
ಮೆತ್ತಗೆ ನಡಿ, ಪ್ರಯಾಣವನ್ನು ಒಂದು ವೇಗದಲ್ಲಿ ನಿನ್ನನ್ನು ನೀನು ಕಳೆದುಕೊಳುತ್ತೀಯಾ ಕೆಲವನ್ನು
ನಿಧಾನವಾಗಿ ನೋಡದ ಹೊರತು ಕಾಣಿಸವು

ಬಾಗಿಲಗಳನ್ನು ಯಾವಾಗಲೂ ಓರೆಯಾಗಿ ತೆರೆದಿಡುವುದೆ ಒಳ್ಳೆಯದು
ಯಾವುದೊ ಒಂದು ಶಬ್ದವನ್ನು ಪಟ್ಟನೆ ನಿನ್ನ ಮನೆಯೊಳಗೆ ಹಾಕಿ ಹೋಗುತ್ತೆ
ಹೋಗುತ್ತ, ಹೋಗುತ್ತ ಪವನಕುಮಾರನು, ನಿನ್ನ
ಮನೆ ಮುಂದೆ ಬಂದು 'ಭವತಿ ಭಿಕ್ಷಾಂ ದೇಹಿ' ಎಂದು ಕೂಗಬಹುದು-

ಮನೆಯಲ್ಲಿ ಯಾರೂ ಇಲ್ಲವೆಂದು ಕಳ್ಳನೊಬ್ಬ ಬೆಳದಿಂಗಳ ಚೂರನ್ನು
ನಿರ್ಭಯವಾಗಿ ನಿನ್ನ ಮನೆಯೊಳಗೆ ಪೇರಿಸಬಹುದು ಒಂದು ದಾರಿ ತಪ್ಪಿದ ನದಿಯೂ ಕೂಡಾ
ನಿನ್ನ ಮನೆ ಬಳಸಿ ಪ್ರವಹಿಸಬಹುದು ಎಂದೂ ಬಾರದ ಅತಿಥಿಗಳು ಯಾರಾದರು
ಅಕಸ್ಮಾತ್ತಾಗಿ ಹೆಜ್ಜೆಯಿಡಬಹುದು.

ಮೆಲ್ಲಗೆ ಹೂ ಮುಡಿದುಕೊಂಡಿರುವ ಪಕ್ಕದ ಮನೆಯ
ಹದಿನಾರು ವರ್ಷದ ಹುಡುಗಿ "ಐಸೊ ಬೇಕೆಂದು" ಬಾಗಿಲು ತಟ್ಟಿದೆ ಅದೃಷ್ಟದಂತೆ
ಹೆಜ್ಜೆಯಿಡಬಹುದು.
ಬಾಗಿಲುಗಳನ್ನು ಯಾವಾಗಲೂ ಓರೆಯಾಗಿ ತೆರೆದು ಇಡುವುದೆ ಒಳ್ಳೆಯದು
ಯಾವುದೊ ಒಂದು ಒಳಗೆ ಬರುವುದೆ ಹೊರತು ಹೊರಗೆ ಹೋಗುವುದು
ಇರುವುದಿಲ್ಲ
ಅಸಲು ಯಾವುದನ್ನಾದರು ಸರಿ
ತೆರೆದು ಇಡುವುದೆ ಆರೋಗ್ಯ
ಅವರಿಬ್ಬರು ಎದುರು ಎದುರಾಗಿಯೆ ಎಲ್ಲಾ ಮರುಭೂಮಿಗಳು ಅವರಿಬ್ಬರ ಮಧ್ಯ.
ನೆರೆಮನೆಗಳನ್ನು ಹರಡಿಕೊಂಡಿರುವ ಅವರ ಕಣ್ಣುಗಳೊಳಗೆ
ನೀರ ಸೆಲೆಗಳು ಇಲ್ಲ
ಕಳೆದ ವರ್ಷ ಅವರಿಬ್ಬರ ಮೇಲೆ
ತೆಳುವಾಗಿ. ತಣ್ಣಗೆ ಬಾಗಿದ ಆಕಾಶ
ಇಂದು ಬೂದಿ ಬೂದಿಯಾಗಿ ಸುರಿಯುತ್ತದೆ.
ಅಸಲು
ಇವರಿಬ್ಬರು ಸೇರಿ. ಸ್ವಲ್ಪ ಮಣ್ಣನ್ನು ಕೂಡಿಟ್ಟು
ಒಂದು ಆಕಾರ ಕೊಟ್ಟು. ಪ್ರಾಣ ಕೊಡಬೇಕು.
ಹೋಗುತ್ತಿರುವ ಪ್ರಾಣವನ್ನು ಕೂಡಾ ಉಳಿಸಬೇಕು
ಆದರೆ
ಈಗ ಅರಿಬ್ಬರ ಮಧ್ಯೆ
ಯಾವ ಪ್ರಾಣಿ ಬದುಕುವಂತಿಲ್ಲ

ಹಡಗಿನಂತೆಯೆ ಅವನೊಬ್ಬ ಇದ್ದಾನೆ
ಚುಕ್ಕಾಣಿ ಹಿಡಿಯುವವನೊಬ್ಬನಿದ್ದಾನೆ
ಕಾಲುವೆಯೊಳಗೆ ಆಟಿಕೆಯೊಂದನ್ನು ಹಾಕಿ ಹಡಗಿನ ಮೇಲೆಯೆ
ಹಡಗಿಗೆ ಎದುರಾಗಿ ನಡೆಯುವ ಅವನೂ ಒಬ್ಬನಿದ್ದಾನೆ.

ಹಡಗು ಯಾವಾಗಲೂ ಮುಂದೂಗುವುದೆ
ಕಾಲುವೆ ಮೇಲಕ್ಕೊ ಕೆಳಕ್ಕೊ-
ಅಷ್ಟೇನಾ.
ಹಡಗಿನ ಜತೆ ತೀರದಲ್ಲಿ ನಡೆಯುವ
ನನ್ನಂತಹ ಒಬ್ಬ ಇರುತ್ತಾನೆ

ಹಡಗನ್ನು ಕಣ್ಣ ರೆಪ್ಪೆ ಮುಚ್ಚದೆ ನೋಡುವವನು ಒಬ್ಬ ಇರುತ್ತಾನೆ
ಹಡಗನ್ನು ಸದಾ ನೋಡುತ್ತ ಇದ್ದರೂ
ತೃಪ್ತಿ ಹೊಂದದ ಎರಡು ಕಾಲುವೆಗಳ ತೀರಗಳು ಇರುತ್ತವೆ,
ನಿಜ ಹೇಳಬೇಕೆಂದರೆ
ಇವೆಲ್ಲ ಇದ್ದರೆನೆ ಹಡಗಿನ ಪ್ರಯಾಣ
ಮನೆ ಮುಂದೆ ಬಾದಾಮಿ ಗಿಡ
ಇರಬಾರದೆಂದು ಹೇಳಿದರಂತೆ,
ಚೆನ್ನಾಗಿ ಮುದುಡಿ, ಸತ್ತು
ಅದೊಂದು ವಿಧದ ಮೆತ್ತಗಿನ ಕೆಂಪು ಬಣ್ಣಕ್ಕೆ ತಿರುಗಿ
ಬಾಗಿಲ ತುಂಬ ಉದುರಿದ ಬಾದಾಮಿ ಎಲೆಗಳು,
ಅಂಟಿದ  ಧೂಳನ್ನು ತೊಳೆದು
ನನ್ನ ಮುಖದ  ಎದುರಿಗಿಡಿದರೆ
ಅದರೊಳಗೂ ನನ್ನಂತಹ ಬಾದಾಮಿ ಗಿಡವೆ–
ಮನೆ ಮುಂದೆ ಬಾದಾಮಿ ಗಿಡ ಇರಬಾರದಂತೆ,
ಮತ್ತೆ
ಮನೆಯೊಳಗೆ ತಿರುಗಾಡುತ್ತಿರುವ ಬಾದಾಮಿಗಿಡವನ್ನು ಏನು
ಮಾಡುತ್ತೀಯಾ

* * *

# ಬರ್ಮಿಂಗ್‌ಹ್ಯಾಮ್ ಹಾಡು

ಡಡ್ಲೆ ರಾಂಡಾಲ್ ಅನು: ಶ್ರೀಧರ ಪಿಸ್ಸೆ

"ಆಟದ ಬದಲು ಅಮ್ಮ
ಬರ್ಮಿಂಗ್‌ಹ್ಯಾಮ್‌ನ ಬೀದಿಗಳಲ್ಲಿ
ಸ್ವಾತಂತ್ರ್ಯ ಮೆರವಣಿಗೇಲಿ
ಊರೊಳಗೆ ನಾ ಹೋಗಲೇನು?"

"ಬೇಡವೇ ಬೇಡ ಪಾಪು,
ಖಂಡಿತ ಬೇಡ. ಕ್ರೂರ ಭಯಾನಕ ನಾಯಿ
ಲಾಠಿ, ಪೈಪು, ಗನ್ನು, ಜೈಲು,
ಸಣ್ಣ ಪಾಪುವಿಗೆ ಒಳ್ಳೆಯದಲ್ಲವೆ ಅಲ್ಲ."

"ನಾನೊಬ್ಬಳೆ ಅಲ್ಲ ಕಣಮ್ಮ
ನನ್ನೊಂದಿಗಿರುವರು ಬೇರೆ ಮಕ್ಕಳು ಕೂಡ.
ಊರಿನ ಬೀದಿ ಬೀದಿಗಳಲ್ಲಿ
ನಡೆದಿದೆ ದೇಶದ ಸ್ವಾತಂತ್ರ್ಯ ಮೆರವಣಿಗೆ."

"ಬೇಡವೆ ಬೇಡ ಪಾಪು,
ಖಂಡಿತ ಬೇಡ. ಗನ್ನುಗಳ ಭಯ, ಬದಲಿಗೆ
ಹೋಗು ದೇವರ ಗುಡಿಗೆ
ಹಾಡು ಮಕ್ಕಳ ಜೊತೇಲಿ ಸಮೂಹ ಗಾನ."

ಅವಳ ಕೂದಲ ಬಾಚಿ
ಗುಲಾಬಿ ದಳದ ಸ್ನಾನ ಮಾಡಿಸಿ ತಾಯಿ

ಕಪ್ಪು ಕೈಗೆ ಬಿಳಿಗವಸು
ತೊಡಿಸಿದಳು ಕಾಲಿಗೆ ಬಿಳಿಯ ಶೂಗಳು.
ಇರುವಳು ಕಂದ ಗುಡಿಯಲ್ಲಿ
ಎಂದು ಆನಂದ ತಾಯಿಯ ಮೊಗದಲ್ಲಿ,
ಮೂಡಿತಲ್ಲ ಆ ನಗು–
ಅದು ತಾಯ ಮೊಗದಲ್ಲಿ ಕೊನೇ ನಗು.

ಸ್ಫೋಟ ಕೇಳಿತು ತಾಯಿಗೆ
ನೀರಾಡಿತು ಕಣ್ಣು, ಸರ್ರನೆ ಮಿಂಚಿತು ಕ್ರೌರ್ಯ
ತನ್ನ ಕಂದನ ಕರೆಯುತ್ತ
ಓಡಿದಳು ಬರ್ಮಿಂಗ್‌ಹ್ಯಾಮ್ ಬೀದಿಗಳಲ್ಲಿ

ಕೆದಕಿತು ಕೈಯ್ಯಿ
ಗಾಜು, ಇಟ್ಟಿಗೆ ನಂತರ ಎತ್ತಿತು ಶೂ
"ಪಾಪು ಹಾಕ್ಕೊಂಡಿದ್ದು–
ಅಯ್ಯೊ ಪಾಪು. ನೀನೆಲ್ಲಿದ್ದೀಯೆ?"

* * *

# ಸುಟ್ಟುಹಾಕಿ

ಬೆರ್ಟೋಲ್ಟ್ ಬ್ರೆಕ್ಟ್ ಅನು : ಶ್ರೀಧರ ಪಿಸ್ಸೆ

ಸುಡಬೇಕು ಕೆಟ್ಟ ಉಪದೇಶದ ಪುಸ್ತಕಗಳು ಬಹಿರಂಗ ಸ್ಥಳದಲ್ಲಿ
ಹೀಗೆ ಆದೇಶ ಹೊರಡಿಸಿದಾಗ ರಾಜಸತ್ತೆ

ಎಳೆಯತೊಡಗಿದವು ಎತ್ತುಗಳು ಎಳೆಯಲಾರದೆ ಎಲ್ಲೆಲ್ಲೂ
ಪುಸ್ತಕ ತುಂಬಿದ ಬಂಡಿಗಳನ್ನು ಧಗಧಗಿಸುವ ಚಿತೆಯ ಬೆಂಕಿಗೆ.
ಬಹಿಷ್ಕೃತ ಕವಿ ಸಿಟ್ಟಿನಲ್ಲಿ ಓದುತ್ತಿದ್ದಾಗ ಸುಡುವ ಪುಸ್ತಕಗಳ ಪಟ್ಟಿ
ಪತ್ತೆ ಹಚ್ಚಿದ ತನ್ನ ಅತ್ಯುತ್ತಮ ಪುಸ್ತಕ ಮರೆತು ಬಿಟ್ಟಿದ್ದನ್ನು.

ಕೋಪದ ರೆಕ್ಕೆ ಬಡಿದು. ಬರೆವ ಮೇಜಿಗೆ ಧಾವಿಸಿ ಬಂದು
ವೇಗದಲ್ಲಿ ಹರಿಯುವ ಪೆನ್ನಿನಲ್ಲಿ
ಬರೆಯತೊಡಗಿದ ಪತ್ರ ಗದ್ದುಗೆಯಲ್ಲಿ ಇದ್ದವರಿಗೆ–
ಸುಟ್ಟು ಹಾಕಿ. ನನ್ನನ್ನು ಸುಟ್ಟು ಹಾಕಿ.

ಬಿಡಬೇಡಿ ಬಿಟ್ಟು ಬಿಡಬೇಡಿ. ಇದೇ ರೀತಿ ನಡೆಸಿಕೊಳ್ಳಿ.
ಸದಾ ಸತ್ಯ ನುಡಿದಿಲ್ಲವೆ ನಾನು ಪುಸ್ತಕದಲ್ಲಿ?
ನಡೆಸಿಕೊಳ್ಳಿ ಸುಳ್ಳುಗಾರನ ಹಾಗೆ. ಇದು ನನ್ನ ಆದೇಶ–
ನನ್ನನ್ನು ಸುಟ್ಟು ಹಾಕಿ!

* * *

## ‘ಸ’ ಅಂದರೆ ಸರ್ಪ

ಹಿಂದಿ ಮೂಲ : ಸಚ್ಚಿದಾನಂದ ಸಿನ್ಹಾ                ಅನು : ಡಾ.ಟಿ.ಜಿ.ಪ್ರಭಾಶಂಕರ ‘ಪ್ರೇಮಿ’

ಬಾಲ್ಯದಲ್ಲಿ ‘ಸ’ ಅಂದರೆ ಸರ್ಪ
ಎಂದು ಓದಿದ್ದೆ
ಪುಸ್ತಕದೊಂದು ಪುಟ
‘ಸ’ ಅಂದರೆ ಸರ್ಪ ಅನ್ನುವುದನ್ನು
ಕಾಪಾಡಿಕೊಳ್ಳುವುದ ಕಂಡೆ
ಸರ್ಪ ತನ್ನಾಶ್ರಯಿಸಿದವರ ಕಚ್ಚುವುದಿಲ್ಲ;
ಕಾಗದ, ಧರಣಿ ಅದರಿಂದ ಆಶ್ವಸ್ತರು

ಹೊಂಬಿಸಿಲ ರೇಶ್ಮೀ ಚಮತ್ಕಾರ
ಅದರ ನುಣುಪನ್ನು
ಬಣ್ಣಗಳ ಭವಿಷ್ಯದ ನಿರ್ಝರವನ್ನಾಗಿಸುತ್ತದೆ
ತಾರತಮ್ಯತೆ ಹೊದಿಕೆಯಿಂದ
ಸಂಕೇತ ಪಡೆಯುತ್ತವೆ ಪತಂಗಗಳು
ಅಥವಾ ಪೈಂಜೀಸ್!

ಆಮೇಲೆ
‘ಇದನ್ನು ಹಗ್ಗ ಎನ್ನು’ ಎಂದೂ ಹೇಳಲಾಯಿತು
ಅಂದಿನಿಂದ ಹಗ್ಗಗಳು
ಹಾದಿ ಬೆಕ್ಕಿನಂತೆ ಅಡ್ಡ ಹಾದಾಗಲೆಲ್ಲಾ
ಅಥವಾ
ಅಪಕ್ವ ವರ್ತಮಾನದಂತೆ
ನಮ್ಮ ಜೀವನವನ್ನು
ಭೂತ ಭವಿಷ್ಯತ್ತುಗಳಲ್ಲಿ ವಿಂಗಡಿಸಿದಾಗೆಲ್ಲಾ

ಅಥವಾ
ಕುಂಡಲಿನಿಯಾಕಾರದಲ್ಲಿ
ಯಾವುದೋ ಅಕಲ್ಪಿತ ಅಕಲ್ಪನೀಯತೆಯ ಕಡೆಗೆ
ತಿರುವಿದಾಗಲೆಲ್ಲಾ
ಸರ್ಪ ನೆನಪಿಗೆ ಬರುತ್ತದೆ.

ಸರ್ಪವನ್ನು
ಸರ್ಪವೆನ್ನುವುದನ್ನು ಬಿಟ್ಟು ಬಿಟ್ಟೆ
ಆದರೆ
ಹಗ್ಗ ಹಾವಂತೆ ಕಾಣುವುದು
ಇಡೀ ಚೈತನ್ಯದಲ್ಲಿ ಆವರಿಸಿ ಬಿಟ್ಟಿದೆ
ಮೌಲಿಕವಾದುದು ಅಲೌಕಿಕ
ಮೌಲಿಕದ ಪ್ರತಿರೂಪ, ನಿರ್ದೋಷವೊಂದು
ಚೇತನ್ಯವ ಕಚ್ಚಿದಂತೆ–
ಮತ್ತೆ ಮತ್ತೊಮ್ಮೆ
ಮನುಷ್ಯ ತನ್ನದೇ ನಿರ್ಮಿತ ಜಾಲದಲ್ಲಿ
ವಿನಾ ಕಾರಣ ಸಿಕ್ಕಿಕೊಳ್ಳುತ್ತಾನೆ.

ಹೀಗೇಕೆ?
ನಾವು ಒಂದು ವಸ್ತುವಿಗೆ ಹೆಸರಿಟ್ಟು
ಹೆಮ್ಮೆ ಪಡುತ್ತೇವೆ
ಆದರೆ ಅದನ್ನು
ಅದೇ ಹೆಸರಿನಿಂದ ಕರೆಯುವುದಿಲ್ಲ
ಅದು
ಈ ಕವಿತೆಯ ನಾಯಕ 'ಸರ್ಪ' ಆಗಿರಬಹುದು
ಅಥವಾ
ಇರಬಹುದು
ಈಶ್ವರನ ಕವಿತೆಯೋ
ಜೀವನದ ನಾಯಕ – ಮೃತ್ಯುವೋ?
ಕತ್ತಲ ದೇಹ
ಕೃತ್ರಿಮ ಅಲಂಕಾರ ಮಾಡಿಕೊಳ್ಳಲೆಂದು
ನಾವೇಕೆ ರಶ್ಮಿಗಳ ರಚಿಸುತ್ತೇವೆ?

ತನ್ನ ಆ ವ್ಯಕ್ತಿ ಪರವಾದ ಸೌಂದರ್ಯ
ಪ್ರತಿಯೊಂದಕ್ಕೂ ಹೆಸರು ಕೊಡುವ ಕ್ರಿಯೆ
ಇಂದಿಗೂ ನಡೆದಿರುವಾಗ
ನಾವೇಕೆ
ಪ್ರತಿ ಹೆಸರನ್ನು ಶಿಲೆಯಲ್ಲಿ ಕೆತ್ತಲವಕಾಶ
ಕೊಡುವುದಿಲ್ಲ?
ಸಂಭವತಃ
ಇಂಥಾ ಆಟದಲ್ಲಿ ನಾವು
ಒಂದು ಬಗೆಯ ಸೌಂದರ್ಯ
ಒಂದು ವಸ್ತು ಶತ ಆತ್ಮಗಳಲ್ಲಿ
ಪ್ರತಿಷ್ಠಿಸುವ  ಅಕ್ಷಯ ಉನ್ಮೇಷವನ್ನು
ಪಡೆಯುತ್ತೇವೆ
ನಮಗೆ ದೊರಕಿದಂತಾಗುತ್ತದೆ
ಶತ ಸೃಷ್ಟಿಗಳ ಸತ್ಯಂ-ಶಿವಂ

ಅಥವಾ
ಸಂಭವತಃ
ಯಾವುದೋ ಸಂಬಂಧ ವಾಚಕ ಸ್ಥಿತಿಯಲ್ಲಿ
ಒಮ್ಮೆ ಮನಸ್ಸಿನಲ್ಲಿ ನೆಟ್ಟಿದ್ದನ್ನು
ಕಿತ್ತೆಸೆಯಲಾಗುವುದಿಲ್ಲ
ಏಕೆಂದರೆ
ಅನೇಕ ಸ್ಥಿತಿಗಳ ಪರಿಕಲ್ಪನೆಗಳಲ್ಲಿ
ಆ-ಹಗ್ಗ-ದಂತಹ ಸಂಬಂಧದಿಂದ
ಎಷ್ಟೋ ತಿಮಿರವಾಚಕದ ಮನದ ಹಾದಿಗಳಿಗೆ
ಸಿಗುತ್ತದೆ
ಒಂದರಿಂದೊಂದು ಹೊಸರಸ!

* * *

## ಸತ್ಯಕಾಮ ಜಾಬಾಲಿ

ಹಿಂದೀ ಮೂಲ : ಸಚ್ಚಿದಾನಂದ ಸಿನ್ಹಾ ಅನು : ಡಾ.ಟಿ.ಜಿ.ಪ್ರಭಾಶಂಕರ 'ಪ್ರೇಮಿ'

ಒಂದು ಪಕ್ಷಿಯ ಸತ್ಯ
ಸಾಗರದ ಸತ್ಯಕ್ಕಿಂತ ಭಿನ್ನವೆಂದೇನಲ್ಲ
ಅಲೆಗಳಲ್ಲಿ ಅದರ ಭಿನ್ನವಾಗುವ ಬಿಂಬ
ಒಮ್ಮೆ ಎಲ್ಲ ನೋಟಗಳನ್ನ ಮರೆಮಾಡುತ್ತ
ಅದರ ಅಥವಾ ಎಲ್ಲರ ಹಣೆಬರಹವಲ್ಲಿ!

ಒಂದು ಪಕ್ಷಿಯ ಸತ್ಯ
ಮೇಲಿಟ್ಟುಕೊಳ್ಳುವುದು ಆಕಾಶ ಎಂದೇನಿಲ್ಲ; ನಾನಿಡುವೆ
ಜೋಪಾನ
ಕೆಳಗಿಟ್ಟುಕೊಳ್ಳುವುದು ಸಾಗರ; ನಾನಿಡುವೆ ಪ್ರವಾಹದಲಿ
ಅಥವಾ ಭೂಮಿಯ ಒಂದು ಮೂಲೆಯಲಿ
ತಾನು ಕೇವಲ ಒಂದು ಪ್ರತೀಕವಾಗಿ
ಇರಬಯಸುತ್ತದೆ.

ಒಂದು ಪಕ್ಷಿಯ ಸತ್ಯ
ಒಬ್ಬ ಕವಿ ಗುರುತಿಸುವ ಎಂದೇನಲ್ಲ
ಅದರೊಳಗೆ ಪೂರ ಇಣುಕಿ ಬಿಡುವ
ಒಬ್ಬ ಚಿತ್ರಗಾರ, ಒಬ್ಬ ತತ್ವಜ್ಞಾನಿ
ಅದರೊಳಗಿನ ಬಣ್ಣದ ಅರ್ಥಛಾಯೆಯನ್ನು ತಿಳಿವ
ಇಲ್ಲಾ ಹಂಚಿಬಿಡುವ ಎಲ್ಲವನ್ನು ಕಳೆದುಕೊಂಡವಗೆ
ಸ್ವತಃ ಜೀವನದ ಒಂದು ದಡವಾಗಿ
ಗೆದ್ದವರನೆಂದೂ ಕೇಳಲಿಲ್ಲ
ಎಲ್ಲಿ–ಯಾರು ಸೋತರು ಎಂದು?

ಒಂದು ಪಕ್ಷಿಯ ಸತ್ಯ
ಅದರ ಕೊಕ್ಕಿನಲ್ಲಿದೆ ಎಂದೇನಲ್ಲ
ಆಕಾಶ ನಿರೀಕ್ಷೆಯಲ್ಲಿದೆ
ಯಾವಾಗ ತನ್ನುಸಿರ ತೆಕ್ಕೆಗೆ ತೆಗೆದುಕೊಳ್ಳಲಿ
ಮತ್ತೊಂದು ಸ್ನೇಹದ ಕಾಣಿಕೆಯಾಗಿ ಕೊಡಲಿ
ಪಕ್ಷಿ ಹಾರುತ್ತಲೇ ಇರುತ್ತದೆ
ಸತ್ಯ ಕೂಡ ಗತಿಶೀಲ
ಪಕ್ಷಿ ಮತ್ತೆ ಮತ್ತೊಂದು ಸತ್ಯವ ಕೊಂಡೊಯ್ಯುವುದು
ಅದರಿಂದ ಆಕಾಶದುತ್ಸಾಹ ಮತ್ತೆ ಉಕ್ಕುವುದು

ಅಥವಾ ಅದರ ರೆಕ್ಕೆಗಳ ಮೇಲೆ
ಮರದೆಲೆಗಳು ಬಿದ್ದರೆ
ಎಲೆಗಳ ಅಂಗೈಯಲ್ಲೇ
ರೆಂಬೆಗಳು ಬೆಳೆದು ಹೂ ಉಬ್ಬಬಹುದು ವೈಯಾರದಿ
ಮತ್ತೆ ಭೂಮಿಯ ಉಸಿರು ಉಬ್ಬಬಹುದು
ಭೂಮಿಯಲ್ಲಿ, ಭೂಮಿಯ ಅವಲೋಕನದಲಿ

ಒಂದು ಪದರ, ಒಂದು ಬಿಂಬ, ಒಂದು ಸ್ನೇಹ
ಒಂದು ಸ್ತುತಿ, ಒಂದು ಅಲೆ, ಒಂದು ಜಾವ
ಒಂದು ಒಂದು, ಎರಡಾಗಿ, ಒಂದು ಮೂರಾಗಿ
ಒಂದು ನಾಲ್ಕಾಗಿ, ಒಂದು ಐದಾಗಿ, ಒಂದು ಏಳಾಗಿ
ಉಪಶಬ್ದಕ್ಕೆ ಶಬ್ದಕೊಡಲಿ
ಜ್ಯೋತಿಗೆ ಪುರಸ್ಕರಿಸಲಿ

ತನ್ನ ಗುರುತಿನ
ತನ್ನ ವಿವೇಕದ
ನಡೆಸಿತು ಹಾರಾಟ ಎಲ್ಲಿಂದೆಲ್ಲಿಯವರೆಗೆ
ಎಲ್ಲ ಗುರುತು, ಎಲ್ಲ ವಿವೇಕ, ಎಲ್ಲ ಒಗ್ಗೂಡಿಸಿ
ನಡೆಸಿತು ಅಭಿಯಾನ

ಅಥವಾ ಸತ್ಯ ಅದರ ಕಾಲೊಳಗಿದೆ
ಸಾಗರದಲಿ ನರ್ತಿಸುತ

ಅಲೆಗಳು ಅನುಗ್ರಹಿತ
ಚಲಾವಣೆಯಲ್ಲಿಲ್ಲದ ಶಬ್ದಗಳು
ಚಲಾವಣೆಗೊಳ್ಳುವುವು
ಎಂದೂ ಸದಾ ಹತ್ತಿರ ಹತ್ತಿರವಾಗಿ
ತನ್ನವಾಗಿ ತನ್ನೊಳಗೆ
ಓತವಾಗಿ ಸಿತ್ಯವಾಗಿ ನಲಿಯುತ್ತವೆ
ಅಥವಾ ಕಾಲ್ಗಳ ಸ್ಥಿತಿ! ಎಂದರೆ
ಕಾಲ್ಗಳು ಸಾಗರ
ಕಾಲ್ಗಳು ಆಕಾಶ
ಭೂಮಿ
ಲೋಚನ ಕೀರ್ತಿ

ಒಂದು ಪಕ್ಷಿಯ ಸತ್ಯ
ಸತ್ಯ ಒಂದು ಪಕ್ಷಿಯದು ಎಂದೇನಲ್ಲ
ಪಕ್ಷಿ
ಪಕ್ಷಿಯದೆಂದೇನಲ್ಲ
ಆಗುತ್ತದೆ, ಆಗುತ್ತದೆ ಎಂದೇನಲ್ಲ...
ಇರಬಹುದು

ಒಂದು ಪಕ್ಷಿಯ ಸತ್ಯ
ಸತ್ಯ ಕಾಮ ಜಾಬಾಲಿ
ಕಬೀರನ ಹಿಡಿದ ಪಂಜು
ಜೀವನ ಸದಾ ಪರೀಕ್ಷೆಗೆ ಅರ್ಹ ಕೇಂದ್ರಸ್ಥಾನ
ಜೀವನ ಅದರಲ್ಲೆ ವಿದ್ಯಮಾನ, ಆಯುಷ್ಯಮಾನ
ಅದರ ಆಯಾಮ ವಿಶಾಲ ಕರ್ಮರತ
ಸತ್ಯದ
ಸತ್ಯ,
ಸತ್ಯ.

* * *

# ಅಮ್ಮ ಸುಟ್ಟ ರೊಟ್ಟಿ

ಎ.ಹರಿನಾಥ ಬಾಬು, ಸಿರಗುಪ್ಪ

ಅಮ್ಮ
ಬೆಳಗೆದ್ದು
ರೊಟ್ಟಿ ಸುಡುವದೆಂದರೆ
ನಮಗೆ ಪಂಚಪ್ರಾಣ.

ಕತ್ತಲು ತುಂಬಿದ ಗುಡಿಸಲಿಗೆ
ಒಲೆಯ ಬೆಂಕಿಯೇ ಬೆಳಕು.
ಸುಟ್ಟು ಸುಟ್ಟು ಕಠ್ರಗಾದ
ಬಿಳಿ ಮೂರು ಕಲ್ಲು
ಮೇಲೊಂದು ಕರಿ ಕರಿ ಹಂಚು
ಹಸಿ ಜಾಲಿ ಮುಳ್ಳು
ಕಟ್ಟಿಗೆಯ ಒಟ್ಟಿ ಒಲೆಯೊಳಗೆ
ಹೊಗೆಯೊಳಗೆ ಉಸಿರು ಕಟ್ಟಿ
ಮನೆಯೊಳಗೆ
ಉಸಿರೆರೆದವಳು.

ಅಮ್ಮ, ಕಾಲು ಒಲೆಯೊಳಗಿಟ್ಟು ಸುಟ್ಟ
ಬಿಸಿ ಬಿಸಿ ರೊಟ್ಟಿ.

ರೊಟ್ಟಿ ಕೋಣಿಗೆಯಲಿ ಹಿಟ್ಟರವಿ
ಆಸೆಯ ಒಡ್ಡು ಕಟ್ಟಿ
ಹಗಲೆಲ್ಲ ದುಡಿದ ಮೈ ಬಸಿದ ಬೆವರಂತೆ
ಹದಕೆ ಕಾಯಿಸಿದ ಎಸರು ಸುರುವಿ
ಒರಟೊರಟ ಕೈಯಿಲೆ
ಮೆತ್ತ ಮೆತ್ತಗೆ ಕಲಿಸಿ
ಗಾಲಿಯಂಗೆ ಗುಂಡಗೆ ಸುಣ್ಣನೆಯ

ಮೂರ್ತಿ ಮಾಡಿದವಳು.
ಅಮ್ಮ, ಕೈಯ್ಯಿ ಒಲೆಯೊಳಗಿಟ್ಟು ಸುಟ್ಟ
ಬಿಸಿ ಬಿಸಿ ರೊಟ್ಟಿ.
ಎದೆಯ ತುಡಿತಗಳ ಬಡಿತ
ಹದವಾಗಿ ಮೆದುವಾಗಿ
ಲಯಬದ್ಧವಾಗಿ ಹಿಟ್ಟ
ತಟ್ಟಿದರೆ ದುಂಡ ದುಂಡಗೆ
ರೊಟ್ಟಿ ಹುಣ್ಣಿಮೆಯ ಚಂದಿರ
ಕಾದ ಕರಿ ಹಂಚಿನ ಮೇಲೆ
ಆಕಡೀಕಡೆ ಸುಟ್ಟು
ಹೊಟ್ಟೆಗಿಟ್ಟು
ರಟ್ಟೆಗೆ ಬಲವ ಕೊಟ್ಟವಳು.

ಅಮ್ಮ, ಮೈಯ್ಯಿ ಒಲೆಯೊಳಗಿಟ್ಟು ಸುಟ್ಟ
ಬಿಸಿ ಬಿಸಿ ರೊಟ್ಟಿ.

ಜೀವ ಜೀವದ ಸಾರ
ಕುಸಿವೆಣ್ಣೆ ಒಣ ಖಾರ
ಈರುಳ್ಳಿ ಹಸಿಮೆಣಸು
ಬೆಳ್ಳುಳ್ಳಿ ಉಂಚೆ ತೊಕ್ಕು
ದಿನಕೊಂದು ಹೊಸ ರುಚಿಯು
ರೊಟ್ಟಿಯೊಳಗೇ ಸುತ್ತಿ
ಉಣಬಡಿಸಿ
ಸುತ್ತೇಳು ಲೋಕವ ತೋರಿದವಳು.

ಅಮ್ಮ, ಜೀವ ಒಲೆಯೊಳಗಿಟ್ಟು ಸುಟ್ಟ
ಬಿಸಿ ಬಿಸಿ ರೊಟ್ಟಿ.

ಕಟ್ಟಿಗೆಯೊಟ್ಟಿಗೆ ಸುಟ್ಟು
ಹೊಗೆಯೊಳಗೇ ಕುದ್ದು
ಹೆಂಚಂತೆ ಕಾದು
ರೊಟ್ಟಿಯಾಗಿ ಬೆಂದ
ಒಲೆಯ ಮುಂದಿನ ಅಮ್ಮನ ಮುಖ
ನಿಗಿ ನಿಗಿ ಕೆಂಡ!

* * *

## ವಿಚಾರವಾದಿ

ಬಾ.ಹ. ರಮಾಕುಮಾರಿ

ನಾನು ಮರವಾದರೆ
ಮನ ತುಂಬಾ ಚಿಗುರು ಎಲೆಗಳ ಹೊದ್ದು ಮೈ
ಬರುತ್ತಾನೆ ಅವನು
ಚಿಗುರು ಅಲ್ಲಿರಬಾರದು
ಎಲೆಗಳು ಇಲ್ಲಿರಬಾರದು
ಎಂದು ಕಿತ್ತು ಅಂಟಿಸತೊಡಗುತ್ತಾನೆ
ತನಗೆ ಬೇಕಾದಂತೆ.
ನೀವು ಮರವಾಗುವುದಾದರೆ
ಹೇಳಿಬಿಡಿ ಅವನು
ಸನಿಹ ಸುಳಿಯದಂತೆ
ಕಿತ್ತ ಎಲೆ, ಚಿಗುರುಗಳ ಮತ್ತೆ
ಅಂಟಿಸಲಾಗುವುದಿಲ್ಲವೆಂದು.

* * *

# ಸ್ವಾರ್ಥ

ಬಾ.ಹ. ರಮಾಕುಮಾರಿ

ದೀಪಕ್ಕೆ ಎಣ್ಣೆ ಬತ್ತಿ ಹಾಕಿ
ಬೆಂಕಿಕಡ್ಡಿ ಗೀರಿ ದೀಪಹಚ್ಚಿ
ಉರಿಯಬೇಡ ಎಂದರೆ
ಕೇಳೀತೆ! ಅದಕ್ಕೇ
ಮನುಷ್ಯ ಕಲಿತಿದ್ದಾನೆ
ದೀಪಕ್ಕೆ ಎಣ್ಣೆ ಹಾಕಿದರೆ
ಬತ್ತಿ ಹಾಕದಿರುವುದನ್ನೂ
ಎಣ್ಣೆ ಬತ್ತಿ ಎರಡೂ ಇದ್ದರೆ
ಬೆಂಕಿಕಡ್ಡಿ ಗೀರದಿರುವುದನ್ನೂ
ಯಾದರೂ ಬೆಂಕಿ ಹೊತ್ತಿಸಿದ್ದಲ್ಲಿ
ದೀಪ ಕೆಡಿಸುವುದನ್ನೂ.

* * *

## ಗಿಡ ಕಡಿದು ಕಾಡು ಬೆಳೆಸಿ

**ಬಾ.ಹ.ರಮಾಕುಮಾರಿ**

ಗಿಡ ನೆಡಿ ಕಾಡು ಬೆಳೆಸಿ
ಕಾಡಿದ್ದರೆ ನಾಡು ಮಳೆ ಬೆಳೆ
ಹೇಳಿದ್ದೇ ಹೇಳಿದ್ದು- ಕಡಿದದ್ದೇ ಕಡಿದದ್ದು.
ಕಾಡಿ ಗುಡ್ಡ. ಕಾಡು ಕಡಿದು ಬರಿದಾಯಿತು
ಮಳೆ ಹೋಯಿತು ಏನೂ ಬೆಳೆಯದಾಯಿತು
ಗುಡ್ಡಕ್ಕೆ ಕೈ ಹಾಕಿದ್ದಾಯಿತು ತೋಡಿ ತೋಡಿ
ಮಣ್ಣು ನೆಲ ಬರಿದಾಯಿತು
ಮಣ್ಣು ಮಾರಿಕೊಂಡಾಯಿತು ಗಾಳಿ ತೂರಿ ಹೋಯಿತು
ನಮ್ಮ ಬುದ್ಧಿಯ ಕೊಳಕು ತೊಳೆಯಲಿಲ್ಲ
ಮನದ ಮಲಿನ ಕಳೆಯಲಿಲ್ಲ.
ವಸುಂಧರೆಯ ಗರ್ಭ ಬಗೆದಿದ್ದೇವೆ
ಬಿಡುಗಡೆಯಿಲ್ಲ ನಮಗೆ ಮಾಡಬಾರದ ಕರ್ಮಕ್ಕೆ
ಗಿಡ ನೆಡುತ್ತೇವೆ ನೀರು ಹನಿಸುತ್ತೇವೆ
ನಮ್ಮ ಕೈಯ ಕೊಳೆ ಹತ್ತಿ ನೀರು ಮಲಿನ
ಗಿಡ ಬೆಳೆಯುವುದಿಲ್ಲ ಮನುಷ್ಯನ
ಕೈಯ ಕೊಳೆ ಮನದ ಮಲಿನತೆಯ ಮೈಲಿಗೆ ಹತ್ತಿ
ಕಾಡಿನಲ್ಲೆಲ್ಲೋ ಯಾರೂ ನೆಡುವುದಿಲ್ಲ ಗಿಡ
ನೀರು ಹಾಕುವುದಿಲ್ಲ ಆದರೂ
ಬೆಳೆಯುತ್ತವೆ ಒಳ-ಹೊರಗೊಂದಾಗಿ
ಕ್ರೂರ ಮೃಗಮಾನ ಅಲ್ಲಿಗೂ
ಧಾವಿಸುತ್ತಾನೆ ಹಗಲಲ್ಲಿ ಕೊಡಲಿ ಹೊತ್ತು
ಮತ್ತೆ ಮತ್ತೆ ಪಠಿಸುತ್ತ-
ಗಿಡ ನೆಡಿ.... ಗಿಡ ನೆಡಿ ಮನೆಯ
ಮುಂದೊಂದು ಗಿಡ ನೆಡಿ ಎಂದೆನುತ.

* * *

# ಆದಿಮ

ಲಲಿತಾ ಸಿದ್ಧಬಸವಯ್ಯ

ಏಳು  ಬೆಟ್ಟದ ಮೇಲೆ ಏಳುಹಳ್ಳಿ, ಅಲ್ಲೊಂದು 'ಆದಿಮ'
ದೇವರಿಲ್ಲದ ಗುಡಿಗೆ ಬಂದು ಹೋಗುವ ಮಂದಿ ಕಟ್ಟಿ
ಕೊಂಡೊಯ್ಯಬಹುದು ಇಷ್ಟಾನುಸಾರ ಆಹ್ಲಾದಕ

ಬೂದುಬಣ್ಣದ ಬಂಡೆ  ಬಯಲಸೀಮೆಯ ಪಚ್ಚೆ
ಹುಯ್ದ ಕದರಿನಸಾಲೆ ನೆಯ್ದ ಕಾಸೆಯ ಸೂರು
ಆಳ್ವ ಅರಸರ ಅಂಕೆ-ಶಂಕೆಯಿರದಂಥ ಸ್ವಚ್ಛ ಮುಗಿಲು

ಸೂರ್ಯ ಚಂದ್ರರಿಗೆ ತುಂಬುಸ್ವಾತಂತ್ರ್ಯ ಪಂಚಭೂತಗಳಿಗೆ
ಎಡೆ ಹಾಡು, ಹಸೆ, ಪದ, ಅಕ್ಷರದ ಅಡುಗೆ
ನಡುವೆ ಪೂಜಾರಿಯಿರದ ಶೀಘ್ರ ಫಲ ಪೂಜೆ

ಸುತ್ತುಬಳಸಿನ ಹಾದಿ ಹತ್ತಿ ಬನ್ನಿ ಬರುವಾಗ ಹಳೆ
ಕಾಯಿಲೆಗಳ ಕೆಳಗಿಟ್ಟು ಬನ್ನಿ, ಇಲ್ಲಿರುವಷ್ಟು ಹೊತ್ತು
ಪೂರ್ವಜನ್ಮವ ಮರೆತು ಈ ದಿನವ ಮಾತ್ರ ಬದುಕ

* * *

# ಚಪ್ಗೋಡು

ಡಾ. ಎಂ.ಎಸ್.ಶೇಖರ

ಭಯ
ಭಯ, ಭಯ
ನನ್ನುಟ್ಟೂರೆಂದರೆ ಇನ್ನಿಲ್ಲದ ಭಯ
ಚೆಡ್ಡಿ ಲಾಡಿ ಕಟ್ಟಲು ಭಾರದ
ಗೊಣ್ಣೆ ಮುಸುರೆ ತೆಗೆಯಲು ಬಾರದ
ಪಟೇಲನ ಎಳೆಯ ಪೋರ
ಶತಾಯುಷಿ ನನ್ನಜ್ಜನನ್ನು
ಕರೆವ ಪರಿಯ ಕರ್ಕಶ ಧ್ವನಿ
ನನ್ನ ಕಿವಿಯೆಡೆಗೆ ಬಿದ್ದೀತೆಂಬ ಭಯ

ಬಸ್ಸಿಳಿದು ಚಪ್ಗೋಡ ದಾಟಿ
ಊರ ಓಣಿಯಲಿ ಹಾದು ಹೋಗುವಾಗ
ನಗರದಲಿ ಯಾರೂ ಕ್ಯಾಬಿನ್ಯೆ ಅನ್ನದ
ನನ್ನ ಡ್ರೆಸ್ಸು ಮೇಲುಕೇರಿಯ ಪೋರಿಗಳ ಕಣ್ಣು ಕುಕ್ಕಿ
ಓ... ಇವ್ನ ಮಗ ಅಲ್ವಾ..!
ಎಂಬ ಬಿಂಕದೋರೆ ನೋಟಕ್ಕೆ ಉರಿದೋದೆನೆಂಬ ಭಯ

ದಸಂಸದ ಹೆಡ್ಬಾಸ್ ಚೆಲುವತ್ಯಾಗಪ್ಪೋರು
ಏನೇ ರಸಭರಿತ ಭಾಷಣ ಜಡಿದರೂ
ಅದ ತನ್ನಂಡಿಗೆ ಸೀಟೆಸೆದು ನಮಗೆಲ್ಲ ನೀರಿಳಿಸಿ
ಊರೊಳ್ಗೆ ಇಕ್ಕಿಸಿಕೊಂಡು ಬರುವ
ಎಲೆ ಅಡಿಕೆ ನವರಸಮ್ಮನ
ಭಂಗಿ ಕಂಡೀತೆಂಬ ಭಯ

ಬೇಡ, ಊರ ಸಹವಾಸವೇ
ಬೇಡೆಂದು, ಲಕ್ಷಾಂತರ ಕ್ಯೂಸಲ್ಲಿರುವ
ಬಿಡಿದರ ಮುವತ್ತು- ನಲವತ್ತಕ್ಕೆ
ಅರ್ಜಿ ಗುಜರಾಯಿಸಿ ಕೂತು ತೂಕಡಿಸುತ್ತಿರುವೆ
ಭಯಮುಕ್ತಿಗಾಗಿ ಬುದ್ಧ ಗುರುವಿನ ನೆನಪಿನಲ್ಲಿ

* * *

## ಜಲಗಾರ್ತಿ

ಎಂ. ಎಸ್. ಶೇಖರ

ಕೈತುಂಬ ಬಳೆ ಹಣೆಗೆ
ತುಂಬಿದುಣ್ಣಿಮೆಯ ಚಂದ್ರಕುಂಕುಮ
ಕೊರಳಲಿ ಮಧ್ಯೆ ಮಧ್ಯೆ
ಗುಂಡುಪೋಣಿಸಿರುವ ಕರಿಮಣಿಸರ
ಮಹಾಕವಿಪಂಪನ ಕದಳಿಗರ್ಭಬಣ್ಣಶ್ಯಾಮಲೆಯ
ನೀಳಮೂಗಿಗೆ ಮುತ್ತಿನ ಹುಂಜನತ್ತು.
ಬೆಣ್ಣೆಗಾತ್ರದ ತುರುಬು
ಅದರೊಡನೆಗೆ ಘಮ್ಮೆನ್ನುವ
ಕಟಾರಿಶೂಲ ತಾಳೆಹೂವು
ಕಿವಿತುಂಬ ಜಾರುನವಿಲೇಲೆ
ಚಿಮ್ಮುವ ಸುಳಿಬಾಳೆಕಾಯ
ಸೊಂಟ ಬಂಧಿಸಿರುವ ವಂಕಿಡಾಬು
ಬಿಗಿದೆದೆಯ ಶಿಲಾಬಾಲಕಿ ಮೈಕಟ್ಟು
ಕೈಗೆ ಫಲಕ್ ಫಲಕ್ ಬೆಳ್ಳಿ ಕಡಗ ತೊಟ್ಟು
ಜೋಡಮೆಟ್ಟಿರುವಳು ಮುದ್ರೆಕಾಲಿಗೆ
ಬಾಯ್ತುಂಬ ರಂಗು ರಂಗಿನ
ಎಲೆ ಅಡಿಕೆ ಜಗಿಯುತ್ತ
ನಿನಾರಿಗಲ್ಲದವಳು ಖ್ಯಾತಿಯ
ಬಿದರಿನ ಕೈದಂಡಕ್ಕೆ
ಪೋಣಿಸಿರುವಳು ಕಲ್ಪವೃಕ್ಷಗರಿದೆರೆಯ.
ಬೆಳಗಾನ ನಾ ಎದ್ದು ಯಾರ್‍ಯಾರ ನೆನೆಯಾಲಿ
ಎಳ್ಳು ಜೀರಿಗೆ ಬೆಳೆಯೊ
ಭೂಮ್ತಾಯ ನೆನೆಯುವ
ಕುಕ್ಕೆರಾಗಿ ಗರತಿ ನೀರೆಯದ

ಸ್ವರಕ್ಕೆ ನಾದ ಜೋಡಿಸುತ್ತ
ಮುಂಗೋಳಿ ಪ್ರಿಯ ಸಖಿಯಾಗಿ
ತನ್ನ ಮನಸ್ಸಿನಷ್ಟೆ ಸ್ವಚ್ಛಂದದಲಿ
ಸರ್‌ಸರ್ರೆಂದು ನಿತ್ಯ ಜೀದಿಗೆ ಮಜ್ಜನ ಮಾಡಿಸುವ
ಕಡು ಜಾಣೆ ನಾಟ್ಯರಾಣಿ ನೀಲಾಂಜನೆಯ ಸಖಿ
ನಿನ್ನ ವಯ್ಯಾರ ಆ ಮದನನ
ಕಣ್ಣಿಗೆ ಬೀಳದಿರದುಂಟೆ....!

* * *

# ಯುದ್ಧ ಮತ್ತು ಕಾವ್ಯ

**ಅಶೋಕ ನರೋಡೆ**

ಭೂಸ್ವರ್ಗ
ದೇಶದ ಮಣಿಮುಕುಟ;
ಧವಳ ಹಿಮಾಲಯ, ಕಾಶ್ಮೀರ
ಕೊಳ್ಳದಲ್ಲಿ ಕಳೆದು ಹೋಯಿತು
ನನ್ನ ಕಾವ್ಯ.

ಕಾಲು ಕೆದರಿ ಬಂದವರ
ಕುತ್ತಿಗೆ ಹಿಡಿದಾಚೆ ನೂಕಿತ್ತು
ಜಮಾಯಿಸಿದ ಫೌಜು, ಗಡಿ
ಪಾಲಿಸುವ ಭರವಸೆ ದೊರೆಯಲು
ಬಿಳಿ ಬಾವುಟವಾಗಿ ನೀಲಾಗಸ
ದಲ್ಲಿ ಪಟ-ಪಟಿಸಿತ್ತು
ನನ್ನ ಕಾವ್ಯ.

ಗಡಿಯೀಚೆ ಗಡಿಯಾಚೆ
ಗಾಯಾಳುಗಳಿಗೆ ಔಷಧಿಯಾಗಿ,
ಹುತಾತ್ಮ ಕುಟುಂಬಗಳ ಕಣ್ಣೀರಾಗಿ;
ಅದನೊರೆಸುವ ಕರವಾಗಿ, ಕರವಸ್ತ್ರ
ವಾಗಿತ್ತು-ನನ್ನ ಕಾವ್ಯ.

ಬದುಕಿನ ಲೇಹ ಹೆದ್ದಾರಿ,
ಎಡರು ತೊಡರು, ಡ್ರಾಸ್ ಬಟಾಲಿಕ್
ಜಾರುವ ನೀರ್ಗಲ್ಲು, ಹಿಮಬಂಡೆಗಳಲ್ಲಿ

ಹೋರಾಡುತ್ತ ಕಳೆದು ಹೋಯಿತು
ನನ್ನ ಕಾವ್ಯ

ಏಸೋ ವಸಂತಗಳುರುಳಿದರೂ
ಮರಳಿ ಬಾರದಿರುವುದಕೆ
ಕಳೆದುದಕೆ ಹಳ-ಹಳಿಸದೆ
ಮರಳಿ ಬಾರದಕೆ ಮರುಗದೆ
ಮೌನವಾಗುಳಿದೆ.

ಕಾವ್ಯ.
ನನ್ನ ಜೀವ-ಜೀವಾಳ
ನಾನುಂಡ ಅನ್ನ ಉಸಿರಿದ ಗಾಳಿ;
ಯುದ್ಧವಾದಿಯಾಗಿ ಸೇಡುಮಾರಿಯಾಗಿ
ಹಿಂಸಾರಭಸಮತಿಯಾಗಿ ರಕ್ತ
ದೋಕುಳಿಯಾಡುತ ಹೊಡ
ಮರಳಿ ಬರಬೇಕಿರಲಿಲ್ಲ.

ಗಡಿತಂಟೆಗಳಿರದ ದೇಶ
ಯುದ್ಧವಿಮುಕ್ತ ವಿಶ್ವ
ಭಯವಿರದ ಭವಿಷ್ಯತ್ತು
ಶಸ್ತ್ರಾಸ್ತ್ರ ಪೈಪೋಟಿಯಿರದ
ಪ್ರಪಂಚ ನಮ್ಮದಾಗಿ-
ಮಾನವ ಜನಾಂಗಕ್ಕೆ
ನೆಮ್ಮದಿ ದೊರೆಯುವುದಾದರೆ
ಮರಳಿ ಬಾರದಿರಲಿ
ಕಳೆದು ಹೋದ ಕಾವ್ಯ.

* * *

## ಪ್ರತಿ ಮಹಿಳೆಯೂ ಒಬ್ಬಳು ನಿರ್ಮಲೆಯಾಗಬೇಕು

ಮೂಲ : ಓಲ್ಗಾ ಅನು : ಡಾ. ಅಣ್ಣಮ್ಮ

ಸುಂದರವಾದ ದರೋಡೆಗೆ
ಪವಿತ್ರವಾದ ಹಿಂಸೆಗೆ
ನ್ಯಾಯವಾದ ದಾಸ್ಯಕ್ಕೆ
ಬಲಿಯಾದ ನಾನು
ಭಾರತ ಸ್ತ್ರೀ !

ಕೆಲಕಾಲ ಪತಿವ್ರತಳು
ಕುಷ್ಠರೋಗಿಗಳ ಎಂಜಲು ನಾಯಿ
ಅನುಮಾನಗಳ ಅವಮಾನಗಳ
ಅಗ್ನಿಜ್ವಾಲೆಗಳಿಗೆ ಆಹುತಳು
ಸಹಗಮನ ಜ್ವಾಲೆಗಳ ಮಿಡತೆ ನಾನು !

ಕೆಲವು ಕಾಲ ಪ್ರಬಂಧ ಕನ್ಯೆ
ಬಾಯೂರಿಸುವ ಸಕ್ಕರೆಯ ಗಿಳಿ
ರಾಜರಿಗಾಗಿ ರೋದಿಸಿದ ಕೋಗಿಲೆ
ಸ್ತನಗಳ ಭಾರದಿಂದ ಸತ್ತ ಶವ,
ಮನುಷ್ಯಳಲ್ಲ – ಅಷ್ಟಮ ಭೋಗದವಳು !

ಅನಂತರ,
ಹುಟ್ಟು ವಿತಂತುವಾದವಳು
ಗಂಡ ಸತ್ತ ಮುಂಡೆ,
ಹೇಗೆ ಹುಟ್ಟಿದೆನೋ ಯಾಕೆ ಬೆಳೆದೆನೋ
ಯಾರಿಗಾಗಿ ಜೀವಿಸುತ್ತಿರುವೆನೋ
ಇನ್ನೂ ತಿಳಿಯದ ಹುಚ್ಚು ತಾಯಿ.

ಹೊರಗಾಕಲ್ಪಟ್ಟು ಕತ್ತಲೆ ಬದುಕಿನವಳು
ಸದ್ಯಕ್ಕೆ
ಕೂಳಿಗಾಗಿ ಕುಲಟೆ !

ಒಂದು ಕಡೆ
ಗಂಡಂದಿರ ಅಂತಸ್ತು – ಅಧಿಕಾರಗಳ
ಕಾರುಗಳಿಗೆ, ಬಾರುಗಳಿಗೆ ಬಂಧಿತಳು.
ಫ್ಯಾಷನ್ ಪರೇಡ್ ಸ್ಪರ್ಧೆಗಳಲ್ಲಿ ಬಿದ್ದು
ಅಳಿಸಿ ಹೋಗುವುದೇ ಹೊರತು
ಸ್ವೇಚ್ಛೆ ಅರಿಯದ ವಿಹಂಗಮ
ಧನಿಕವರ್ಗದ ದರಿದ್ರಳು !

ಒಂದು ಕಡೆ ತಿಂದು, ಮಕ್ಕಳನ್ನು ಹೆರುವುದೇ ಹೊರತು,
ಮತ್ತೇನೂ ಯೋಚಿಸದ,
ಯೋಚಿಸಲಿಕ್ಕೆ ಬಿಡುವಿಲ್ಲದ
ಮರದ ಚಕ್ರ
ಮಧ್ಯ ತರಗತಿ ಮಹಿಳೆ
ಒಂದುಕಡೆ,
ದಿನವಿಡೀ ಮಾಡಿದ ಕೆಲಸಕ್ಕೆ
ಬಂದ ಹೆಣ್ಣುಕೂಲಿಯ ಕಾಸುಗಳಿಂದ
ಮಕ್ಕಳಿಗಿಷ್ಟು ಗಂಜಿಯಾದರೂ ಹುಯ್ಯೋಣವೆಂದರೆ,
ಕುಡಿದ ಗಂಡನ ಒದೆಗಳನ್ನೂ
ನಿಲ್ಲದ ಮಕ್ಕಳ ಅಳುವನ್ನೂ
ಭರಿಸಲಾರದೆ,
ಹೆತ್ತ ಮಕ್ಕಳಿಗೆ ವಿಷ ಉಣಿಸಿದ
ಪವಿತ್ರ ಮಾತೃದೇವತೆ!

ಆದರೆ ನಾಳೆ ನಾನು
ಪತಿವ್ರತೆಯ ತಾಯಿಯೂ ಅಲ್ಲ,
ಪ್ರಬಂಧ ಕನ್ಯೆಯೂ ಅಲ್ಲ.
ಸಕ್ಕರೆಯ ಗಿಳಿಯೂ ಅಲ್ಲ.
ಫ್ಯಾಷನ್ ಪರೇಡ್ ಗೊಂಬೆಯೂ ಅಲ್ಲ,
ಹಸಿಕಂದಮ್ಮರನ್ನು ಸಾಯಿಸುವ ಪಾಪಿಯೂ ಅಲ್ಲ.
ಪಂಚಾದಿ ನಿರ್ಮಲ ವಾರಸುದಾರಳು !

* * *

## ಆಸೆಗಳ ಗಗನವಾಗುತ್ತೀಯ

---

**ಮೂಲ : ಯಾರ್ಲಗಡ್ಡ ರಾಘವೇಂದ್ರರಾವ್** **ಅನು : ಡಾ. ಅಣ್ಣಮ್ಮ**

ಬೆಳದಿಂಗಳನ್ನು ನಿನಗೆ ಅರ್ಪಣೆ ಮಾಡಲಾರೆ
ಅದು ಚಂದ್ರನು ಬರೆದ ಕಾವ್ಯ.
ಬೆಳಕಿನ ಹೂವ್ವನ್ನು ನಿನ್ನ ಜಡೆಯಲ್ಲಿ ಮುಡಿಯಲಾರೆ
ಅದು ಸೂರ್ಯವೃಕ್ಷಕ್ಕೆ ಅರಳಿದ ಪುಷ್ಪಗುಚ್ಛ.
ಮಬ್ಬು ತೆರೆಗಳ ಉಡುಪುಗಳನ್ನು ಕಾಣಿಕೆಯಾಗಿ ಕೊಡಲಾರೆ
ಅದು ನದಿಗಳು ನೀರಿನ ದಾರಗಳಿಂದ ಹೆಣೆದ ಅದ್ಭುತ ವಸ್ತ್ರ.
ಮರಳು ತೀರವನ್ನು ಹೂವಿನ ಹಾಸಿಗೆ ಮಾಡಿ ಜೋಗುಳ ಹಾಡಲಾರೆ
ಅದು ಸೊರಗಿದ ನೀರಿನ ನಿಧಿ ವಿಶ್ರಾಂತಿ ಪಡೆಯುವ ಮಂದಿರ.
ಎಲೆ ಉದುರಿದ ಸದ್ದಿನಲ್ಲಿನ ಸರಿಗಮಗಳ ಸ್ವರಝರಿಯಲ್ಲಿ
ನಿನ್ನನ್ನು ಜಳಕವಾಡಿಸಲಾರೆ.
ಅದು ತಂಗಾಳಿ ಸಿತಾರೆ ಮಧುರವಾಗಿ ಮಾಡಿದ ನಿಃಶ್ವಾಸ.
ತಾರೆಗಳನ್ನು ದೋಚಿ ಮೆಹೆಂದಿ ಹಾಕಲಾರೆ
ಅವು ಆಕಾಶದ ದೇಹಕ್ಕಾದ ಗಾಯಗಳ ಅಗ್ನಿಕಣಗಳು.
ಕತ್ತಲೆಯನ್ನು ಕಣ್ಣಕಾಡಿಗೆಯಾಗಿ ತಿದ್ದಲಾರೆ
ಅದು ಹಗಲು ಕಟ್ಟಿದ ಜಗತ್ತನ್ನು ತನ್ನಲ್ಲಿಗೆ ಅಪ್ಪಿಕೊಂಡು
ಪ್ರತಿದಿನವೂ ಪುನರ್ಜನ್ಮ ಪಡೆಯುವ ತಾಯಿಗರ್ಭ.
ಅವು ಯಾವುವೂ ನನ್ನದಲ್ಲ, ನಾನು ಆಗಲಾರದ್ದು.
ನಿನಗೆ ಹೇಗೆ ಅರ್ಪಿಸಲಿ? ಹೇಗೆ ಅಂಕಿತವಾಗಲಿ?
ನಾನು ಜೀವನ ಶಪಿಸಿದ ದಿಗಿಲುಭುಗಿಲು ನೋಟ
ಜೀವನ ರಾಗದಲ್ಲಿ ತಂತಿ ಹರಿದ ವಾಯಲೀನನು
ಬೀಜನಾರುವ ಮಳೆಬಿಂದುವಿಗಾಗಿ ನಾಲಿಗೆ ಚಾಚಿಕೊಂಡ ಮೈದಾನ
ನಡೆಯುವ ಹೆಜ್ಜೆಗಳ ಕೆಳಗೆ ನುಲಿಯುತ್ತಿರುವ ಉಸಿರುಗಳಿಂದ
ಬಿರುಕುಗೊಳ್ಳುತ್ತಿರುವ ಭೂಮಿ ನಾನು.
ಆದರೇನು?

ಪ್ರತಿ ಬಿರುಕು ಒಂದು ಮೊಳಕೆಯಾಗಿ
ರೂಪುಗೊಂಡು ಫಸಲಾಗಿ ನಲಿಯುವ ಮಣ್ಣಾಗಿ
ಗಿಡ ಗಿಡವಾಗಿ ತಲೆ ಎತ್ತಿ ಜಗತ್ತನ್ನು ಕಾಪಾಡುವ ಕಾಡಿನಂತೆ.
ಋತುಗಳ ಮೇಲೆ ಪರಿಣಿತಿಗಾಗಿ ಪರಿಣಮಿಸುತ್ತಿರುವ ಕಾಲವಾಗಿ
ಸರ್ವ ವೈಕಲ್ಯಗಳು ಸಮಸ್ತ ವೈಫಲ್ಯಗಳ ಮುಳ್ಳಿನ ಬೇಲಿಯನ್ನು
ಕಡಿಯುತ್ತಾ ವಿಜಯಕ್ಕೆ ದಾರಿ ತೆಗೆವ ಸಂಕಲ್ಪ ನನ್ನದು.
ಸಂಕಲ್ಪ ಒಂದು ಬಿಟ್ಟರೆ ಬೇರೇನೂ ಸಂಪತ್ತಿರದ ಕಡು ಬಡವ ನಾನು.
ಅನುಭವಗಳಿಂದ ಪಡೆದ ಅಸಹ್ಯ, ಅಪಹಾಸ್ಯ, ಆವೇದನೆ, ಅಸಂತೃಪ್ತಿ
ನಿರ್ಮುಕ್ತವಾಗದ ಸಾಮಾನ್ಯನು ನಾನು.
ಸಹಜಾತಗಳು, ಅಭಿಜಾತಗಳು ಇಲ್ಲದ ಜಲ ಸ್ವರಗಳು
ಜಾತಿ ಗೀತೆಗಳಾದ ಸಮೂಹದೊಳಕ್ಕೆ ನಡೆಯುತ್ತಿರುವ ಮನಸ್ಸು ನನ್ನದು.
ಮತ್ತೆ
ನೀನು ನನ್ನ ಆಶೆಗಳ ಆಕಾಶವಾಗಿ ನನ್ನೊಡನೆ ನಡೆದು ಬರುವೆಯಾ?
ವಾಸ್ತವ ಪದ ಘಟ್ಟದ ಕೆಳಗೆ ಕಣ್ಣಿನ ಗೀತೆಗಳ ಹತ್ಯೆಗಳನ್ನು
ಕಾಣಿಕೆಯಾಗಿ ಸ್ವೀಕರಿಸುವೆಯಾ?
ಸೋಲಿನ ಸಮಯದಲ್ಲಿ ಸಂತೈಸುವ ನದಿಯಾಗಿ ನನ್ನಲ್ಲಿ ಪ್ರವಹಿಸುವೆಯಾ?
ಮುರಿದು ಬಿದ್ದರೂ ಉತ್ತುಂಗ ತರಂಗವಾಗಿ ಜೊತೆಗಿರುವೆಯಾ?
ಸಮೂಹಕ್ಕೆ ಸಾಹಸಿಯಾಗಿ
ಅಕ್ಷರಗಳಿಂದ ಸಾಹಸವನ್ನು ಹಂಚುತ್ತಿರುವ ನನ್ನ ಹಾದಿಯಲ್ಲಿ
ಕೆಂದೆನೆಯಾಗಿ ಮುಂದೆ ನಡೆಯುವೆಯಾ?
ಮೃತ್ಯು ಗೂಡು ಕಟ್ಟಿದ ಮುಖಗಳ ಮೇಲೆ
ಕಿರುನಗೆ ಮೂಡಿಸುವ ನಾಗಾಟಕೋಲು ಆಗುವೆಯಾ?
ನಾನಾದ ನೀನು ನೀನಾದ ನನ್ನಲ್ಲಿ
ಒಲಿದ ಹೃದಯವಾಗಿ ಜೀವಿಸುವೆಯಾ?

* * *

## ಕುಂಟೋಬಿಲ್ಲೆ ಆಟ

ಸುನೀತಾ ಶರ್ಮ　　　　　　　　ಅನು : ಗುರುರಾಜ ಯಲ್ಲಾಪುರ

ಕುಂಟೋಬಿಲ್ಲೆ ಆಟದಲ್ಲಿ
ಇಂದು ಶೀಲಾ
ಗೆಲ್ಲುತ್ತಲೇ ಇದ್ದಾಳೆ ಪ್ರತೀ ಸರದಿಯನ್ನೂ
ರೋಮಾಂಚನಗೊಂಡಿದ್ದಾಳೆ ನಿಜಕು!
ಏನು ಮಾಡಲಿ?
ನನ್ನ ದೃಷ್ಟಿಯೋ
ಅವಳ ಹೊಚ್ಚ ಹೊಸ ನೀಲಿ
ಚಪ್ಪಲಿಯಿಂದ ಸರಿಯುವುದೇ ಇಲ್ಲ.
ಅದೆಷ್ಟ ನವುರು
ಒಂದೆ ಸಮ ಅಳೆಯುತ್ತಲೇ ಇವೆ.

ಇಂದು ನಾನು
ಅಪ್ಪನಿಗೆ ಹೇಳಿಬಿಡುತ್ತೇನೆ
ನನಗೂ
ಹೊಚ್ಚಹೊಸ ಚಪ್ಪಲಿ ಕೊಡಿಸೆಂದು.
ಆರು ಬಾರಿ ಚಮ್ಮಾರ
ಹೊಲಿಗೆ ಹಾಕಿಬಿಟ್ಟಿದ್ದಾನೆ
ಆದರೂ ಮತ್ತೆ ಮತ್ತೆ
ಕಿತ್ತುಹೋಗುತ್ತಲೇ ಇವೆ.

ಮೆಲ್ಲನೆ
ಮನೆಯ ಬಾಗಿಲು
ಸರಿಸುತ್ತೇನೆ
ನೋಡುತ್ತೇನೆ

ಬೂಟನೊಳಗಿಂದಲೇ
ಸದಾ ಹೊರಗಿಣುಕಿ
ನೋವುಣುವ
ಅಪ್ಪನ ಅಂಗಾಲಿಗೆ
ಅವ್ವ
ಮುಲಾಮು ಹಚ್ಚುತ್ತಿದ್ದಾಳೆ.

ಅಪ್ಪನ ಬೂಟಿಗೋ
ಈಗ ಯಾವ ಚಮ್ಮಾರನೂ
ಹೊಲಿಗೆ ಹಾಕುವುದಿಲ್ಲ.
ಇದೇ ಗೆಲುವಿನ ನಗೆ
ಹೊತ್ತು
ನಾನು ಮೆಲ್ಲನೆ ಮುಂಬಾಗಿಲನು
ಮತ್ತೆ ಮುಚ್ಚಿಬಿಡುತ್ತೇನೆ.

* * *

## ಪತ್ರಿಕೆಯ ಸುದ್ದಿ

---

ಸುನೀತಾ ಶರ್ಮ     ಅನು :   ಗುರುರಾಜ ಯಲ್ಲಾಪುರ

ಪತ್ರಿಕೆಯಲ್ಲಿ
ಬೇಯುತ್ತಿರುವ ಪ್ರತಿ ಹೆಣ್ಣಿನ ಸುದ್ದಿ
ಓದಿ ನನಗನಿಸುತ್ತದೆ
ಆ ಬೆಂಕಿಯ
ಜ್ವಾಲೆಯ ಕಾವು
ರಾಚುತ್ತಲಿದೆ
ಎಲ್ಲೋ ನನ್ನ ತನಕವೂ ಎಂದು.
ಪ್ರತಿ ಬಾರಿ
ನೊಂದು ಕರಕಲಾಗುತ್ತೇನೆ
ಆದರೆ ಚಿಕಿತ್ಸೆಯಾಗುವುದೇ ಇಲ್ಲ.

ಮನೆಯೊಳಗೆ ಬಿದ್ದಿರುವ
ಟಿ.ವಿ., ಫ್ರಿಜ್, ಸ್ಕೂಟರ್
ಇವನ್ನೆಲ್ಲ ನೋಡುತ್ತಾ
ಮನದೊಳಗೆ
ಇವೆಲ್ಲ ನನಗಾಗಿ
ಎನ್ನುವ ಭಾವ ಮೂಡುವುದೇ ಇಲ್ಲ.

ಹೀಗೆನಿಸುತ್ತದೆ ನನಗೆ
ನಾನಿದ್ದೇನೆ
ಏಕೆಂದರೆ ಇವೆಲ್ಲಾ ಇವೆ
ಅಥವಾ

ಎಲ್ಲಿಯತನಕ
ಇವೆಲ್ಲ ಇರುತ್ತವೋ ಅಲ್ಲಿವರೆಗೆ ಮಾತ್ರ
ನಾನಿರುತ್ತೇನೆ.

ಇವೆಲ್ಲ ನಷ್ಟವಾಗುತ್ತಲೆ
ಬರುತ್ತವೆ ಎರಡು ಮೂರು ಜೋಡಿ ಕೈ
ನನ್ನ ಕೊರಳು, ಕುರುಳನ್ನು
ಬಿಗಿದು ಹಿಡಿಯಲು
ಆಗ ನನ್ನ ರೋಮ ರೋಮ
ಚೀತ್ಕರಿಸಿಯಾವು.

ಆದರೆ ಪ್ರತಿಯೊಂದು ದನಿ
ನುಸುಳಿ ಹೋಗುತ್ತದೆ
ಗದ್ದಲದ
ಸಂತೆಯೊಳಗೆ
ಆಗಲೇ ತುಳುಕಿಬಿಡುತ್ತದೆ
ಕೆಲ ಲೀಟರು ಗ್ಯಾಸು
ಕಿಡಿ ಕಾರುತ್ತದೆ ಬೆಂಕಿಕಡ್ಡಿ
ಮತ್ತೆ ನಾನು .....
ನಾನು ಜೀವ ಪಡೆಯುತ್ತೇನೆ
ಪತ್ರಿಕೆಯ ಸುದ್ದಿಯಾಗಿ.

* * *

# ಇನ್ನು ಕಾಯುವಿಕೆ ಇನಿತಿಲ್ಲ

ಸುನೀತಾ ಶರ್ಮ                                        ಅನು : ಗುರುರಾಜ ಯಲ್ಲಾಪುರ

ಹಳೆಯ ವಸ್ತುಗಳು
ಬಹುಶ:
ಸವಕಲಾಗಿಬಿಡುತ್ತವೆ.
ಈಗ ನೀನೂ
ಹೊಸತಾಗಿ ಉಳಿದಿಲ್ಲ, ಕಾಲವೇ!

ನಾನೋ ಕೆಲಸ ಮಾಡುತ್ತೇನೆ
ಏಕೆಂದರೆ ಮಾಡಲೇಬೇಕಾಗುತ್ತದೆ.
ಆದರೆ ಫಲಿತಾಂಶದ
ಉತ್ಸುಕತೆಯಲ್ಲಿ
ಈಗ ನಿನಗಾಗಿ
ಕಾಯುವಿಕೆ ಇನಿತಿಲ್ಲ, ಕಾಲವೇ !

ಪ್ರತಿಯೊಂದು ಒಳಿತಿನ ವಸ್ತು
ನನ್ನದು . . .
ನನ್ನದೆನ್ನುವ ಪ್ರತಿಯೊಂದು ವಸ್ತುವನ್ನೂ
ನೀನು ಎಂದಿನಂತೆಯೇ
ಅಡಗಿಸಿಕೊಳ್ಳುತ್ತಲೇ ಇರುವೆ
ನಿನ್ನ ಒಡಲೊಳಗೆ.
ಅನೇಕ ಬಾರಿ
ಬಲು ಕ್ರೂರ ನೀನು
ಎನಿಸುತ್ತೀಯ, ಕಾಲವೇ !

ಬಿಗುಮಾನವಿರಬಹುದು ನಿನಗೆ
ನನಗೆ ಜನ್ಮ ಕೊಟ್ಟುದಕೆ
ಕಾತುರವಿದ್ದೀತು ನಿನಗೆ
ನನ್ನ ಪ್ರಾಣ ಪಡೆವುದಕೆ;
ನಿನ್ನದಾರೂ ತಡೆಯುವರಿಲ್ಲ
ನನ್ನ ಪ್ರಾಣ ನಿನ್ನದೇ
ಆಸ್ತಿಯಾಗಿದೆ ಸದಾ
ಬೇಕೆನಿಸಿದಾಗ
ಒಯ್ದುಬಿಡು ಮುಷ್ಟಿಯಿಂದ, ಹೇ ಕಾಲವೇ !

* * *

# ಬೇನಜೀರ್ ಹತ್ಯೆಯಾದಾಗ

ಕೆ. ಪರೀಕ್ಷಾ

ಹಾಳಾದ ಬಂದೂಕಿಗೆ
ಹೇಗಾದರೂ ಮನಸಾಯಿತೋ
ಸುಂದರ ಹೆಣ್ಣಿನ ಜೀವದ ಮೇಲೆ
ಗುಂಡು ಹಾರಿಸಲು?
ಸಮವಸ್ತ್ರಧಾರಿ ಮಿಲಿಟರಿ ಸರ್ಕಾರದ
ಹುಬ್ಬು ಗಂಟಿಕ್ಕಿದ ಮುಖ ಕಂಡು
ಅವಳ ಕೆಂಪು ತುಟಿಗಳ ನಗು
ಹೊರಬರಲಾಗದೇ ಆತ್ಮಹತ್ಯೆಗೆ ಯತ್ನಿಸಿ,
ನನ್ನ ಕಾಗದದ ಮೇಲಿಳಿದು
ಕಾವ್ಯವಾಗುವ ಹೊತ್ತಿಗೆ
ಕ್ರೂರಹತ್ಯೆಗೀಡಾಗಿದ್ದಳು ಬೇನಜೀರ್
ಮಲಗಿದ ಪ್ರತಿ ಮನೆಯ ಬಾಗಿಲು ತಟ್ಟಿ
ಕೊಳ್ಳುತ್ತಿರುವೆ, ಹೇಳಿ, ಈ ಸಾವು ನ್ಯಾಯವೇ?

ಕವನ ಬರೆಯುವ ನನ್ನ ಕೈಯೇಕೆ
ಕಂಪಿಸುತ್ತಿದೆ ಭಯದಿಂದ?
ನಂಬಿದ ಸಿದ್ಧಾಂತಗಳೇಕೆ ಛಿದ್ರವಾಗುತ್ತಿವೆ?
ದೇಶದ ನಕಾಶೆಯೇಕೆ ರಕ್ತಸಿಕ್ತವಾಗುತ್ತಿದೆ?
ಒಮ್ಮೆ ಭಾರತಕ್ಕೆ ತಗುಲಿದ
ಸಾಮ್ರಾಜ್ಯಶಾಹಿ ಗುಂಡುಗಳು
ಮಗದೊಮ್ಮೆ ಪಾಕಿಸಾನಕ್ಕೆ ತಗಲುತ್ತವೆ.
ಮತ್ತೊಮ್ಮೆ ಇರಾಕ್-ಇರಾಕ್ ಮಧ್ಯಪ್ರಾಚ್ಯಕ್ಕೆ

ಪ್ರಜಾಸತ್ತೆಯ ಕೊಲೆಯಾಗುತ್ತದೆ ಹೀಗೆಯೇ
ಅಂದು–ಇಂದಿರಾ ಇಂದು–ಬೇನಜೀರ್
ಪ್ರತಿ ಮನೆಯ ಬಾಗಿಲು ತಟ್ಟಿ ಕೇಳುವೆ
ಹೇಳಿ, ಈ ಸಾವುಗಳು ನ್ಯಾಯವೇ?

ಭ್ರೂಣಾವಸ್ಥೆಯ ಹೆಣ್ಣ ಚಿವುಟ ಹತ್ಯೆ
ಬೆಳೆದಾಗ ವರದಕ್ಷಿಣೆ ಹತ್ಯೆ
ಬದುಕಿ ಉಳಿದರೆ ರಾಜಕೀಯ ಹತ್ಯೆ
ಓಟಿಗಾಗಿ–ನೋಟಿಗಾಗಿ ಹತ್ಯೆ..ಹತ್ಯೆ..
ಕ್ರೂರ ಕೀಚಕರ ಮಧ್ಯೆ ಮಾನಿನಿಯರ
ಜೀವಗಳು ಹೇಗೆ ಬದುಕಿ ಉಳಿದಾವು?
ಸಹಿಸಲಾರವು ಗದ್ದುಗೆ ಪೀಠಗಳು
ಅವಳ ಅಧಿಕಾರದ ಮೇಲ್ಮೆಯನ್ನು
ಪಾಕಿಸ್ತಾನದ ಅಗ್ನಿಪರ್ವತವೇ ಆಗಲಿ
ಹಿಮಾಲಯದ ಹಿಮಪರ್ವತವೇ ಆಗಲಿ
ತಡೆಯಲಿಲ್ಲ ಕ್ರೂರ ಹತ್ಯೆಗಳನ್ನು
ಸಾಕ್ಷಿ ಉಳಿಸಿಲ್ಲ ಲೋಕದಲಿ
ರಾಜಕಾರಣಿಗಳ ಹತ್ಯೆಯಲಿ ಕೊಲೆಗಾರ
ಹೇಳಿ. ಈ ಸಾವುಗಳು ನ್ಯಾಯವೇ?

ಕ್ರೌರ್ಯ ತಡೆಯಲು ನಾನು
ಕಾವ್ಯದ ಅಸ್ತ್ರ ಬಳಸುತ್ತಿರುವೆ
ಸರಹದ್ದುಗಳ ಗೆರೆ ದಾಟಿ
ಕ್ರೂರ ಗಿಡುಗನ ಬಾಯಿಯಿಂದ
ಪಾರಿವಾಳಗಳ ರಕ್ಷಿಸ ಬಯಸುತ್ತಿರುವೆ
ಭೂಮಿಯಿಂದ ಹಿಂಸೆಯ ಹೆಸರು
ಅಳಿಸ ಹೊರಟಿರುವೆ. ಲೋಕದಲ್ಲಿ
ಶಾಂತಿ ಸ್ಥಾಪಿಸುವ ಸಂತರ ನಿರೀಕ್ಷೆಯಲ್ಲಿ
ಪ್ರತಿ ಮನೆಯ ಬಾಗಿಲು ತಟ್ಟಿ
ಹೊದ್ದು ಮಲಗಿದವರನು
ಎಬ್ಬಿಸಿ ಕೇಳುತ್ತಿರುವೆ
ಹೇಳಿ, ಈ ಸಾವುಗಳು ನ್ಯಾಯವೇ?

* * *

# ಮಯೂರ ಸಿಂಹಾಸನ

## ಝುಮಿರುಲ್ಲಾ ಪರೀಕ್ಷ

ಅಮ್ಮ ಪತ್ರ ಬರೆಸಲು ಪ್ರಾರಂಭಿಸಿದರು.

"ಬರೀ ಮಗಳೇ"

ಈ ಮುದಿ ಕಣ್ಣಿಗೆ ಏನು ಗೊತ್ತು, ಸೆಹ್‌ರಾ (ಮದುವೆಯಲ್ಲಿ ವಧು-ವರರ ತಲೆಯ ಮೇಲಿಂದ ಮುಖದ ಮೇಲೆ ಬರುವಂತೆ ಹಾಕುವ ಹೂವಿನ ಹಾರ ಅಥವಾ ಮುತ್ತಿನ ಲಡಿ) ಮತ್ತು ಚಂದ್ರನಂತಹ ವಧು ನೋಡಲು ಸಾಧ್ಯವೋ? ಇಲ್ಲಿ ದಿನ ದಿನ ನಾನು ಸಾವಿಗೆ ಹತ್ತಿರವಾಗುತ್ತಿದ್ದೇನೆ. ಸ್ವಲ್ಪ ದಿನಕ್ಕಾದರೂ ಸರಿ, ನೀನು ಒಂದು ಸಲ ಬಾ.

ಅಮ್ಮ ಹೇಳುತ್ತಲೇ ಇದ್ದರು. ಅವರ ಧ್ವನಿ ಇದ್ದಕ್ಕಿದ್ದ ಹಾಗೆ ನಿಲ್ಲುವಂತಾಗುವುದು. ಕಣ್ಣೀರನ್ನು ಸುರಿಯುತ್ತಾ ಅವರು ಆ ಕಾಗದ ಪೂರ್ಣಗೊಳಿಸಿದ ನಂತರ ಅಳುವ ಧ್ವನಿಯಲ್ಲಿ, "ಮಗಳೇ, ಈ ಕಾಗದದ ಉತ್ತರ ಎಷ್ಟು ದಿನಗಳಲ್ಲಿ ಬರಬಹುದು?" ಎಂದು ಕೇಳಿದರು.

"ಉತ್ತರ"

ನಾನು ಗಂಟಲಿನಲ್ಲಿ ವ್ಯಾಕುಲವಾಗುತ್ತಿರುವ ಹೃದಯವನ್ನು ಬಹಳ ಕಷ್ಟದಿಂದ ಸೆರೆ ಹಿಡಿದು ಹೇಳಿದೆ:

"ಹನ್ನೆರಡು-ಹದಿನೈದು ದಿನಗಳಲ್ಲಿ ಬರಬಹುದು ಅಮ್ಮ"

ಅಮ್ಮಾ, ಇಂತಹ ಆಟ ಆಡಲು ಈಗ ನನ್ನಿಂದ ಸಾಧ್ಯವಿಲ್ಲ – ನೀನು ಪ್ರತಿ ಹದಿನೈದು ದಿನಕ್ಕೊಮ್ಮೆ ಈ ಕಾಗದ ಬರೆಸುವೆ. ಅದು ನಾನು ಬರೆಯುವ ಕಾಗದ. ಅದು ನನ್ನ ಕಡೆಯಿಂದ ಆಗಿರುತ್ತೇ ಹೊರತು, ನೀನು ಬರೆಸುವಂತಹ ವಿಷಯ ನಿನ್ನ ಮಗನಿಗೆ ತಲಪುವುದಿಲ್ಲ. ಏಕೆಂದರೆ ನಿಧನ ಹೊಂದಿದವರಿಗೆ ಕಾಗದ ತಲಪಿಸುವಂತಹ ಯಾವ ಪೋಸ್ಟ್‌ಮ್ಯಾನ್ ಕೂಡ ಇನ್ನೂ ಈ ಭೂಮಿಯ ಮೇಲೆ ಜನಿಸಿಲ್ಲ. ಅಮ್ಮ, ನನ್ನ ತಾಳ್ಮೆಯನ್ನು ನೀನು ಕಸಿದುಕೊಳ್ಳಬೇಡ, ನಿನ್ನ ಮಗ, ನಿನ್ನ ರಾಜಕುಮಾರ, ನಿನ್ನ ಜೀವನದ ಏಕ ಹಾಗೂ ಕೊನೆಯ ಆಧಾರ, ಯುದ್ಧದಲ್ಲಿ ಸಾವಿಗೀಡಾದ – ನೀನು ಅವನಿಗೆ ಪತ್ರ ಬರೆಸುತ್ತಾ ಇರುವೆಯಾ? ಅವನ ವಧುವಿಗೆ ಹೊಸ ಹೊಸ ಉಡುಪುಗಳನ್ನು ಹೊಲೆದು ಹೊಲೆದು ಇಡುತ್ತೀಯಾ? ಆದರೆ

ಅವನು ಎಂತಹ ಜಾಗಕ್ಕೆ ಹೋಗಿದ್ದಾನೆಂದರೆ ಅಲ್ಲಿಯವರೆಗೆ ನಿನ್ನ ಕಣ್ಣೀರು ಮತ್ತು ಹಾಹಾಕಾರ ತಲಪುವುದಿಲ್ಲವೆಂದು ನಾನು ಕೂಗಿ ಕೂಗಿ ಹೇಳಬೇಕೆಂದುಕೊಂಡೆ.

ಆದರೆ ನಾನು ಅಮ್ಮನ ಬಲಹೀನತೆಯಿಂದ, ದುಃಖಗಳಿಂದ ಭಾರವಾಗಿರುವ ಅಸ್ತಿತ್ವವನ್ನು ನೋಡಿ, ನನ್ನ ಎದೆಯಲ್ಲಿ ಮುರಿಯುತ್ತಿರುವ ಹೃದಯವನ್ನು ಹಿಸುಕಿ, ಸ್ವಲ್ಪ ನಗು ಮುಖ ಮಾಡಿ,

"ಅಮ್ಮಾ, ಕಾಗದ ಬರುವಲ್ಲಿ ಸ್ವಲ್ಪ ತಡವಾಗುತ್ತದೆ. ನೀನು ಏಕೆ ಇಷ್ಟೊಂದು ವ್ಯಾಕುಲವಾಗುತ್ತಿಯ? ಈ ಪ್ರಪಂಚದಲ್ಲಿ ಅವನಿಗೇ ಆಗಲಿ, ನಿನ್ನನ್ನು ಬಿಟ್ಟರೆ ಮತ್ತ್ಯಾರಾದರೂ ಇದ್ದಾರೆಯೋ? ಅವನು ನಿನ್ನನ್ನು ನೆನಸಿಕೊಳ್ಳದಿದ್ದರೆ ಮತ್ತ್ಯಾರನ್ನು ನೆನೆಸುವನು?"

"ಓ ಇಲ್ಲ ಮಗಳೇ" – ಅವಳು ಸ್ವಲ್ಪ ಕೋಪಿಸಿಕೊಂಡು, ಪ್ರೀತಿಯ ಧ್ವನಿಯಲ್ಲಿ ಹೇಳಿದಳು, "ಇಂದಿನ ಈ ಹುಡುಗರಿಗೆ ಏನೂ ಗೊತ್ತಾಗುವುದಿಲ್ಲ, ಅವರ ಮನಸ್ಸು ಸರಿ ಇರುವುದಿಲ್ಲ. ನಾಲ್ಕಾರು ಗೆಳೆಯರು ಎಲ್ಲಿ ಸೇರಿ ಕುಳಿತುಕೊಳ್ಳುತ್ತಾರೋ, ಅಲ್ಲಿ ಅವರ ಅಮ್ಮನು ಇದ್ದಾಳೆಂಬುವುದನ್ನೂ ಮರೆಯುತ್ತಾರೆ."

"ಓ ಇಲ್ಲಮ್ಮ, ನೀನು ತಪ್ಪಾಗಿ ಯೋಚಿಸುತ್ತಿದ್ದೀಯಾ – ಯೂಸುಫ್ ಅಂಥವನಲ್ಲ."

"ಈಗ ನೀನು ಅವನ ಪರ ವಹಿಸಿಕೊಂಡು ಮಾತಾಡದೇ ಇದ್ದರೆ ಇನ್ಯಾರು ಮಾತ್ನಾಡುವರು? ಯಾವಾಗಲೂ ನೀನು ಅವನ ಜೊತೆಯಲ್ಲಿ ಜಗಳವಾಡುತ್ತಿದ್ದೆ. ಆದರೆ ನಾನು ಅವನ ಬಗ್ಗೆ ಸ್ವಲ್ಪ ಹೇಳಿದರೂ ಸಾಕು, ನಿನಗೆ ಎಲ್ಲಿಲ್ಲದ ಪ್ರೀತಿ ಹುಟ್ಟಿಬಿಡುತ್ತದೆ – ಹೌದು ಮಗಳೇ, ಇದನ್ನು ಸಹ ಬರೆದುಬಿಡು. ಅವನು ತನ್ನ ವಧುವಿನ ಮುಖ ನೋಡುವ ಸಮಯದಲ್ಲಿ ಕೈಯಲ್ಲಿ ಗಡಿಯಾರ ಕಟ್ಟುವನೋ ಅಥವಾ ಉಂಗುರವನ್ನು ಹಾಕುವನೋ – ನಾನು ಬಹಳಷ್ಟು ಪದಾರ್ಥಗಳನ್ನು ಜೋಡಿಸಬೇಕಾಗಿದೆ. ಒಳ್ಳೆ ಸಮಯದಲ್ಲಿ ಏನೂ ತೋಚುವುದಿಲ್ಲ – ಜ್ಞಾಪಕದಿಂದ ಕೇಳಿಕೋ ಮಗಳೇ."

"ಆಗಲಿ ಅಮ್ಮ" – ನಾನು ತಲೆ ಬಾಗಿಸಿಕೊಂಡೇ – "ಇನ್ನೇನಾದರು ಹೇಳಬೇಕಾಗಿದೇನಮ್ಮ?" ಎಂದು ನಾನು ತುಂಡುತುಂಡಾಗುತ್ತಿರುವ ಹೃದಯದಿಂದ ಕೇಳಿದೆ.

"ಇಲ್ಲ ಮಗಳೇ– ಇನ್ನೇನು ಬರೆಸಬೇಕಾಗಿದೆ? ಆದ್ರೂ ಕೇಳು, ಎಷ್ಟೊಂದು ಬರೆಸಬೇಕಾಗಿದೆ ಎಂದರೆ ಆಕಾಶದಷ್ಟು ಅಗಲ ಕಾಗದವಾದರೂ ಸಾಲದು." ಇದು ತಾಯಿಯ ಹೃದಯ ಅಲ್ಲವೆ? ಅವಳ ಪ್ರೀತಿ, ಪ್ರೇಮಕ್ಕೆ ಅಂತ್ಯವೇ ಇಲ್ಲ.

ನಾನು ಇನ್ನೇನು ಏಳಬೇಕೆಂದಾಗ ಇದ್ದಕ್ಕಿದ್ದ ಹಾಗೆ ಅವರಿಗೇನೋ ಜ್ಞಾಪಕ ಬಂದಂತಾಗಿ,

"ಮಗಳೇ, ಇದನ್ನು ಕೂಡ ಕೇಳಿಕೋ, – ಈಗ ಹೊಸ ಕಾಲ ಅಲ್ಲವೆ?

ಹೊಸ ಹೊಸ ಫೇಶನ್‌ಗಳು ಬಂದಿವೆ. ನಮ್ಮ ಕಾಲದಲ್ಲಿ ಮದುವೆ ಸಮಯದಲ್ಲಿ ಕೆಂಪು ಬಣ್ಣದ ಉಡುಪನ್ನು ಧರಿಸುತ್ತಿದ್ದರು. ಈಗ ಗುಲಾಬಿ, ಕಿತ್ತಲೆ ಮತ್ತು ಬಿಳಿ ಬಣ್ಣದ ಬಟ್ಟೆಗಳನ್ನು ಕೂಡ ಸುಮಂಗಲಿಯರಿಗೆ ಉಡಿಸುತ್ತಿದ್ದಾರೆ. ಅವನಿಗೆ ಇಷ್ಟವಾದ ಬಣ್ಣ ಯಾವುದು? ತಿಳಿಸಲು ಹೇಳು" –

ಆ ನೋಡದೇ ಇರುವಂತಹ ವಧು – ಆ ಹೂಗಳಿಂದ ತುಂಬಿರುವ ಸುಮಂಗಲಿ. ಸಮಯಕ್ಕಿಂತ ಮುಂಚೆಯೇ ವಿಧವೆಯಾದಳು ಅಮ್ಮ, ಯಾವ ಬಣ್ಣ ಚೆನ್ನಾಗಿ ಕಾಣಿಸುತ್ತದೆ. ವಧುವೂ ಇಲ್ಲ, ವರನೂ ಇಲ್ಲ.

ಅಮ್ಮ, ಈ ಭಾರ ಹೊತ್ತು ಹೊತ್ತು ಈ ಗುಟ್ಟನ್ನು ಸಾಕುತ್ತ ಸಾಕುತ್ತ ನನಗೆ ಕ್ಷಯ ಆಗಿಹೋಗುತ್ತದೆ – ಆದರೂ ನಾನು ನನ್ನನ್ನು ತಡೆದುಕೊಂಡು ಹೇಳಿದೆ –

"ಸಮಾಧಾನವಾಗಿರಮ್ಮ, ನಾನು ಎಲ್ಲವನ್ನು ಬರೆದು ಬಿಡುತ್ತೇನೆ" ಮತ್ತೆ ನನ್ನ ಕೊಠಡಿಯಲ್ಲಿ ಬಂದು ಜೋರಾಗಿ ಅತ್ತೆ.

ಬಡಪಾಯಿ ಅಮ್ಮನದು ಏನು ನಸೀಬು, ಎಂಥ ಅದೃಷ್ಟವೋ?

ಬಾಲ್ಯ ಬಡತನದಲ್ಲಿ ಸಾಗಿತು – ಯೌವ್ವನ ಬಂದಾಗ ತಂದೆ–ತಾಯಿಯರು ತಮ್ಮ ಯೋಗ್ಯತೆಯಂತೆ ಮದುವೆ ಮಾಡಿದರು – ಮದುವೆಯಾದ ಒಂದು ವರ್ಷದಲ್ಲೇ ಅವರ ಪತಿ ಒಂದು ಸಾಮಾನ್ಯ ಕಾಯಿಲೆಯಲ್ಲಿ ಮೃತಪಟ್ಟರು.

ಯೂಸುಫ್ ತಂದೆಯ ನಿಧನದ ಎರಡು ತಿಂಗಳದ ನಂತರ ಈ ಪ್ರಪಂಚದಲ್ಲಿ ಕಾಲಿಟ್ಟ. ಯುವವಿಧವೆಯ ಏಕಮಾತ್ರ ಆಸರೆ – ಬಡತನಕ್ಕೆ ವಿವಶನಾಗಿ ಕೆಲಸ ಹುಡುಕುತ್ತ ನಮ್ಮ ಮನೆಬಾಗಿಲಿಗೆ ಬಂದಾಗ ನಮ್ಮ ಮನೆಯಲ್ಲಿ ಶೋಕಾಚರಣೆ ನಡೆಯುತ್ತಿತ್ತು.

ಬಹಳಷ್ಟು ಪುಟ್ಟ ಪುಟ್ಟ ಮಕ್ಕಳನ್ನು ಬಿಟ್ಟು ನನ್ನ ಅಮ್ಮ ಸಾವನ್ನು ತಬ್ಬಿಕೊಂಡಿದ್ದರು. ದೊಡ್ಡ ಮಕ್ಕಳು ಹಾಗೋ ಹೀಗೋ ಬೆಳೆದುಕೊಳ್ಳುತ್ತಾರೆ, ಆದರೆ ಇಂತಹ ಒಂದು ಮಗು, ತನ್ನ ತಾಯಿಯ ಎದೆಯ ಕೋಮಲ ಮತ್ತು ಬಿಸಿಯಾದ ಜೀವನ ಕೊಡುವಂತಹ ಸ್ಪರ್ಶಜ್ಞಾನದ ಇಂದ್ರಿಯಾನುಭವವನ್ನೇ ಮಾಡದೇ ಇರುವಂತಹವನು, ಅವನು ಇನ್ನೂ ಕಣ್ಣು ಬಿಟ್ಟು ಪ್ರಪಂಚವನ್ನೇ ನೋಡದೇ ಇರುವಂತಹ ಮಗು, ಇಂಥ ತುಂಬಿತುಳುಕಾಡುತ್ತಿರುವ ಪ್ರಪಂಚದಲ್ಲಿ ಒಬ್ಬೊಂಟಿಗನಾಗಿ ಬಿಟ್ಟರೆ, ಒಬ್ಬ ತಂದೆಯ ಮೇಲೆ ಇಷ್ಟೊಂದು ಮಕ್ಕಳ ಜವಾಬ್ದಾರಿ ಒಂದೇ ಸಮಯದಲ್ಲಿ ಬಿದ್ದರೆ ಅವನ ಗತಿ ಏನಾಗಿರಬಹುದೆಂದು ಅವನ ಹೃದಯವನ್ನು ಕೇಳಿ.

ಜೀನತ್ ಬೀಯವರಿಗೆ ತಕ್ಷಣವೇ ನೌಕರಿಯನ್ನು ಕೊಡಲಾಯಿತು. ಏಕೆಂದರೆ ಅವರ ಮಡಿಲಲ್ಲೂ ಕೂಡ ಒಂದು ಹಾಲು ಕುಡಿಯುವಂತಹ ಮಗುವಿತ್ತು, ಚಿಕ್ಕಮಕ್ಕಳು ಬೇರೆಯವರದೇ ಆಗಲಿ, ಆದರೂ ಕೂಡ ಇಂತಹ ಮಕ್ಕಳನ್ನು

ಸಾಕಬೇಕಾದರೆ ಮಮತೆಯ ಹೃದಯಕ್ಕೆ ಗಾಯ ಉಂಟಾಗಿರುವಂತಹ ಸ್ತ್ರೀಯೇ ಸಾಕಬಹುದು!–

ಆದರೂ ಜೇನತ್ ಜೀ ಯವರು ಇನ್ನೂ ಹೆಚ್ಚಾಗಿ ಮಾಡಿ ತೋರಿಸಿದರು. ತನ್ನ ಸಾಮೀಪ್ಯದಲ್ಲಿ ದೊಡ್ಡ ಮಗನಿಗೆ ಅವರು ಹಾಲನ್ನು ಕೊಡಲು ಪ್ರಾರಂಭಿಸಿದರು. ತನ್ನ ಹೊಸ ಒಡೆಯನ ಹೆಣ್ಣು ಮಗುವನ್ನು, ಅಂದರೆ ನನ್ನನ್ನು ತಬ್ಬಿಕೊಂಡರು.

ರಾತ್ರಿಯ ನಿದ್ರೆ ಮತ್ತು ಹಗಲಿನ ಸುಖ, ಸಂತೋಷವನ್ನು ನಿಷೇಧಿಸಿ ತನ್ನ ಶರೀರದ ರಕ್ತವನ್ನು ಕುಡಿಸಿ ಕುಡಿಸಿ ಒಂದು ದಿನ ಅವರು ನಮ್ಮ ಮನೆಯವರಲ್ಲಿ ಒಂದು ಪ್ರಾರ್ಥನೆ ಮಾಡಿದರು.

"ತಪ್ಪುಗಳು ಮಾನವನಿಂದಲೇ ಆಗುತ್ತೆ. ನಾನು ಕೂಡ ಮಾನವಳೇ. ತಪ್ಪುಗಳ ಗಂಟು. ಆದರೂ ನನ್ನಿಂದ ಯಾವ ತಪ್ಪಾದರೂ ನನ್ನನ್ನು ಈ ಮನೆಯಿಂದ ತೆಗೆಯಬೇಡಿ. ಈ ಮಗುವಿನಿಂದ ನನ್ನನ್ನು ಬೇರ್ಪಡಿಸಬೇಡಿ. ಇವಳನ್ನು ಬಿಟ್ಟು ನಾನು ಬದುಕಿರಲಾರೆ."

ನಾನು ಇವಳಿಗಾಗಿ ಒಂಭತ್ತು ತಿಂಗಳ ಆ ಕಷ್ಟವನ್ನೇನೂ ಸಹಿಸಿಲ್ಲ. ಆ ಕಷ್ಟವನ್ನು ಸಹಿಸಿದವಳು ಒಂದು ಸ್ವರ್ಗದ ಸೃಷ್ಟಿಕರ್ತಳಾಗುತ್ತಾಳೆ. ಆದರೂ ನಾನು ನನ್ನ ಯೌವ್ವನವನ್ನು ಅವಳಿಗೆ ಅರ್ಪಿಸಿದ್ದೇನೆ. ಅದು ಒಂದು ಸ್ತ್ರೀಯ ಬಹು ಸುಂದರವಾದ ಬಂಡವಾಳವಾಗುತ್ತದೆ.

ಇದು ಕೂಡ ಸತ್ಯವಾಗಿತ್ತು. ಅವರು ನನಗಾಗಿ ರಾತ್ರಿಯಲ್ಲಿ ನಿದ್ದೆ ಕಟ್ಟಿ, ಹೊತ್ತಿಲ್ಲದ ಹೊತ್ತಿನಲ್ಲಿ ನನ್ನ ರೂಂ ರೂಂ ಎಂಬ ಅಳುವಿನ ಮೇಲೆ ತನ್ನ ಸುಖ, ಸಂತೋಷವನ್ನು ಧ್ವಂಸ ಮಾಡಿ, ತನ್ನ ಸುಂದರವಾದ ಕಪ್ಪಗಿರುವ ಕೂದಲುಗಳಿಗೆ ದುಃಖದ ಬೆಳಕನ್ನು ಕೊಟ್ಟಿದ್ದರು. ಅವರು ಪೂರ್ತಿ ಮನೆಯ ಶೃಂಗಾರವೇ ಆಗಿದ್ದರು. ಈ ಪುಟ್ಟ ಪುಟ್ಟ ತುಟಿಗಳು ಮೊದಲನೆ ಸಲ ಆಡಲು ಕಲಿತಾಗ ಅಮ್ಮ ಎಂಬ ಶಬ್ದವನ್ನೇ ಕಲಿಯಿತು. ಮೊದಲಿಂದ ಕೊನೆಯವರೆಗೂ ಕೇವಲ ಅಮ್ಮ ಅಮ್ಮನೇ ಆಗಿದ್ದಳು.

ಯಾವುದೋ ಮುಗ್ಧ ಸಣ್ಣ ಶಿಶುವಿನ ಕಷ್ಟದ ಮೇಲೆ ಕಣ್ಣನ್ನು ಒದ್ದೆ ಮಾಡುವಂತಹ ಸ್ತ್ರೀ ಮಾತ್ರ ಇಂತಹ ಸುಂದರವಾದ ಅಮ್ಮಾ ಎನ್ನುವ ಬಿರುದಿಗೆ ಅರ್ಹಳಾಗಿದ್ದಳು. ಇಲ್ಲಿ ಜೀವನಪೂರ್ತಿ ನನಗೋಸ್ಕರ ಕಣ್ಣೀರಿನ ಗುತ್ತಿಗೆಯನ್ನು ತೆಗೆದುಕೊಳ್ಳಲಾಗಿತ್ತು.

ನಾನು ಸ್ವಲ್ಪ ದೊಡ್ಡವಳಾದ ನಂತರ ಇಂತಹ ಪ್ರೀತಿಸುವಂತಹ ತಾಯಿಯ ನಿಜವಾದ ರೂಪವನ್ನು ನೋಡಿದೆ ಮತ್ತು ತಿಳಿದ ನಂತರ ನನ್ನ ಹೃದಯ ದುಃಖ ಮತ್ತು ಕಷ್ಟದಿಂದ ತುಂಬಿಹೋಯಿತು. ಅವರ ಆ ಚಿಕ್ಕ ಕತ್ತಲೆಯ ಕೋಣೆ, ಅವರ ತೆಕ್ಕನೆಯ ಮಂಚ, ಸನ್‌ಲೈಟ್ ಸಾಬೂನಿಂದ ತೊಳೆದಂತಹ ಹೊದೆಯುವ ಬಟ್ಟೆ, ಬಡತನದ, ಆದರೂ ಸ್ವಚ್ಛವಾದ ಹಾಸಿಗೆ, ನಾನು ಮೊದಲನೆಯ ಬಾರಿಗೆ ನನ್ನ

ಲೆಕ್ಕದಲ್ಲಿ ಅವರಿಗೆ ಒಂದು ಬಹಳ ದೊಡ್ಡ ಮತ್ತು ಭಾರೀ ವಾಗ್ದಾನ ಮಾಡಿದ್ದೆ.

"ಅಮ್ಮಾ, ನಾನು ದೊಡ್ಡವಳಾದ ಮೇಲೆ ನಿಮಗೆ ಬೆಳ್ಳಿಯ ಸಿಂಹಾಸನದ ಮೇಲೆ ತುಂಬ ಮೆದುವಾದ ರೇಷ್ಮೆಯಂತಹ ಹತ್ತಿಯಿಂದ ತುಂಬಿರುವ ಗಾದಿ, ಅದರ ಮೇಲೆ ರೇಷ್ಮೆಯ ಹೊದೆಯುವ ಬಟ್ಟೆ ಹಾಕಿ ಕೊಡಿಸುವೆ."

ಪ್ರಪಂಚದವರೆಲ್ಲ ಬಂದು ಅದನ್ನು ನೋಡಿ ಆಶ್ಚರ್ಯದಿಂದ ಕೇಳುವರು, "ಓ, ಇಂತಹ ಬೆಳ್ಳಿಯ ಸುಂದರ ಸಿಂಹಾಸನದ ಮೇಲೆ ಯಾರು ಕುಳಿತಿರುವರು?" ನಾನು ತುಂಬ ಹೆಮ್ಮೆಯಿಂದ, ಗರ್ವದಿಂದ ಎಲ್ಲರಿಗೂ ಹೇಳುವೆ, "ಇವಳು ನನ್ನ ತಾಯಿ" ಎಂದು.

ಅಮ್ಮ ತುಂಬ ಪ್ರೀತಿಯಿಂದ ನಕ್ಕಳು, ಮುಗುಳ್‌ನಕ್ಕು ಹೇಳಿದರು – "ಈ ಯೂಸುಫ್ ನನಗೇನು ಮಾಡುವುದಿಲ್ಲವೇನು?"

"ಏಕೆ ಮಾಡುವುದಿಲ್ಲ? ಅವನು ದೊಡ್ಡವನಾದ ಮೇಲೆ ನಿನಗೆ ಒಂದು ಚಂದ್ರನಂತಹ ಸೊಸೆ ತರುವನು, ಮತ್ತೆ ನಮ್ಮ ಮನೆಯಲ್ಲಿ ತುಂಬ ಚಿಕ್ಕ ಚಿಕ್ಕ ಮಕ್ಕಳು ಇರುವವರು, ಅವರ ಗಲಾಟೆಯಿಂದ ನೀನು ಗಾಬರಿಯಾಗಿ ಅವರ ಹಿಂದೆ ಓಡುವೆ."

ಈ ಕನಸನ್ನು ನಾನು ಮತ್ತು ಅಮ್ಮ ಇಬ್ಬರೂ ಒಟ್ಟುಗೂಡಿ ನೋಡಿದ್ದೆವು, ಆದರೆ ಈ ಕನಸಿನ ಸ್ವಪ್ನಾರ್ಥವೆಂದರೆ, ಅಮ್ಮನ ಯೌವ್ವನ ತುಂಬಿದ ಯುವಕ ಮಗ ಯುದ್ಧದಲ್ಲಿ ಸತ್ತುಹೋಗಿದ್ದ. ಆ ಆಸೆತುಂಬಿದ ಭಾಗ್ಯಹೀನ ತಾಯಿ ಪ್ರತಿ ಹದಿನೈದು ದಿನಕ್ಕೊಮ್ಮೆ ತನ್ನ ಮಗನಿಗೆ ಒಂದು ಪತ್ರ ಬರೆಸುತ್ತಾಳೆ: "ನನ್ನ ಅಂಗಗಳೆಲ್ಲ ಬಾಗಿಹೋಗಿವೆ, ತಲೆಯ ಮೇಲೆ ಸೂರ್ಯನ ನೆರಳು ಬೀಳುತ್ತಿದೆ, ದುಃಖಗಳು ಮತ್ತು ಘೋರಗಳು ನನಗೆ ಸಮಯದ ಮುಂಚೆಯೇ ವಿದಾಯ ಹೇಳಿದವು. ಇಂತಹ ಪರಿಸ್ಥಿತಿಯಲ್ಲಿ ಈ ಕಣ್ಣುಗಳಿಗೆ ಒಂದೇ ಒಂದು ಆಸೆ ಎಂದರೆ ನಿನ್ನನ್ನು ಮದುಮಗನಾಗಿ ನೋಡುವುದು."

ಅಮ್ಮ ನನಗೆ ಯೂಸುಫ್‌ಗಿಂತ ಏನೂ ಕಡಿಮೆ ಪ್ರೀತಿಸುತ್ತಿರಲಿಲ್ಲ, ಇಲ್ಲದಿದ್ದರೆ ಯೂಸುಫ್‌ನ ಬೇರ್ಪಡೆ ಅವರನ್ನು ಯಾವಾಗಲೋ ಸಾಯಿಸಿಬಿಡುತ್ತಿತ್ತೋ ಏನೋ – ಅವರಿಗೆ ಈ ಮಾತಿನ ಪ್ರಜ್ಞೆ ಇತ್ತು, ಅವರು ತುಂಬ ಪ್ರೀತಿಸುತ್ತಿದ್ದಾರೆ ಎಂದು ಮತ್ತು ನಾನು ದೇವರ ನಂತರ ಅವರ ಆಸರೆಯಿಂದಲೇ ಬದುಕಿದ್ದೆ.

ಇಂಥದರಲ್ಲಿ ಇದು ಎಂತಹ ಕಷ್ಟವಾದ ಮಾತಾಗಿತ್ತೆಂದರೆ, ನಾನು ಬಹಳ ವರ್ಷಗಳಿಂದ ಈ ಗುಟ್ಟನ್ನು ಸಾಕುತ್ತಲೇ ಬಂದಿದ್ದೆ.

ನನಗೆ ಹೇಗಾಗುತ್ತೆಂದರೆ, ನನ್ನ ಹೃದಯದಲ್ಲಿ ಗಾಯವಾಗಿ ಹೋಗಿ, ಈ ಭಾರ ಯಾವಾಗಲೋ ಎಷ್ಟೊಂದು ಹೊರಬಹುದೆಂದರೆ ನನ್ನ ಹೃದಯ ಒಡೆದುಹೋಗಬಹುದು.

ನಾನು ಆ ಒಂದು ದಿನದ ಬಗ್ಗೆ ಯೋಚಿಸುತ್ತಿದ್ದೆ – ಆ ಒಂದು ದಿನ,

ದುಃಖದಿಂದ ತುಂಬಿದ ದಿನ. ಕಾಗದ ಬಂದಿತು. ಆ ಕಾಗದದಲ್ಲಿ ಯೂಸುಫ್ ಯುದ್ಧದ ಮೈದಾನದಲ್ಲಿ ಮೃತಪಟ್ಟನು ಎಂದು ನಮಗೆ ತಿಳಿಸಲಾಗಿತ್ತು. ಆಗ ನಾನು ನನ್ನನ್ನು ಪ್ರತಿಬಂಧಿಸಿ, ಧೈರ್ಯ ಮಾಡಿ ಆ ದಿನವೇ ಅಮ್ಮನಿಗೆ ಹೇಳಿಬಿಟ್ಟಿದ್ದರೇ? 'ಅಮ್ಮಾ, ನೀನು ಯಾವ ಗಿಡ ನೆಟ್ಟಿದ್ದೆಯೋ ಅದು ತುಂಬ ಯೌವ್ವನದಲ್ಲಿ ಮತ್ತು ತುಂಬಿದ ವಸಂತದಲ್ಲಿ ತನ್ನ ಮುಖ ತಿರುಗಿಸಿಕೊಂಡಿದೆ. ಈಗ ಜೀವನವೆಲ್ಲ ನಿನ್ನ ಕಣ್ಣಲ್ಲಿ ನೀರು ಸೋರುವುದು.'ಹೀಗೆ ಹೇಳಿದ್ದಿದ್ದರೆ ಅವರು ದುಃಖ ತಡೆದು ಕಲ್ಲಾಗುತ್ತಿದ್ದರು. ಈ ಒಂದು ಆಕ್ರಮಣವನ್ನು ಸಹ ತಡೆದುಬಿಡುತ್ತಿದ್ದರೋ ಏನೋ?

ಆದರೆ ನಾನೇ ಈ ಕ್ರಮ ತೆಗೆದುಕೊಳ್ಳಲಿಲ್ಲ. ನಾನೇ ಒಂದು ದೊಡ್ಡ ಅಪಾಯಕಾರಿ ತೀರ್ಪನ್ನು ತೆಗೆದುಕೊಂಡೆ:

"ನಾನು ಜೀವನವೆಲ್ಲ-ಅಮ್ಮ ಬದುಕಿರುವವರೆಗೆ ರಹಸ್ಯವನ್ನು, ಯೂಸುಫ್ ಸತ್ತು ಹೋಗಿದ್ದಾನೆ ಎಂಬುವ ರಹಸ್ಯವನ್ನು, ರಹಸ್ಯವಾಗೇ ಇಡುತ್ತೇನೆ."

ಯೂಸುಫ್ ಪ್ರತಿ ತಿಂಗಳು ತನ್ನ ಸಂಬಳದಲ್ಲಿ ೨೫ ರೂಪಾಯಿಗಳನ್ನು ಕಳುಹಿಸುತ್ತಿದ್ದ.

ಈ ಪಯಣ ನನಗೆ ತುಂಬ ಕಠಿಣವಾಗಿತ್ತು - ನಾನು ಪ್ರತಿ ತಿಂಗಳು ರೂ. ೨೫ ಎಲ್ಲಿಂದ ತರಲಿ? ಹೇಗಾದರೂ ಆಗಲಿ, ನನಗೆ ಈ ಕಷ್ಟವನ್ನು ಕೂಡ ಸಹಿಸಲೇಬೇಕಿತ್ತು.

ಅಮ್ಮನ ಪರವಾಗಿ ನಾನು ಪತ್ರ ಬರೆಯುತ್ತಿದ್ದೆ - ಆ ಬಡಪಾಯಿಗೆ ಓದೋದು, ಬರೆಯೋದಂತು ಬರುತ್ತಿರಲಿಲ್ಲ. ಅವರು ಹೇಳಿದ ಹಾಗೆ ನಾನು ಬರೆಯುತ್ತಿದ್ದೆ. ನಂತರ ಯೂಸುಫ್‌ನ ಪರವಾಗಿಯೂ ಕೂಡ ನಾನೇ ಪತ್ರದ ಉತ್ತರ ಬರೆದು ಅಂಚೆ ಪೆಟ್ಟಿಗೆಗೆ ಹಾಕುತ್ತಿದ್ದೆ.

ಯೂಸುಫ್ ಬದುಕಿದ್ದಾಗ ವಿಶೇಷವಾದ ಮಿಲಿಟರಿ ನಂಬರುಗಳುಳ್ಳ ಪತ್ರಗಳು ಬರುತ್ತಿದ್ದವು. ಈಗ ಬರುತ್ತಿರುವ ಪತ್ರಗಳು ಆ ರೀತಿಯಾಗಿಲ್ಲ. ಬಹುಶಃ ಅಮ್ಮನಿಗೆ ಅನುಮಾನ ಬರಬಹುದಾಗಿತ್ತು. ಆದ್ದರಿಂದ ನಾನು ಕಾಗದಗಳನ್ನು ಒಂದು ನೋಟ್‌ಬುಕ್ಕಲ್ಲಿಟ್ಟುಕೊಂಡು ಅವರಿಗೆ ಪತ್ರ ಓದಿ ತಿಳಿಸುತ್ತಿದ್ದೆ - ಪ್ರತಿ ತಿಂಗಳು ತಪ್ಪದೇ ಮನಿಆರ್ಡರ್ ಕೂಡ ಮಾಡುತ್ತಿದ್ದೆ. ಅಮ್ಮ ಹೆಬ್ಬೆಟ್ಟು ಒತ್ತಿ ಆ ದುಡ್ಡು ಪಡೆದುಕೊಂಡು ತುಂಬ ಖುಷಿಯಾಗಿ ಖರ್ಚು ಮಾಡುತ್ತಿದ್ದರು.

"ಓ ಮಗಳೇ. ಈ ಸಲ ಬೆಳ್ಳಿಯ ಕಾಲುಚೈನು ತೆಗೆದುಕೊಳ್ಳೋಣ, ವಧು ಮನೇಲೆಲ್ಲ ಛಂ ಛಂ ಎಂದು ಓಡಾಡಿಕೊಂಡಿದ್ದರೇನೆ ಮನೆಯ ಲಕ್ಷಣ ಅಲ್ಲವೇ?"

"ಮಗಳೇ ಈ ಸಲ ಮೂಗಿನ ನತ್ತು ಮಾಡಿಸಿಬಿಡೋಣ. ನತ್ತು ಇಲ್ಲದಿದ್ದರೆ ವಧುವಿಗೆ ಪ್ರಭೆ ಬರುವುದಿಲ್ಲ, ಕಾಂತಿ ಇಳಿಯುವುದಿಲ್ಲ."

"ಮಗಳೇ, ಈ ತಿಂಗಳು ಬೆಳ್ಳಿಕಂಗನ್ ಖರೀದಿಸಿಕೊಳ್ಳೋಣ, ಬೆಳ್ಳಿ ಕಂಗನ್ ಝುಣ ಝುಣವೆಂದರೆ-----

ನನ್ನ ಮದುವೆ ಆಗಿಹೋದರೆ, ಈ ಗುಟ್ಟನ್ನು ಯಾರು ಸಾಕುವರು? ಎಂದು ನಾನು ಯೋಚಿಸುತ್ತಿದ್ದೆ.

ಮದುವೆಯಂತೂ ಆಗಲೇಬೇಕಿತ್ತು – ನನ್ನ ಮಾವನ ಮನೆಗೆ ಯಾಕೆ ಅಮ್ಮನನ್ನು ಕರೆದುಕೊಂಡು ಹೋಗಬಾರದು? ಎಂದು ಕೂಡ ಯೋಚಿಸುತ್ತಿದ್ದೆ.

ನಾವು ಯೋಚಿಸುವುದೇ ಒಂದು, ಆದರೆ ಸಮಯ ಮಾಡುವುದೇ ಇನ್ನೊಂದು – ನನ್ನ ನಿಶ್ಚಿತಾರ್ಥವಾಗಿ ಮಾತು ಗಟ್ಟಿಯಾಗಿತ್ತು. ಅಷ್ಟೆ, ಅಮ್ಮನಿಗೆ ನ್ಯುಮೋನಿಯಾ ಆಗಿಹೋಯಿತು ಮತ್ತು ಕೊನೆಯ ಕರೆ ಬಂದಿತು.

ಸಾಯುವವರಿಗೆ ಬಹುಶಃ ತಮ್ಮ ಕೊನೆಗಳಿಗೆ ಬಂದುಬಿಟ್ಟಿದೆ ಎಂದು ಗೊತ್ತಾಗಿ ಹೋಗುತ್ತದೆಯೋ ಏನೋ?

ಅವರು ನನಗೆ ಕರೆದು ತಡೆದು ತಡೆದು ಬಹಳ ಕಷ್ಟ ಪಟ್ಟು ಹೇಳಲು ಪ್ರಾರಂಭಿಸಿದರು:

"ಮಗಳೇ, ನೀನು ನಿಜವಾಗಲೂ ಸ್ವರ್ಗದವಳೇ – ನಿನ್ನಂತಹ ಹೆಣ್ಣುಮಕ್ಕಳು ಶತಮಾನಗಳಲ್ಲಿ ಒಮ್ಮೆ ಹುಟ್ಟುವರು – ನೀನು ನನಗೆ ಏನೇನನ್ನು ಮಾಡಿದ್ದೀಯೋ, ಅದನ್ನು ನಾನು ಜನ್ಮ ಕೊಟ್ಟಂತಹ ಮಗಳೂ ಕೂಡ ಮಾಡುತ್ತಿರಲಿಲ್ಲ."

"ಅಮ್ಮ, ನಾನು ನಿನ್ನ ಹೊಟ್ಟೆಯಿಂದ ಹುಟ್ಟಿರುವ ಮಗಳೇ ಕಣಮ್ಮ. ನೀನು ನನಗೆ ಜೀವನ ಕೊಟ್ಟಿದ್ದೆಯಮ್ಮ – ನಿನ್ನ ರಕ್ತ ಕುಡಿಸಿದ್ದೀಯ ಮತ್ತು ಮಕ್ಕಳು ಎಂದು ಯಾರಿಗೆ ಹೇಳುತ್ತಾರೆ ಅಮ್ಮ?"–

"ಇಲ್ಲ ಮಗಳೇ – ನೀನು ಮಾಡಿದಷ್ಟನ್ನು ಮಕ್ಕಳೂ ಮಾಡುತ್ತಿರಲಿಲ್ಲ."–

ಅವರು ಕಷ್ಟಪಟ್ಟು ಕಣ್ಣಲ್ಲಿ ನೀರು ತುಂಬಿಕೊಂಡು ತಡೆದು ತಡೆದು ಹೇಳುತ್ತಿದ್ದರು:

"ಮಗಳೇ, ಯೂಸುಫ್‌ನ ಸಾವಿನ ಕಾಗದ ಬಂದ ದಿನ ನಾನು ಪಕ್ಕದ ಕೊಠಡಿಯನ್ನು ಸ್ವಚ್ಛ ಮಾಡುತ್ತಿದ್ದೆ, ನಾನು ಅಡಿಗೆ ಮನೆಯಲ್ಲಿದ್ದೇನೆಂದುಕೊಂಡು ದೊಡ್ಡ ಮಾವನವರಿಗೆ ನೀನು ಕಾಗದ ಓದಿ ಹೇಳಿದೆ: "ಮಾವ, ಅಮ್ಮನಿಗೆ ಈ ಮಾತು ಗೊತ್ತಾಗಬಾರದು, ಇಲ್ಲದಿದ್ದರೆ ಅವರು ಅತ್ತು ಅತ್ತು ಪ್ರಾಣ ಬಿಟ್ಟುಬಿಡುತ್ತಾರೆ.––––"

"ಅಮ್ಮಾ"

ನಾನು ಕೂಗಿಕೊಂಡೆ, ಆದರೆ ಕೈ ಸನ್ನೆ ಮಾಡಿ ಅವರು ನನ್ನನ್ನು ಸುಮ್ಮನಿರಿಸಿದರು.

"ಆಗ ನಾನು ಕೂಡ ಯೋಚಿಸಿದೆ, ನನ್ನ ಮಗಳೇ ನನ್ನನ್ನು ದುಃಖಿಯಾಗಿ ನೋಡಲಾರೆ, ಆದ್ದರಿಂದ ನನಗೂ ಈ ಗುಟ್ಟನ್ನು ಸಾಕಲೇಬೇಕಾಗಿದೆ – ಮತ್ತು ನಾನು ಆ ಹಳೇರೀತಿಯನ್ನೇ ಖಾಯಂ ಆಗಿ ಇಟ್ಟುಕೊಂಡು ಬಂದೆ– ಸಾಯುವವನೇನೋ ಸತ್ತು ಹೋದ. ಆದರೆ ನಿನಗಾಗಿ ನನ್ನ ಹೃದಯ ಹೇಗೆ

ಮುರಿಯುತ್ತಿತ್ತು? ನನ್ನ ಮಗಳೇ-------"

"ಆದರೆ ಆಗ ಯೂಸುಫ್ ಸತ್ತು ಹೋಗಿದ್ದಾನೆಂದು. ನನಗೆ ಎಲ್ಲವೂ ಗೊತ್ತಾಗಿ ಹೋಗಿದೆಯೆಂದು ನಾನೇನಾದರೂ ಹೇಳಿದ್ದಿದ್ದರೆ, ನನ್ನ ದುಃಖ ನೋಡಲು ನಿನ್ನಿಂದ ಸಾಧ್ಯವಾಗುತ್ತಿರಲಿಲ್ಲ. ನನಗೆ ನಿನ್ನ ಕಣ್ಣೀರನ್ನು ನೋಡಲು ಸಾಧ್ಯವಾಗುತ್ತಿರಲಿಲ್ಲ-----"

ಅವರು ಇದೆಲ್ಲವನ್ನೂ ತಡೆದು ತಡೆದು ಹೇಳುತ್ತಿದ್ದರು. ನಾನು ಕಲ್ಲಿನ ವಿಗ್ರಹವಾಗಿ ಇದೆಲ್ಲ ಕೇಳುತ್ತಿದ್ದೆ.

"ಆ ಒಡವೆಗಳನ್ನೆಲ್ಲ ನಾನು ನಿನಗೋಸ್ಕರ ಖರೀದಿ ಮಾಡಿಟ್ಟದ್ದೇನೆ ಮಗಳೇ."

"ದುಡ್ಡು ಹೊರಟೇಹೋಗುತ್ತದೆ. ಅದಕ್ಕಿಂತ ವೇಗದಿಂದ ಹೋಗುವ ವಸ್ತುವನ್ನು ಇಲ್ಲಿಯವರೆಗೆ ನಾನು ನೋಡಲಿಲ್ಲ. ನಿಧಾನವಾಗಿ ಬಂದು ವೇಗದಿಂದ ಹೋಗುವುದು, ಅದರ ಕಾರಣದಿಂದಲೇ ನನ್ನ ಮಗ ಕೈ ಬಿಟ್ಟ. ನನ್ನಿಂದ ದೂರವಾದ"

"ನನ್ನ ಮಗಳು ತನ್ನ ಹೊಟ್ಟೆ ಕಟ್ಟಿ ಈ ದುಡ್ಡನ್ನು ನನಗೆ ಕಳಿಸುತ್ತಿದ್ದಾಳಲ್ಲ! ಇದನ್ನು ನಾನು ನಿರರ್ಥಕವಾಗಿ ಕಳೆಯಬಾರದೆಂದು ಯೋಚಿಸಿದೆ. ಈಗ ನನ್ನ ಕೊನೆ ಗಳಿಗೆ ಬಂದಾಗಿದೆ. ಮಗಳೇ, ನಿನ್ನ ಮುಂದೆ ಪೂರ್ತಿ ಜೀವನವಿದೆ, ದೇವರು ನನ್ನ ಪ್ರಾರ್ಥನೆಯನ್ನೇಕೆ ಫಲಿಸುವುದಿಲ್ಲ? ಅವನು ನಿನಗೆ ಜೀವನಪೂರ್ತಿ ಸುಖ, ಸಂತೋಷ ಕೊಡುತ್ತಾನೆ. ಮಗಳೇ – ನಿನ್ನ ಒಂದೇ ಒಂದು ಆಸೆ ನನ್ನನ್ನು ಬೆಳ್ಳಿಯ ಸಿಂಹಾಸನದ ಮೇಲೆ ಕೂಡಿಸುವುದು. ಆದರೆ ನೀನು ನನ್ನನ್ನು ಆ ಮಯೂರ ಸಿಂಹಾಸನದ ಮೇಲೆ ಕೂಡಿಸಿದ್ದೀಯಾ. ಅದಕ್ಕೆ ಹೃದಯವೆಂದು ಹೇಳುವರು – ನಾನು ಆ ಹೃದಯದ ದೊಡ್ಡಸ್ತಿಕೆಯ ಮುಂದೆ ನನ್ನ ತಲೆಯನ್ನು ಬಾಗಿಸುತ್ತೇನೆ." ಮತ್ತು ತಲೆಯನ್ನು ಬಗ್ಗಿಸುವ ಪ್ರಯತ್ನದಲ್ಲಿ ಮತ್ತೆ ಎಂದಿಗೂ ಏಳಲಾಗದೆ ಅಮ್ಮ ಮುಂದಕ್ಕೆ ಬಾಗಿದರು. ಅವರು ತತ್ತರಿಸಿ ಹಿಂದಕ್ಕೆ ಬಿದ್ದುಬಿಟ್ಟರು.

ನಾನು ಜೋರಾಗಿ ಅಳಬೇಕೆಂದಾಗೆಲ್ಲ ಅಮ್ಮನ ಆ ಮಾತು ಜ್ಞಾಪಕಕ್ಕೆ ಬರುತ್ತೆ – "ನಾನು ನಿನ್ನ ಕಣ್ಣಲ್ಲಿ ಕಣ್ಣೀರನ್ನು ನೋಡಲಾಗದೆ ಈ ರಹಸ್ಯವನ್ನು ಸಾಕುತ್ತ ಬಂದೆ." ನಾನು ಕಣ್ಣೀರನ್ನು ತಡೆಯಬೇಕೆಂದುಕೊಳ್ಳುತ್ತೇನೆ. ತಡೆದುಬಿಡುತ್ತೇನೆ. ಆದರೆ ಈ ಅಳುತ್ತಿರುವ ಹೃದಯವನ್ನು ಹೇಗೆ ಅಳಬೇಡ ಎಂದು ಹೇಳಲಿ? ಹೇಗೆ ಸಮಾಧಾನಗೊಳಿಸಲಿ?

* * *

# ಮಾಕಳಿದುರ್ಗದ ನಾಯಿ

**ತೆಲುಗು ಮೂಲ : ವಿಶ್ವನಾಥ ಸತ್ಯನಾರಾಯಣ        ಅನು : ಗುರುಮೂರ್ತಿ ಪೆಂಡಕೂರ**

ಮಾಕಳಿದುರ್ಗ ರೈಲುನಿಲ್ದಾಣವು ಗುಂತಕಲ್-ಬೆಂಗಳೂರು ರೈಲು ಮಾರ್ಗದಲ್ಲಿದೆ. ಪ್ಲಾಟ್‌ಫಾರಂನಿಂದ ರೈಲುನಿಲ್ದಾಣವು 30-40 ಅಡಿ ಎತ್ತರದಲ್ಲಿದೆ. ರೈಲುಮಾರ್ಗದ ಪಕ್ಕದಲ್ಲಿಯೇ ದೊಡ್ಡಬೆಟ್ಟವಿದೆ. ಈ ಬೆಟ್ಟದ ಮೇಲೆಲ್ಲಾ ಸಣ್ಣಪುಟ್ಟ ಪೊದೆಗಳೂ, ಗಿಡ-ಮರಗಳೂ, ಕಲ್ಲುಗುಂಡುಗಳೂ ಇವೆ. ಆಗಾಗ ಚಿರತೆಗಳು, ಸಿವಂಗಿಗಳೂ ರೈಲುನಿಲ್ದಾಣದೊಳಕ್ಕೆ ಬರುತ್ತಿರುತ್ತವೆ. ರೈಲುನಿಲ್ದಾಣದ ಹಿಂದೆ ಆಳವಾದ ಕಣಿವೆ. ಅದರಾಚೆಯಿರುವ ಬೆಟ್ಟದ ಮೇಲೆ ಅರಮನೆಯಂಥಾ ಮನೆ. ಈ ಕಣಿವೆಯಲ್ಲಿ ಎರಡು-ಮೂರು ಹಳ್ಳಗಳೂ ಹರಿಯುತ್ತವೆ.

ಮಾಕಳಿದುರ್ಗ ರೈಲುನಿಲ್ದಾಣವು ತುಂಬಾ ಸಣ್ಣದು. ಅಲ್ಲಿರುವ ಒಂದೇ ಅಂಗಡಿ ರೈಲುಗಳು ಬರುವ ವೇಳೆಗೆ ಮಾತ್ರ ತೆರೆದಿರುತ್ತದೆ. ಈ ಅಂಗಡಿ ತೆರೆದಾಗಲೆಲ್ಲಾ ಒಂದು ನಾಯಿ ಮಾತ್ರ ಅಲ್ಲಿ ಹಾಜರು. ಅಂಗಡಿ ಎತ್ತರದಲ್ಲಿದೆ ಆದರೆ ಈ ನಾಯಿಯು ಆ ಅಂಗಡಿಯ ಖಾನೆಗಳಲ್ಲಿರುವ ಮಿಠಾಯಿ ಮತ್ತಿತರ ವಸ್ತುಗಳು ಕಾಣುವಂತೆ ನಿಂತು ತಪಸ್ಸು ಮಾಡುತ್ತದೆ. ಎಂಟು ಹತ್ತು ದಿನ ಮೊದಲು ಮಾಡಿದ ಪಕೋಡಾ ಕೊಂಡವನೊಬ್ಬ ಹಳಸುವಾಸನೆ ಗಮನಿಸಿ ಬೀಸಾಡಿದನು. ಆಗ ಈ ನಾಯಿಯು ಆ ಪಕೋಡವನ್ನು 'ಗಬಕ್ಕನೆ' ಮುಂದಿನ ಹಲ್ಲುಗಳಲ್ಲಿ ಕಚ್ಚಿ ಗಟಗಟನೆ ತಿಂದು, ಕೆಮ್ಮ ಬಂದಂತಾಗಿ ಕಕ್ಕುತ್ತದೆ. ರೈಲು ಕದಲಿದ ಕೂಡಲೇ ಅಂಗಡಿ ಹಾಕುತ್ತಾರೆ. ಅಂಗಡಿಯವನು ಎಂದಾದರೂ ಸಾಮಾನು ಸರಿಮಾಡುವಾಗಲಾಗಲೀ, ಅಲ್ಲಿ ತಿನಿಸು ಕೊಂಡವರ ಕೈಯಿಂದ ಅಕಸ್ಮಾತ್ ತುಂಡು ತುಣುಕು ಜಾರಿ ಬೀಳಬಹುದೆಂದೊ, ಎದುರು ನೋಡುತ್ತದೆ. ವಾರಕ್ಕೋ ಹತ್ತುದಿನಕ್ಕೋ ಇದು ಸಂಭವಿಸಬಹುದೇನೋ? ಆದರೆ ನಾಯಿ ಅಲ್ಲಿಂದ ಹೊರಟು ಕಾಲುವೆಯಲ್ಲಿ ನೀರು ಕುಡಿಯುತ್ತದೆ. ಮುಂದಿನ ಕಾಲು ಚಾಚಿ ಹುಲ್ಲಿನ ಮೇಲೆ ಮಲಗಿ ಎಳೆಯ ಹುಲ್ಲನ್ನು ತಿನ್ನುತ್ತದೆ. ಈ ನಾಯಿ ಮಿಡತೆಗಳನ್ನು ಬೇಟೆಯಾಡುವುದರಲ್ಲಿ ಜಾಣ. ಆಗಾಗ ಹೊಲದಲ್ಲಿಯ ಕ್ರಿಮಿಗಳನ್ನೂ ತಿನ್ನುತ್ತದೆ. ಹಳ್ಳದ ನೀರು, ಬೆಟ್ಟದ ಗಾಳಿ, ಕಣಿವೆಯಲ್ಲಿ ಇಳಿಯುವುದೂ-ಹತ್ತುವುದೂ ಮಾಡುವುದರಿಂದ ನಾಯಿಯು ಬಲಿಷ್ಠವಾಗಿದೆ. ಆದರೆ ಈ ನಾಯಿಯು ಅಪ್ಪಿತಪ್ಪಿ

ಕೂಡಾ ಪಕ್ಕದ ಬೆಟ್ಟದ ಮೇಲೆ ಹೋಗುವುದಿಲ್ಲ.

ಒಮ್ಮೆ ಒಬ್ಬ ದೊಡ್ಡ ಮನುಷ್ಯರು ಒಂದು ಸೀಮೆಯ ಹೆಣ್ಣುನಾಯಿಯನ್ನು ಸ್ಟೇಷನ್ನಿಗೆ ತಂದರು. ಇವೆರಡಕ್ಕೆ ಮೊದಲ ನೋಟದಲ್ಲಿಯೇ ಪ್ರಣಯ ಉಂಟಾಯಿತು. ಆ ದೊಡ್ಡ ಮನುಷ್ಯನ ಕೈಯಲ್ಲೊಂದು ಬೆತ್ತವಿದೆ. ಆ ಬೆತ್ತವನ್ನು ಕಂಡ ನಮ್ಮ ನಾಯಿ ತಮ್ಮ ಪ್ರಿಯತಮೆಯ ಹತ್ತಿರ ಹೋಗಲಿಲ್ಲ. ತವರುಮನೆಯಲ್ಲಿರುವ ಕನ್ಯೆಯಂತೆ ಹೆಣ್ಣುನಾಯಿ ಮಾತ್ರ ನಿರ್ಭಯವಾಗಿ ತನ್ನ ಪ್ರಿಯತಮನನ್ನು ನೋಡುತ್ತಿತ್ತು. ಆ ದೊಡ್ಡ ಮನುಷ್ಯರು ತನ್ನನ್ನೆಲ್ಲಿ 'ಪೋಕಂ' ಎಂದಾರೆಂದು ಈ ದುರ್ಗದ ನಾಯಿ ತನ್ನ ಪ್ರಿಯತಮೆಯನ್ನು ನೇರವಾಗಿ ನೋಡದೇ ವಾರೆನೋಟ ಬೀರುತ್ತಿತ್ತು. ಆ ದೊಡ್ಡ ಮನುಷ್ಯನು ತನ್ನ ನಾಯಿಯನ್ನು ಅಲ್ಲಿ ಕಟ್ಟಿ ಹಾಕಿ, ಲಗೇಜು ತೂಕಮಾಡಿಸಲು ಹೋದ. ಆಗ ಎರಡು ನಾಯಿಗಳು ಕಲೆತುಕೊಂಡವು

ಸ್ಟೇಷನ್ ಮಾಸ್ಟರು ಸ್ವಲ್ಪ ಓದಿಕೊಂಡ ಮನುಷ್ಯ. ಆತನಿಗೂ ದೊಡ್ಡ ಮನುಷ್ಯರಿಗೂ ಆಧುನಿಕ ಸಿದ್ಧಾಂತ-ರಾದ್ಧಾಂತಗಳ ಚರ್ಚೆ ಆರಂಭವಾಗಿತ್ತು.

**ಸ್ಟೇಷನ್ ಮಾಸ್ಟರ್ :** ಅಲ್ಲರೀ, ವರ್ಣಾಶ್ರಮ ವ್ಯವಸ್ಥೆ ಇರಬೇಕು. ನಮ್ಮ ಪೂರ್ವಿಕರು ಅದನ್ನು ಏನು ಕಾರಣ ಅಂಗೀಕರಿಸಿದರೆಂದು ಅರ್ಥ ಮಾಡಿಕೊಳ್ಳದೆ ಅದನ್ನು ನಿರಾಕರಿಸುವುದು ತಪ್ಪಲ್ಲವೇ?

**ದೊಡ್ಡ ಮನುಷ್ಯ :** ಹಾಗಂದರೆ ಹೇಗೆ? ಈ ಸಿದ್ಧಾಂತಗಳೇನು? ಪೂರ್ವಿಕರು ಹೇಳಿದರು ಎಂದು ಅನುಸರಿಸುವ ಕಾಲ ಹೋಯ್ತು. ಪ್ರತಿಯೊಂದೂ ಸಮರ್ಥನೆಗೆ ಗುರಿಯಾಗಬೇಕು. ಸಮರ್ಥಿಸಲಾಗದ ಮಾತು ನಮಗೆ ಒಪ್ಪಿಗೆಯಾಗುವುದಿಲ್ಲ.

**ಸ್ಟೇಷನ್ ಮಾಸ್ಟರ್:** ಹಿಂದಿನವರು ಯಾವ ಲಾಭೋದ್ದೇಶದಿಂದ ಈ ವ್ಯವಸ್ಥೆ ಮಾಡಿದರೋ ನಮಗೆ ಗೊತ್ತಿಲ್ಲ. ಅದನ್ನು ತಿಳಿದುಕೊಳ್ಳುವ ಬುದ್ಧಿಶಕ್ತಿಯೂ ನಮಗಿಲ್ಲ.

**ದೊಡ್ಡ ಮನುಷ್ಯ :** ಇದು ಸರಿಯಲ್ಲ. ಕಾಲ ಸರಿದಂತೆ ಜ್ಞಾನವು ವೃದ್ಧಿಯಾಗುತ್ತದೆ. ಕಡಿಮೆ ಆಗೋಲ್ಲ. ನಮ್ಮ ಪೂರ್ವಿಕರಿಗೆ ನಮಗಿರುವಷ್ಟು ಆಲೋಚನಾಶಕ್ತಿ ಇರಲಿಲ್ಲವೆನಿಸುತ್ತದೆ. ಮನೋವಿಜ್ಞಾನ, ಪದಾರ್ಥವಿಜ್ಞಾನ ಆಗೆಲ್ಲಿದ್ದವು?

**ಸ್ಟೇಷನ್ ಮಾಸ್ಟರ್ :** ಹಾಗಾದರೆ ನೀವು ವರ್ಣಾಶ್ರಮ ವ್ಯವಸ್ಥೆಯನ್ನು ತೆಗೆದು ಹಾಕಬೇಕೆನ್ನುವಿರಾ?

**ದೊಡ್ಡ ಮನುಷ್ಯ :** ಹೌದು, ತೆಗೆದುಹಾಕಬೇಕು. ಈ ವ್ಯವಸ್ಥೆಯಿಂದಲೇ ಮೇಲು-ಕೀಳುಭಾವನೆಗಳು ಉಂಟಾಗಿವೆ. ಅನವಶ್ಯಕವಾಗಿ ಕೆಲವರನ್ನು ದೊಡ್ಡವರೆಂದುಕೊಂಡಿದ್ದೇವೆ. ಕೆಳಜಾತಿಯವರ ಮೇಲೆ ಅವರು ಅಧಿಕಾರ ಚಲಾಯಿಸುತ್ತಿದ್ದಾರೆ. ವರ್ಣಾಂತರ ವಿವಾಹಗಳೂ,

ಸಹಭೋಜನಗಳೂ ನಡೆಯಬೇಕು. ಆಗಲೇ ಈ ದೇಶಕ್ಕೆ ಮುಕ್ತಿ.

**ಸ್ಟೇಶನ್ ಮಾಸ್ಟರ್ :** ಸಮಸ್ತ ಭೂತಗಳಲ್ಲಿ ಸಮತೆ ಇರಬೇಕು. ಆದರೆ ವರ್ಣಾಂತರ ವಿವಾಹಗಳು ಸರಿಯಲ್ಲ. ಮೇಲೆ ಕಾಣುವ ತರತಮ ಭಾವಗಳನ್ನು ಮನಸಾ ಇಲ್ಲದಂತೆ ಮಾಡಬೇಕು. ನಮ್ಮ ಪೂರ್ವಿಕರ ಅಭಿಪ್ರಾಯವೂ ಅದೇ.

**ದೊಡ್ಡ ಮನುಷ್ಯ :** ನಮ್ಮವರು ಹಾಗೇನೂ ಹೇಳಲಿಲ್ಲ. ನಮ್ಮವರು ಸಮಾಜಕ್ಕೆ ಮಾಡಿದ ದ್ರೋಹ ಅಷ್ಟಿಷ್ಟಲ್ಲ.

ದೊಡ್ಡ ಮನುಷ್ಯರು ಹೊರಗೆ ಬಂದರು. ತನ್ನ ನಾಯಿಯ ಕಡೆ ನೋಡಿದರು. ಎರಡೂ ನಾಯಿಗಳು ವರ್ಗಭೇದವನ್ನು ಮರೆತು ಆಡಿಕೊಂಡಿವೆ. ಅವರು ಹತ್ತಿರ ಹೋಗಿ ದುರ್ಗದ ನಾಯಿಗೆ ಬೆತ್ತದಿಂದ ಹತ್ತು ಹನ್ನೆರಡು ಬಾರಿಸಿದರು. ಮಮತೆಯನ್ನು ಬೆಳೆಸಿಕೊಂಡಿದ್ದ ಆ ನಾಯಿಯು ಓಡಲಾರದೇ ಬಿಟ್ಟು ಹೋಯಿತು. ಸ್ಟೇಶನ್ ಹೊರಗೆ ಬರುವಾಗ ಅದಕ್ಕೆ ಒಂದು ಕಾಲು ಮುರಿದದ್ದು ತಿಳಿಯಿತು. ದೊಡ್ಡ ಮನುಷ್ಯರು ತನ್ನ ನಾಯಿಗೂ ನಾಲ್ಕು ಬಾರಿಸಿದರು.

ಸ್ಟೇಶನ್ ಮಾಸ್ಟರು ಈ ಗಲಾಟೆಯನ್ನು ಕೇಳಿ ಹೊರಗೆ ಬಂದರು. ಎಲ್ಲಾ ಸಂಗತಿಯನ್ನು ತಿಳಿದರು 'ಸ್ವಾಮಿ, ಆ ನಾಯಿಯನ್ನೇಕೆ ಆ ಪರಿ ಹೊಡೆದಿರಿ?'

**ದೊಡ್ಡ ಮನುಷ್ಯ:** ಇದು ಸೀಮೆ ನಾಯಿ. ಇದಕ್ಕೆ ಅದೇ ಜಾತಿಯ ಗಂಡುನಾಯಿಯನ್ನು ಖರೀದಿಸಲು ಪ್ರಯತ್ನಿಸಿದೆ. ಸಿಗಲಿಲ್ಲ. ಈಗ ಇದು ಬೆದೆಗೆ ಬಂದಿದೆ. ಈ ಜಾತಿಯ ಗಂಡುನಾಯಿಯ ಜೊತೆ ಕೂಡಿಸಲೆಂದು ಬೆಂಗಳೂರಿಗೆ ಕರೆದೊಯ್ಯುತ್ತಿದ್ದೇನೆ.

ಸ್ಟೇಷನ್ ಮಾಸ್ಟರು ನಸುನಕ್ಕರು. ದೊಡ್ಡಮನುಷ್ಯರು ನಗಲಾರದೇ ನಕ್ಕರು. ಆನಂತರ ಅವರಿಬ್ಬರೂ ಸ್ನೇಹದಿಂದ ಮಾತಾಡಿಕೊಂಡರು. ಸ್ಟೇಶನ್ ಮಾಸ್ಟರು ಸೀಮೆನಾಯಿಯ ಅಂದವನ್ನೂ, ಅದರ ಮುಖದ ಮೇಲಿನ ಮಚ್ಚೆಯನ್ನೂ, ಬಾಲದ ಗೊಂಡೆಯನ್ನೂ ಅದರ ಗೋಧಿವರ್ಣವನ್ನು ನೋಡಿ ಮೆಚ್ಚಿಕೊಂಡ. ಇದು ಮರಿಹಾಕಿದರೆ ತನಗೊಂದು ಮರಿ ಕೊಡಬೇಕೆಂದು ಮಾತು ಪಡೆದನು.

ಊರನಾಯಿಯ ಸಂಪರ್ಕದಿಂದ ಸೀಮೆನಾಯಿಯ ಮೈಯೆಲ್ಲಾ ಗಲೀಜಾಗಿತ್ತು. ಕೆಲದಿನಗಳ ಮುಂಚೆ ಮಳೆಬಂದು ಬಂಡೆಗಳ ಮೇಲೆ ಅಲ್ಲಲ್ಲಿ ನೀರು ನಿಂತಿದ್ದವು. ದೊಡ್ಡ ಮನುಷ್ಯರು ಆ ನೀರಿನಲ್ಲಿ ನಾಯಿಗೆ ಸ್ನಾನ ಮಾಡಿಸಿ ಅದನ್ನು ವಸ್ತ್ರದಿಂದ ಒರೆಸಿ ಶುಭ್ರಮಾಡಿದನು. ಇಷ್ಟರಲ್ಲಿ ರೈಲು ಬಂತು. ಕಂಯ್ ಕಂಯ್ ಎಂದು ಅರಚುತ್ತಿದ್ದ ನಾಯಿಯನ್ನು ವಸ್ತ್ರದಲ್ಲಿ ಸುತ್ತಿ, ಬಗಲಲ್ಲಿ ಎತ್ತಿಕೊಂಡು ಆತ ರೈಲು ಹತ್ತಿದನು. ಊರನಾಯಿ ದೂರ ನಿಂತು ಹೆಣ್ಣು ನಾಯಿಯನ್ನು ನೋಡುತ್ತಾ ಕುಂಟುತ್ತಾ ಮುಲುಗುತ್ತಿತ್ತು. ಆತ ಕಿಟಕಿಯಿಂದ ಆ ನಾಯಿಯ ಕಡೆಗೆ ಬೆತ್ತ ತೋರಿಸಿ ಬೆದರಿಸಿದ. ಅದು ಇನ್ನಷ್ಟು ದೂರ ಹೋಯಿತು.

ರೈಲು ಸಾಗಿತು. ಸೀಮೆನಾಯಿ ಕಂಯ್ ಕಂಯ್ ಮಾಡುತ್ತಾ ಬಾಗಿಲ ಹತ್ತಿರ ಹೋಯಿತು. ಬಗ್ಗಿ ನೋಡಿತು. ಯಜಮಾನ ಚೈನು ಹಿಡಿದು ಎಳೆಯುತ್ತಾನೆ. ರೈಲು ಬೆಂಗಳೂರು ಸೇರಿದ ಮೇಲೆ ಅದು ಅಳು ನಿಲ್ಲಿಸಿ, ಯಜಮಾನನ ಹತ್ತಿರ ಕುಳಿತುಕೊಂಡಿತು. ಆತ ಅದನ್ನು ತೊಡೆಯ ಮೇಲೆ ತೆಗೆದುಕೊಂಡ "ಲೀಲಾ, ಹಾಗೆ ಮಾಡಬಹುದಾ?" ಎಂದು ಅದನ್ನು ಮುದ್ದಾಡುತ್ತಿದ್ದನು. ಈವರೆಗೆ ಊರನಾಯಿ ಇದೇ ಕೆಲಸ ಮಾಡಿದರೆ ಸಂತೋಷಪಟ್ಟ ಸೀಮೆನಾಯಿ ಯಜಮಾನನ ಮುದ್ದನ್ನು ಪರಪುರುಷ ಚುಂಬನದಂತೆ ನಿರಾಕರಿಸಿತು.

ದುರ್ಗದ ನಾಯಿ ತನ್ನ ಕುಂಟಕಾಲನ್ನು ಬಂಡೆಗೆ ಮರಕ್ಕೆ ತಿಕ್ಕಿ; ಹಳ್ಳದ ದಂಡೆಯ ಕೆಸರಿನಲ್ಲಿ ಅದ್ದಿ ಎರಡು ವಾರದಲ್ಲಿ ಸರಿಮಾಡಿಕೊಂಡಿತು. ಈಗ ಮತ್ತೆ ರೈಲು ನಿಲ್ದಾಣಕ್ಕೆ ಬರುತ್ತಿದೆ. ಮಿಠಾಯಿ ಅಂಗಡಿಯನ್ನು ನೋಡುತ್ತಿದೆ.

ಒಂದು ದಿನ ಇಬ್ಬರು ವಿದ್ಯಾರ್ಥಿಗಳು ಅಲ್ಲಿಗೆ ಬಂದು ಏನೋ ತಿನಿಸು ಕೊಂಡು ಅಲ್ಲಿನ ಬೆಂಚಿನ ಮೇಲೆ ಕೂತು ತಿನ್ನುತ್ತಾ ಹರಟುತ್ತಿದ್ದರು. ಅವರ ಮಾತುಗಳು ನಾಯಿಯ ಕಿವಿಗೆ ಬಿದ್ದವು.

ಒಬ್ಬ : ನಮ್ಮ ದೇಶದಲ್ಲಿ ಭೂತದಯೆಯೆಂಬುದೇ ಇಲ್ಲ. ದೊಡ್ಡವರೆಲ್ಲಾ ಸಣ್ಣವರ ಮೇಲೆ ದರ್ಪ ತೋರಿಸುತ್ತಾರೆ. ನಾನು ಬಿ.ಎ. ಪಾಸಾಗಿದ್ದೇನೆ. ಉದ್ಯೋಗವೇ ಸಿಗುತ್ತಿಲ್ಲ. ಬಡವರು ತುಂಬಾ ಕಷ್ಟದಲ್ಲಿದ್ದಾರೆ. ಬಲ್ಲಿದರು ಸುಖಲೋಲುಪರಾಗಿದ್ದಾರೆ.

ಇನ್ನೊಬ್ಬ : ನಮ್ಮವರು ಪರಮ ಸ್ವಾರ್ಥಿಗಳು, ಹಿಡಿ ಭಿಕ್ಷೆಯನ್ನೂ ನೀಡುವುದಿಲ್ಲ. ನಾಯಿ ಅವರ ಹತ್ತಿರ ಹೋಗಿ ಅವರ ಕೈಯಿನ ಪೊಟ್ಟಣವನ್ನು ನೋಡುತ್ತಿತ್ತು. ಅವರಿಬ್ಬರೂ ಇಂಗ್ಲಿಷ್‌ನಲ್ಲಿ ಮಾತಾಡುತ್ತಿದ್ದರು. ಅವರಲ್ಲೊಬ್ಬನು ಬೂಟು ಹಾಕಿಕೊಂಡು ಕಾಲ ಮೇಲೆ ಕಾಲು ಹಾಕಿ ಕುಳಿತಿದ್ದನು. ಅವನು ಬೂಟುಗಾಲಿನಿಂದ ನಾಯಿಯ ಹೊಟ್ಟೆಗೆ ಒದ್ದನು. ಅದು ಎರಡು–ಮೂರು ದಿನದಿಂದ ಕೂಳಿಲ್ಲದೇ ನರಳುತ್ತಿದೆ. ಆ ಒದೆತ ಅದರ ಹೊಟ್ಟೆಯ ಯಾವ ನರಕ್ಕೆ ತಗುಲಿತೋ, ಅದು ಬವಳಿಬಂದಂತಾಗಿ ಬಿದ್ದುಬಿಟ್ಟಿತು. ಸ್ವಲ್ಪಕಾಲಾನಂತರ ಅದಕ್ಕೆ ಎಚ್ಚರವಾಯಿತು. ಇನ್ನೊಬ್ಬ ವಿದ್ಯಾರ್ಥಿ ತನ್ನ ಕೈಯ ಪೊಟ್ಟಣದಿಂದ ನಾಯಿಗಿಷ್ಟು ಹಾಕಿದನು. ಅದು ನೋವಿನಿಂದ ನರಳುತ್ತಾ ಅದನ್ನು ಮುಟ್ಟಲೇ ಇಲ್ಲ.

ಅಂದು ಸಾಯಂಕಾಲ ಚಿರತೆಯೊಂದು ಬೆಟ್ಟದಿಂದ ಕೆಳಗಿಳಿದು ಬಂದು ರಾತ್ರಿ ಸ್ಟೇಷನ್‌ನೊಳಗೆ ಬಂದಿತು. ನಾಯಿ ಹೆದರಿ ಅಂಗಡಿಯ ಅಡಿಗೆ ಗೂಡಿನಂತಿದ್ದ ಜಾಗದಲ್ಲಿ ಅಡಗಿಕೊಂಡಿತು. ನಡುರಾತ್ರಿಯಲ್ಲಿ ಸ್ಟೇಷನ್ ನಿರ್ಜನವಾಗಿದೆ. ಚಿರತೆಯು ಆ ಅಂಗಡಿಯ ಹತ್ತಿರವೇ ಹಟಮಾರಿಯಂತೆ ಕೂತುಕೊಂಡಿದೆ. ಚಿರತೆಯು ಗೂಡಿನಲ್ಲಿ ಇಣುಕಿದರೆ ನಾಯಿಯು ಅದನ್ನು ಪರಚಿತು. ಹಿಂತಿರುಗಿ ಕೂತರೆ ಅದರ ಬಾಲ ಮತ್ತು ಪೃಷ್ಠಭಾಗವನ್ನು ಕಚ್ಚಿತು. ಅದೇನಾದರೂ ಮೈಮರೆತರೆ ಹೊರಬಂದು ಅದರ ಮೇಲೆ ದಾಳಿ ಮಾಡಿತು. ಅದು ತನ್ನನ್ನು ಕಚ್ಚಲು ಬಂದರೆ ಭದ್ರವಾಗಿ

ಗೂಡಿನಲ್ಲಿ ಅವಿತುಕೊಳ್ಳುತ್ತಿತ್ತು. ಈ ರೀತಿಯಲ್ಲಿ ಮೂರುನಾಲ್ಕು ತಾಸು ಕಣ್ಣಾಮುಚ್ಚಾಲೆ ಆಡಿ ಒಮ್ಮೆ ನಾಯಿ ಚಿರತೆಯ ಬಾಲವನ್ನು ಕಚ್ಚಿ ಅದು ಸಾಯುವವರೆಗೆ ಬಿಡಲಿಲ್ಲ.

ಬೆಳಗಾದ ಮೇಲೆ ಎಲ್ಲರೂ ಬಂದರು. ನಾಯಿಯ ಸಾಹಸವನ್ನು ಕಂಡರು. ಕಳೆದೆರಡು ವರುಷಗಳಿಂದ ಅಸಡ್ಡೆಗೆ ಗುರಿಯಾದ ಆ ನಾಯಿಗೆ ಈಗ ಭಾರೀ ಗೌರವ ದೊರೆಯಿತು. ಸ್ಟೇಷನ್ ಮಾಸ್ಟರು ಅದಕ್ಕೆ ಪ್ರತಿದಿನ ಅನ್ನ ಹಾಕುವ ವ್ಯವಸ್ಥೆ ಮಾಡಿದರು. ಆ ದಿನ ಸಂಜೆ ಆ ಅಂಗಡಿಯವನಿಗೂ ಅಪಾರ ಕರುಣೆ ಉಂಟಾಯಿತು. ಈವರೆಗೆ ಒಂದು ಬುಂದೀಕಾಳನ್ನೂ ಅದಕ್ಕೆ ಹಾಕದ ಆ ಜಿಪುಣಾಗ್ರೇಸರನು ಈ ದಿನ ಅದಕ್ಕೆ ಮಿಠಾಯಿ ತಿನಬಡಿಸಿದನು. ಆ ಮಿಠಾಯಿ ಮಾರಾಟವಾಗದ ವಸ್ತು. ಮಾರಾಟವಾಗದೇ ಉಳಿದ ಆ ಮಿಠಾಯಿಯನ್ನು ವಾರಕ್ಕೊಮ್ಮೆ ಎಣ್ಣೆಯಲ್ಲಿ ಕರಿದು ನವೀಕರಿಸಿಟ್ಟರೂ ಅದು ಖರ್ಚಾಗಿರಲಿಲ್ಲ. ನಾಯಿಯ ಮೇಲೆ ಅಪಾರ ಕರುಣೆ ಹುಟ್ಟಿ ಅದನ್ನು ಈದಿನ ಅದಕ್ಕೆ ಹಾಕಿದನು. ಅದು ಪ್ರೀತಿಯಿಂದ ತಿಂದಿತು. ಮರುದಿನ ರಾತ್ರಿ ನಾಯಿಗೆ ಉದರ ಬೇನೆ ಒಂದು ಯಾತನೆಯಿಂದ ರಾತ್ರಿಯೆಲ್ಲಾ ರೋದಿಸುತ್ತಿತ್ತು. ಮನೆಯಲ್ಲಿ ಮಲಗಿದ್ದ ಸ್ಟೇಷನ್ ಮಾಸ್ತರು, ಪೋರ್ಟರರೂ ಮತ್ತೆ ಚಿರತೆಗಳು ಬಂದಿರಬೇಕೆಂದು ಭಾಪಿಸಿದರು. ನಾಯಿ ಹಗಲೆಲ್ಲಾ ಹೊಲ-ಗದ್ದೆಗಳಲ್ಲಿ ತಿರುಗಾಡತೊಡಗಿತು. ಅದಕ್ಕೇನೋ ವಾತರೋಗ ಉಂಟಾಗಿರಬೇಕು. ಸಿಕ್ಕ ಸಿಕ್ಕ ಎಲೆಗಳನ್ನೆಲ್ಲಾ ತಿಂದಿತು. ಯಾವ ವನಸ್ಪತಿಯೂ ಕೆಲಸ ಮಾಡಲಿಲ್ಲ. ಕೆಸರು ನನ್ನಿಂದಾಗದೆಂದು ತಿಳಿಸಿತು. ಹಳ್ಳದ ನೀರು ಇದು ನನ್ನಿಂದಾಗದ ಕೆಲಸ ಎಂದಿತು. ರಾತ್ರಿಯೆಲ್ಲಾ ಸ್ಟೇಷನ್‌ನಲ್ಲಿ ಮಲಗಿ ರೋದಿಸುತ್ತದೆ. ಸುಮ್ಮನೆ ಉರುಳಾಡುತ್ತದೆ. ತನ್ನ ಸೊಂಟದ ಮೇಲೆ ರೈಲೇ ಹೋಯಿತೇನೋ ಎಂಬಂತೆ ಆಕ್ರಂದನ ಮಾಡುತ್ತದೆ. ಒಂದು ವಾರಕಾಲ ಈ ರೀತಿ ಒದ್ದಾಡಿದ ಮೇಲೆ ಅದರ ಬಾಧೆ ಉಪಶಮನವಾಯಿತು. ಎರಡುದಿನ ಉಪವಾಸವಿದ್ದರೂ ಚಿರತೆಯನ್ನು ಕೊಂದ ಈ ನಾಯಿಯು ವಾರಕಾಲದಲ್ಲಿ ಸೊರಗಿ ಕಡ್ಡಿಯಂತಾಯಿತು. ಅದರ ಹಿಂದಿನ ಕಾಲುಗಳಂತೂ ನಿಷ್ಪ್ರಯೋಜಕವಾಗಿದ್ದವು. ಅದು ಎಲ್ಲೋ ಒಂದು ಕಡೆ ಮಲಗಿ, ಮುಲುಗಲೂ ಕೂಡಾ ಆಗದೇ ಸಣ್ಣಗೆ ಅಳುತ್ತಿತ್ತು. ಅದಕ್ಕೆ ಮಿಠಾಯಿ ಅಂಗಡಿಯೆಂದರೆ ಭಯವಾಗತೊಡಗಿತು. ಅಂಗಡಿ ಕಡೆಗೆ ಹೋಗದು. ಅದರ ಕಡೆಗೆ ನೋಡದು. ಈ ಮೊದಲು ಸ್ಟೇಷನ್‌ನಲ್ಲಿ ಸ್ವೇಚ್ಛೆಯಾಗಿ ತಿರುಗುತ್ತಿತ್ತು. ಈಗ ಅದು ಅಲ್ಲಿ ಇಲ್ಲಿ ಕಂಡರೆ ಛೀ ಥೂ ಎಂದು ಗದರಿಸಿ ಓಡಿಸಲಾರಂಭಿಸಿದರು.

ಆರು ತಿಂಗಳಾಯಿತು. ಆ ನಾಯಿ ಅತ್ತ ಸಾಯಲೊಲ್ಲದು. ಇತ್ತ ಬದುಕಲೊಲ್ಲದು. ಒಂದು ದಿನ ಈ ಮೊದಲು ಬಂದ ದೊಡ್ಡ ಮನುಷ್ಯರು ಅಲ್ಲಿಗೆ ಬಂದರು. ಮಾಸ್ಟರೂ ಅವರು ಹಳೆಯ ನೆನಪು ಮಾಡಿಕೊಂಡು ಮಾತಾಡಿದರು. ಮಾಸ್ಟರ್ "ಅಯ್ಯಾ! ನಿಮ್ಮ ನಾಯಿ ಮರಿ ಹಾಕಿತೇ?" "ಅಯ್ಯೋ ಆ ನಾಯಿಯನ್ನು ಬೆಂಗಳೂರಿಗೆ ಕರೆದೊಯ್ದೆ. ಆದರೆ ಅದು ಸೀಮೆನಾಯಿ ಹತ್ತಲು ಬಿಡಲಿಲ್ಲ. ಇಲ್ಲಿಯ

ನಾಯಿಯಿಂದ ಅದು ಹಾಳಾಯಿತು. ನಾಯಿ ಮರಿಗಳನ್ನು ಹಾಕಿತು. ಆದರೆ ಅವೆಲ್ಲಾ ಊರನಾಯಿಮರಿಗಳು. ನನಗೆ ತುಂಬಾ ದುಃಖವಾಯಿತು. ಈ ಸಲ ಜಾತಿಮರಿಗಳನ್ನು ಹಾಕಿದರೆ ನಿಮಗೆ ತಂದುಕೊಡುತ್ತೇನೆ" ಎಂದರು." 'ಮಾಸ್ಟರು "ನಮ್ಮ ನಾಯಿ ತುಂಬಾ ಒಳ್ಳೇದು ಸ್ವಾಮಿ. ಅದು ಪೌರುಷಶಾಲಿ. ಕೆಲದಿನಗಳ ಹಿಂದೆ ಅದೊಂದು ಚಿರತೆಯನ್ನೇ ಕೊಂದು ಹಾಕಿತು" ಎಂದರು. ಅದಕ್ಕವರು, "ಹೋಗಲಿಬಿಡಿ ದರಿದ್ರನಾಯಿ, ಅದನ್ನು ಕೊಲ್ಲಬೇಕೆನಿಸಿದೆ, ಇಲ್ಲಿದ್ದರೆ ತೋರಿಸಿರಿ. ಅದನ್ನು ಕೊಂದು ಹೋಗುತ್ತೇನೆ" ಎಂದರು. ಮಾಸ್ಟರು "ಅದಕ್ಕೇನೋ ವಾತರೋಗ ಬಂದು ಹಾಳಾಗಿಹೋಗಿದೆ" ಎಂದರು.

ಅಷ್ಟರಲ್ಲಿ ಆ ನಾಯಿ ತೆವಳಿಕೊಂಡು ಅಲ್ಲಿಗೆ ಬಂತು. ಸ್ಟೇಷನ್ ಮಾಸ್ಟರು 'ಅದೋ ನೋಡಿ' ಎಂದು ತೋರಿಸಿದರು. ದೊಡ್ಡ ಮನುಷ್ಯರು ಕನಲಿ ಆ ನಾಯಿಯನ್ನು ಕಾಲಿನಿಂದ ಒದ್ದರು. ಅದು ಓಡಿಹೋಗಲಾರದೇ ಅಲ್ಲೇ ಅಂಗಾತ ಮಲಗಿ ಕಾಲೆತ್ತಿ ಅಳತೊಡಗಿತು. ಪೋರ್ಟರ್ ಬಂದು ಅದನ್ನು ಕಾಲಿನಿಂದ ಆ ಕಡೆಗೆ ದಬ್ಬಿದನು. ಮಾಸ್ಟರ್ ನಗುತ್ತಾ "ನಿಮಗೆಷ್ಟು ಕೋಪವಲ್ಲರೀ?" ಎಂದರು. ಅವರಿಬ್ಬರೂ ಸ್ನೇಹಿತರಾದ್ದರಿಂದ ಆ ದಿನ ಆ ದೊಡ್ಡ ಮನುಷ್ಯರು ಸ್ಟೇಷನ್ ಮಾಸ್ಟರರ ಅತಿಥಿಯಾಗಿ ಅಲ್ಲಿಯೇ ಉಳಿದರು.

ಅಂದು ರಾತ್ರಿ ನಾಯಿ ರೈಲಿನಡಿಗೆ ಸಿಕ್ಕಿ. ರೈಲು ಅದರ ಸೊಂಟದ ಮೇಲೆ ಹೋಗಿ ಎರಡು ತುಂಡಾಯಿತು. ಅರ್ಧಗಂಟೆ ಕಾಲ ಅದು ವಿಲವಿಲ ಒದ್ದಾಡಿ ಸತ್ತು ಹೋಯಿತು.

ಆನಂತರ ನಾಲ್ಕು ತಿಂಗಳ ನಂತರ ಆ ದೊಡ್ಡ ಮನುಷ್ಯರು ತನ್ನ ನಾಯಿ ಹಾಕಿದ ಒಂದು ಮರಿಯನ್ನು ತಂದು ಸ್ಟೇಷನ್ ಮಾಸ್ತರಿಗೆ ಕೊಟ್ಟರು. ಅದು ಆರು ತಿಂಗಳು ಬೆಳೆದ ನಂತರ ತನ್ನ ತಂದೆಯಂತೆ ಆಯಿತು. ಅದಕ್ಕೆ ಭಯವೆಂಬುದೇ ಇಲ್ಲ. ಅದು ಬೆಟ್ಟದ ಮೇಲೆ ಶಿಕಾರಿ ಹೋಗುತ್ತದೆ. ಯಾರಾದರೂ ಅದಕ್ಕೆ ಮಿಠಾಯಿ ಕೊಡಹೋದರೆ, ಅದು ಅವರನ್ನು ಹಲ್ಲು ತೆರೆದು ಹೆದರಿಸುತ್ತದೆ. ಎಷ್ಟೇ ಹೆಣ್ಣು ನಾಯಿಗಳು ಬಂದರೂ ಆ ಕಡೆ ಕಣ್ಣೆತ್ತಿ ನೋಡುವುದಿಲ್ಲ. ಅದು ನರಿಗಳನ್ನೂ, ಮರಿಚಿರತೆಗಳನ್ನೂ, ಮೊಲಗಳನ್ನೂ ಬೇಟೆಯಾಡುತ್ತದೆ. ವಿದ್ಯಾರ್ಥಿಗಳು ಶುಷ್ಕ ಭೂತದಯಾಪರ ಭಾಷಣ ಮಾಡುತ್ತಿದ್ದರೆ ಅವರ ಕಡೆ ತಿರಸ್ಕಾರದಿಂದ ನೋಡುತ್ತದೆ. ಆ ದೊಡ್ಡ ಮನುಷ್ಯರು ಆಗಾಗ ಬಂದು ಸ್ಟೇಶನ್ ಮಾಸ್ಟರ್ ಹತ್ತಿರ ವರ್ಣವ್ಯವಸ್ಥೆಯ ಬಗ್ಗೆ ಹರಟುತ್ತಿರುತ್ತಾರೆ. ಈ ನಾಯಿ ಅಲ್ಲಿಗೆ ಬಂದರೆ ಅದನ್ನು ಪ್ರೀತಿಯಿಂದ ಮುಟ್ಟಲು ಹೋಗುತ್ತಾರೆ. ಅದು ಕೋಪದಿಂದ ಗುರ‍್ರೆಂದು ಜೀರ್ಣಿಸಿದ ಮಾಂಸವನ್ನು ಕಕ್ಕುತ್ತದೆ ರೈಲಿನ್ನೂ ಮೈಲು ದೂರ ಇರುವಾಗಲೇ ಸಿಟ್ಟಿನಿಂದ ನಿಟ್ಟುಸಿರು ಬಿಡುತ್ತಾ ದೂರ ಹೋಗುತ್ತದೆ.

ಮಿಠಾಯಿ ಅಂಗಡಿಯವನೊಮ್ಮೆ ಅದಕ್ಕೆ ಹಳಸಿದ ಮಿಠಾಯಿ ಹಾಕಲು ಹೋದನು. ಅದು ಅವನ ಕಾಲು ಕಚ್ಚಿ ಎಳೆಯಿತು. ಅದಕ್ಕೆ ಮನುಷ್ಯರೆಂದರೇ ಅಸಹ್ಯವೆನಿಸಿತು. ಕೆಲ ಕಾಲಾನಂತರ ಜನರಿರುವ ಜಾಗದಿಂದ ದೂರ ಅಡವಿಯಲ್ಲಿಯೇ ಇರಲು ಪ್ರಾರಂಭಿಸಿತು. ಆಗಾಗ ಸ್ಟೇಷನ್ ಹತ್ತಿರ ಬರುತ್ತದೆ. ಅದು ತಾಯಿಯಂತೆಯೋ, ಅಥವಾ ನಿತ್ಯ ಬೆಟ್ಟಗಾಡು ಸುತ್ತಿದ್ದರಿಂದಲೋ ಬಾಲಕ್ಕೆ ಗೊಂಡೆ ಬೆಳೆಯಿತು. ಕೋರೆದಾಡೆಗಳು ಬೆಳೆದವು ಮನುಷ್ಯರ ಗಾಳಿ ಸೋಂಕಿದರೆ ಸಾಕು; ಬೃಹಸ್ಪತಿಯು ತಮ್ಮ ಸಂಪರ್ಕ ಮುನಿಯಂತೆ ಮುನಿಸಿಕೊಂಡು, ಅಸಹ್ಯದಿಂದ ತೊಲಗಿ ಹೋಗುತ್ತದೆ.

* * *

# ತೋಳಣ್ಣ

(ಏಕಾಂಕ ನಾಟಕ)

ಇಂಗ್ಲಿಷ್ ಮೂಲ : ಲಾರೆನ್ಸ್ ಹೌಸ್‌ಮನ್ ಅನು : ಶ್ರೀನಿವಾಸ್ ವಿ. ಸುತ್ರಾವೆ

ಪಾತ್ರವರ್ಗ

ಲೂಪೊ : ದರೋಡೆಕೋರರ ನಾಯಕ

ಜೋಸೆಪ್ಪಿ
ಬಾರ್ಟೋಲ್ ದರೋಡೆಕೋರರು
ಚೇಕೊ
ಬ್ಯಾಟ್ಟಿಯಾನೊ
ಪ್ರಾಸ್ಪರ್
ಜೂನಿಪರ್

[ಬೆಟ್ಟ-ಗುಡ್ಡಗಳ ನಡುವಿನ ಇಕ್ಕಟ್ಟು ದಾರಿ. ಬಂಡೆಗಳ ಸಂದುಗಳಲ್ಲಿ ಸೂಚಿಪರ್ಣಿ ಕಂಟಿಗಳು ಮತ್ತು ಪೀತದಾರು ಮರಗಳು. ಬಿರುಮಳೆ ಬಿದ್ದ ಜಾಗದಲ್ಲಿನ ಪಕ್ಕವು ಬಾಗಿ ಉಂಟಾಗಿರುವ ಉರುಟುಕಲ್ಲುಗಳ ದಾರಿ. ಬಲಕ್ಕೆ ಒಂದು ಗುಹೆ. ಅದರಿಂದ ಸಣ್ಣಗೆ ಹರಿಯುತ್ತಿರುವ ನೀರು. ಮೇಲೆ ಕಂಟಿಗಳ ಹಿಂದೆ ಕುರಿಯ ಬೆನ್ನು ಹಾಗೂ ಕೋಡಿನ ತಲೆ ಕಾಣಿಸುತ್ತಿದೆ. ಈ ಆಕೃತಿಯು ತಿರುಗಿ ನೋಡಲು ತಲೆ ಹೊರಳಿಸುತ್ತದೆ. ಆಗ ಏದುಸಿರು ಬಿಡುತ್ತಾ ಜೋಸೆಪ್ಪಿಯು ಕೆಳಗಿನ ಕಮರಿಯೊಂದನ್ನು ಕಷ್ಟಪಟ್ಟು ದಾಟುತ್ತಾ ಮೇಲಕ್ಕೆ ಹತ್ತಿ ಬರುತ್ತಾನೆ. ಬಂದು ನಿಂತು, ಆಚೆ ಈಚೆ ನೋಡಿ ಬಾಯಿಯ ಮೇಲೆ ಕೈಯಿಟ್ಟು ತೋಳದಂತೆ ಕೂಗುತ್ತಾನೆ.]

**ಜೋಸೆಪ್ಪಿ** : ವೂವ್ ! ವೂವ್! ...ವೂವ್ ! ವೂವ್ !

**ಬಾರ್ಟೋಲ್**[ಮೇಲುಗಡೆಯಿಂದ] : ಬ್ಯಾsss ...

**ಜ್ವೀಸೆಪ್ಪಿ :** ಓಯ್, ಬಾರ್ತೋಲ್, ಉಳಿದವರೆಲ್ಲಿ ?

[**ಬಾರ್ತೋಲ್**: ಎಲ್ಲಿದಾರೋ ಯಾರಿಗೆ ಗೊತ್ತು? ನಾನಂತೂ ಇಲ್ಲಿದೀನಿ ನೋಡು.

**ಜ್ವೀಸೆಪ್ಪಿ :** ಅವರಿಗೆ ತಿಳಿಸೋ ಸುದ್ದಿ ಇದೆ.

[ಅವನು ಕೆಳಗೆ ಕೂತು ತನ್ನ ಚೀಲದಲ್ಲಿನ ಒಂದು ಕಲ್ಲಂಗಡಿ ಹಣ್ಣನ್ನು ತೆಗೆದು ಕೊಯ್ಯಲಿಕ್ಕೆ ಶುರುಮಾಡುತ್ತಾನೆ.] ಬಾರ್ತೋಲ್ [ಇನ್ನೂ ಕುರಿಚರ್ಮವನ್ನು ಧರಿಸಿಯೇ ಇರುವ ಅವನು ಬಂಡೆಯ ಮೇಲೆ ಕಾಲು ಚಾಚಿ ಕೂರುತ್ತಾ] : ಏನೆಂದೇ? ಸುದ್ದೀನಾ? ಎಲ್ಲಿಂದ ಬಂದಿದ್ದು?

**ಜ್ವೀಸೆಪ್ಪಿ :** ಅಲ್ಲಿ ಕೆಳಗಿನಿಂದ :ಆಸೀಸಿ ಮಾರ್ಕೆಟ್‌ನಿಂದ. ಇದು ತಗೋ! ಹಿಡಿ!

[ಅವನು ಬಾರ್ತೋಲ್ ಕಡೆ ಕಲ್ಲಂಗಡಿ ಹಣ್ಣಿನ ಅರ್ಧಭಾಗವನ್ನು ಎಸೆಯುತ್ತಾನೆ. ಬಾರ್ತೋಲ್ ಅದನ್ನು ತಿನ್ನಲು ಪ್ರಾರಂಭಿಸುತ್ತಾನೆ.]

**ಬಾರ್ತೋಲ್ :** ಸುದ್ದಿ ಎಂದೆಯಲ್ವಾ ? ಏನು ಸುದ್ದಿ ಅದು?

**ಜ್ವೀಸೆಪ್ಪಿ :** ಎಲ್ಲರೂ ಇದ್ದಾಗ ಒಂದ್ಸಲ ಹೇಳಿದರೆ ಸಾಕು. ಲೂಪೋನ ಕರಿ. ಬೇಗ ಬರ್ಲಿಕ್ಕೆ ಹೇಳು.

**ಬಾರ್ತೋಲ್** [ ಮೊದಲು ಅರಚುತ್ತಾನೆ, ನಂತರ ಬೊಗಳುತ್ತಾನೆ .] : ಒವ್!...
ವೊವ್ ! ವೊವ್ !

ಧ್ವನಿ [ ದೂರದಲ್ಲಿ] : ಒವ್ ! ...ವೊವ್ ! ವೊವ್ !

[ ಜ್ವೀಸೆಪ್ಪಿ ತನ್ನ ಚೀಲದಲ್ಲಿನ ವಸ್ತುಗಳನ್ನು ಹೊರ ತೆಗೆಯಲು ಪ್ರಾರಂಭಿಸುತ್ತಾನೆ. ಅವನು ಕದ್ದಿರುವ ಚಿಲ್ಲರೆ, ಪಲ್ಲರೆ ಸಾಮಾನುಗಳಲ್ಲಿ ಮುಖ್ಯವಾದವೆಂದರೆ ಚರ್ಮದ ಹಾಗೂ ಉಕ್ಕಿನ ಸಾಮಾನುಗಳು. ಇದರ ಜೊತೆ ಆಡಂಬರದ ಆಭರಣಗಳು- ಗಂಡಸಿನ ಬಡಾಯಿಗೆ ಸರಿ ಎನ್ನುವಂಥವು ]

**ಜ್ವೀಸೆಪ್ಪಿ :** ಈ ಜಗತ್ತಿನಲ್ಲಿ ಎಂಥ ಮೂರ್ಖರಿದ್ದಾರೆ ಅಂತೀನಿ ! ನಾನು ಮನಸ್ಸು ಮಾಡಿದ್ದರೆ ಇದರ ಎರಡರಷ್ಟು ಹೊಡೆಯಬಹುದಾಗಿತ್ತು.

**ಬಾರ್ತೋಲ್ :** ನಿಜ. ಜನಜಂಗುಳಿಯಲ್ಲಿ ಸುಲಭಾನೇ. ನೋಡು ಅವರನ್ನ – ಅಲ್ಲಿ ಕೆಳಗಡೆ. ಹೆಬ್ಬಾಗಿಲಿಂದ ಹಿಂದುಹಿಂಡಾಗಿ ಇರುವೆಗಳ ಥರ ಹೋಗ್ತಾ ಇರೋವರನ್ನ! [ ಮುಂದೆ ಕೈ ಮಾಡಿ ತೋರಿಸುತ್ತಾನೆ.]

**ಜ್ವೀಸೆಪ್ಪಿ :** ಹ್ಞೂಂ. ಸಂತೆ ಮುಗೀತಲ್ವಾ. ಅವರಲೊಬ್ಬ ಪಾದ್ರಿ ಇದ್ದ. ಅವನು ಬೋಧನೆ ಶುರುಮಾಡಿದ ತಕ್ಷಣ ಎಲ್ಲರ ಕಣ್ಣೂ ಅವನ ಕಡೇಗೇ. ಅವರು ಬೇರೆ ಏನೂ ನೋಡ್ತಾ ಇದ್ದಿಲ್ಲಾ ... ನನಗೆ ಅನುಕೂಲ ಆಯ್ತು!

**ಬಾರ್ತೋಲ್ :** ಏನು? ಆ ಸನ್ಯಾಸೀನಾ?

**ಜ್ವೀಸೆಪ್ಪಿ :** ಹೌದು. ಹಸಿದ ಭಿಕಾರಿ ಥರ ಕಾಣ್ತಾನಲ್ಲ- ಬರೀ ಕಣ್ಣು ಮತ್ತು ಬಾಯಿ. ಉಹ್ ! ಹುಚ್ಚ ಅಂದ್ರೆ ಹುಚ್ಚ: ನೀನವನ ಮಾತು ಕೇಳಬೇಕಿತ್ತು!

ಧ್ವನಿ [ ಈಗ ಹತ್ತಿರದಲ್ಲಿ ] : ವೊವ್ !

**ಬಾರ್ಟೋಲ್**: ಬ್ಯಾ SSS! ಚೆಕೊ? ಲೂಪೋಗೆ ಹೇಳು – ಜ್ವೀಸೆಪ್ಪಿ ಬಂದಿದಾನೆ ಅಂತ.

[ ಚೇಕೊ ಮತ್ತು ಬ್ಯಾಸ್ಟಿಯಾನೊ ಇವರ ಪ್ರವೇಶ ]

**ಬ್ಯಾಸ್ಟಿಯಾನೊ** : ಏನಾದರೂ ಸಿಗ್ತಾ? ...ಓಡ್!

**ಜ್ವೀಸೆಪಿ**: ತೋಳ ಎಲ್ಲಿ? ಬೇಗ ಕರಿ ಅವನನ್ನ. ನಾನು ಅವನಿಗೆ ಏನೋ ಹೇಳಬೇಕು ! [ಲೂಪೋನ ಪ್ರವೇಶ. ಒಳ್ಳೆಯ ಆಕೃತಿಯ ಮನುಷ್ಯ.] ಸೊಗಸುಗಾರನ ಲಕ್ಷಣವೂ ಇದೆ. ನಾಣ್ಯದ ಸರ ಧರಿಸಿದ್ದಾನೆ. ಕಿವಿಯಲ್ಲಿ ಕರ್ಣಕುಂಡಲ. ನಿಂತು ಅಸೀಸಿ ಊರನ್ನು ನೋಡುತ್ತಾನೆ.]

**ಚೇಕೊ**: ಅಗೊ, ಬಂದ ನೋಡಣ್ಣ– ನಿನ್ನ ಬಂದಿದಾನೆ.

**ಲೂಪೊ**: ಸಾ ! ಘೂ ಕ್ರಿಮಿ ! ಅವರನ್ನ ನೋಡಿ ! ಹಾಳಾಗ !

**ಜ್ವೀಸೆಪ್ಪಿ** : ಇರ್ಲೊನ್ನಡು. ಲೂಪೊ. ಈಗ ನೀನೊಬ್ಬ ಜಾಣ ತೋಳ ಅಂತ ತೋರಿಸು. ಓಡು. ಒಬ್ಬ ಸನ್ಯಾಸಿ ನಿನ್ನನ್ನ ಹುಡುಕ್ಕೊಂಡು ಬರ್ತಾ ಇದಾನೆ.

**ಲೂಪೊ**: ಹ್ಹಾ? ಯಾರವನು ?

ಜ್ವೀಸೆಪ್ಪಿ:ಒಬ್ಬ ಹುಚ್ಚ! ನನಗೆ ಗೊತ್ತಿರೋದು ಅಷ್ಟೆ..

**ಬಾರ್ಟೋಲ್** : ಅವನೊಬ್ಬ ಭಿಕ್ಷುಕ. ಧಣಿ.

[ಅವರು ತಾವು ತಂದಿರುವ ಮಾಲನ್ನು ಬಂಡೆಯ ಮೇಲೆ ಸುರಿಯುತ್ತಾರೆ. ಅವುಗಳನ್ನು ಜ್ವೀಸೆಪ್ಪಿಯ ವಸ್ತುಗಳೊಡನೆ ಸೇರಿಸಿ, ಹಂಚಿಕೊಳ್ಳಲು ತೊಡಗುತ್ತಾರೆ.]

**ಲೂಪೊ** : ಅವನ ಹುಚ್ಚುತನಾನಾ ಅವನನ್ನ ಇಲ್ಲಿಗೆ ಕರೆತರ್ತಾ ಇರೋದು !

**ಜ್ವೀಸೆಪ್ಪಿ** : ಹೌದು ! ಲೂಪೊ. ಅವನು ನಿನ್ನನ್ನ ಹಿಡೀಲಿಕ್ಕೆ ಬರ್ತಾ ಇದಾನೆ. ಇಡೀ ಊರಿನ ಜನರ ಮುಂದೆ ಪ್ರಮಾಣ ಮಾಡಿ ಹೇಳ್ದ– ನಿನ್ನನ್ನ ಹಿಡಿಯೋದಾಗಿ. ಆಮೇಲೆ. ಅವನು ಮಾತಾಡ್ತಾ ಇದ್ದಾಗ – ಅವನೌನ–ನೀನು ಕೇಳಬೇಕಾಗಿತ್ತು !

**ಲೂಪೊ**: ಸರಿ, ಸರಿ, ಜ್ವೀಸೆಪ್ಪಿ ! ಅದೇನು ಹೇಳಬೇಕೋ ಬೇಗ ಹೇಳಿ ಮುಗಿಸು!

**ಜ್ವೀಸೆಪ್ಪಿ** : ಏನಪ್ಪ ಅಂದ್ರೆ, ಲೂಪೊ. ಅವನು ಪವಿತ್ರೋದಕವನ್ನ ತರ್ತಾನೆ. ಆಗ ನಿನ್ನ ಪಾಡು ಯಾತಕ್ಕೂ ಬ್ಯಾಡ ! ಮೊದ್ಲು ಅವನು ನಿನ್ನನ್ನ ಕುರುಡನನ್ನಾಗಿ ಮಾಡಿಬಿಡ್ತಾನೆ. ಆಮೇಲೆ ಕಿವುಡನನ್ನಾಗಿ. ಆಮೇಲೆ ಮೂಕನನ್ನಾಗಿ. ಆಮೇಲೆ ಹುಚ್ಚನನ್ನಾಗಿ. ಆಗ ನಿನ್ನನ್ನ ತುಂಡು ತುಂಡು ಮಾಡಿ. ಚೀಲದಲ್ಲಿ ಹಾಕ್ಕೊಂಡು. ನಿನ್ನನ್ನ ಅಸೀಸೀಗೆ ವಾಪಸ್ ಒಯ್ತಾನೆ ,ಆಮೇಲೆ ಗಂಟೆ ಹೊಡೀತಾನೆ! ( ಅವನು ಅವರಿಗೆ ಹೇಳ್ದ: " ಇವತ್ತು ರಾತ್ರಿ ಗಂಟೆ ಹೊಡೀರಿ!" ಅಂತ) ಆಮೇಲೆ ಅವರಿಗೆ ಹಬ್ಬದ ಊಟ – ಅಂದರೆ . ಅವರು ನಿನ್ನನ್ನ ತಿಂದು ಹಾಕ್ತಾರೆ!

**ಲೂಪೊ** : ಏ ಕಳ್ಳ ನನ್ನಮಗನೆ, ಕುಡಿದು ಬಂದಿದೀಯೇನಲೆ ?

**ಜ್ವೀಸೆಪ್ಪಿ** : ಕಳ್ಳ ನನ ಮಗ ಅಂದ್ಯಾ? ಹ್ಹೂಂ. ಆಮೇಲೆ. ಹೌದು, ನಾನು ಕುಡುದು ಬಂದಿದೀನಿ. ನನ್ನ ಕಿವಿಯಿಂದಾನೂ ಕುಡಿದಿದೀನಿ. ಹಾಗಿಲ್ಲದಿದ್ದರೆ ನಿನ್ನ ಕಿವೀ ಮೇಲೆ

ಈ ಮಾತು ಜೀಳ್ತಾ ಇರ್ಲಿಲ್ಲ. ಎಲ್ಲಾ ಹೆಂಡದಂಗಡಿಗಳಲ್ಲೂ ಇದೇ ಮಾತು. ನಾನು ಹೇಳೋದು ಸತ್ಯ ಕಣಪ್ಪ. ಈಗ ಗೊತ್ತಾಯ್ತಾ, ಪೊವ್ – ಪೊವ್ ಅಜ್ಜಣ್ಣ, ನಿನ್ನ ಗತಿ ಏನಾಗುತ್ತೆ ಅಂತ?

**ಲೂಪೊ** [ ಬೆದರಿಸುತ್ತಾ ] : ಏಳು, ಏಳು ಮ್ಯಾಲಕ್ಕೆ ! ಕೈ ಎತ್ತು!

[ಜ್ವೇಸೆಪ್ಪಿ ಕೈ ಮೇಲೆ ಎತ್ತುತ್ತಾನೆ : ಹೆದರಿಕೆಯಿಂದಾಗಿ ಈಗ ಸ್ವಲ್ಪ ಮತ್ತು ಇಳಿದಿದೆ] ನಡಿ, ಬಾಯಿ ತೊಳ್ಕೊಂಡು ಬಾ ! ಹುಂ !

**ಜ್ವೇಸೆಪ್ಪಿ :** ನೋಡಪ್ಪ, ಲೂಪೊ, ನಾನು ಕೇಳಿದ್ದು ನಿನಗೆ ತಿಳಿಸಿದೀನಿ. ಆಮೇಲೆ, ಸ್ವತಃ ಆ ಭಿಕಾರೀನೇ ಸಂತೇಲಿ ಮಾತಾಡ್ತಾ ಇದ್ದ. ಅವನು ಹೇಳ್ದ– [ಮಾತು ಪೂರ್ಣಗೊಳಿಸುವುದಿಲ್ಲ]

**ಲೂಪೊ:** ಹುಂ, ಏನು ಹೇಳ್ದ ?

**ಜ್ವೇಸೆಪ್ಪಿ :** ನಂಗೆ... ನಂಗೊತ್ತಿಲ್ಲ, ಲೂಪೊ ! ನಂಗೆ ಎಲ್ಲ ಮರ್ತು ಹೋಗಿದೆ. ಅವನು ಎಷ್ಟು ಹುಚ್ಚು ಹುಚ್ಚಾಗಿ ಮಾತಾಡ್ತಾ ಇದ್ದ ಅಂದ್ರೆ ಬುದ್ಧಿ ನೆಟ್ಟಗಿರೋ ಯಾವ ಮನುಷ್ಯನಿಗೂ ಅರ್ಥ ಆಗಲಿಕ್ಕೆ ಸಾಧ್ಯ ಇದ್ದಿಲ್ಲ. ಅವನು ಪದೇ ಪದೇ ಹೇಳ್ತಾ ಇದ್ದದ್ದೇನೆಂದರೆ 'ತೋಳಣ್ಣ', 'ತೋಳಣ್ಣ' ಅಂತ. ಆಮೇಲೆ ಹೇಳ್ತಾ ಇದ್ದ: "ನೀವು ಅವನನ್ನ ತಿನ್ನಲಿಕ್ಕೆ ಪ್ರಯತ್ನಿಸಿದರೆ, ಅವನು ನಿಮ್ಮನ್ನ ತಿಂತಾನೆ. ಆದ್ರೂ ನಾವು ಅವನನ್ನ ಹಿಡಿಯೋಣ. ಆಗ ಅವನು ಯಾರಿಗೂ ಹಿಡಿಯಾಕಾಗಲ್ಲ." ಅವನ ಮಾತು ಕೇಳ್ತಾ ಇದ್ದ ಜನರೆಲ್ಲ ನಗ್ತಾ ಇದ್ದರು. ಅವನ ಸುತ್ತೆ ಕೂಗ್ತಾ ಇದ್ದರು. ಮೂರ್ಖರ ಹಾಗೆ. ಆಮೇಲೆ, ಅವನು ಅವರಿಗೆ ಕೇಳ್ತಾ ಇದ್ದ, ಏನೆಂದರೆ– ಅವನು ನಿನ್ನನ್ನ ಆಸೀಸಿಗೆ ವಾಪಸ್ ಕರಕೊಂಡ್ ಬಂದರೆ –ಕೈ ಕಾಲು ಕಟ್ಟಿ –ಅವರು ನಿನ್ನನ್ನ ಅವನ ವಶಕ್ಕೆ ಒಪ್ಪಿಸಲಿಕ್ಕೆ ತಯಾರಾ ಅಂತ. ಆಗ ಅವರೆಲ್ಲ ಜೋರಾಗಿ ಕೂಗಿ ಹೇಳಿದರು, "ಓ, ಆಗಬಹುದು" ಅಂತ. ಆಮೇಲೆ ಅವನು ಹೇಳ್ದ : "ನಾನು ಅವನ ಪ್ರಾಣ ತೆಗೀತೀನಿ .. ಆಗ ನಿಮಗೆ ನೆಮ್ಮದಿ ಸಿಗುತ್ತೆ" ಅಂತ. ಹಾಗಾಗಿ ಅವರು ಒಪ್ಪಿದರು. ಆಮೇಲೆ – [ ಸ್ವಲ್ಪ ಹೊತ್ತು ಮಾತು ನಿಲ್ಲಿಸಿ ] – ಅಷ್ಟೆ ಕಣಪ್ಪ. ಯಾಕಂದ್ರೆ ಅಷ್ಟು ಹೊತ್ತಿಗಾಗ್ಲೇ ನನ್ನ ಚೀಲ ಭರ್ತಿ ಆಗಿತ್ತು, ಮತ್ತು ನಾನು ಇನ್ನ ಹೊರಡೋದು ಉತ್ತಮ ಅನ್ನಿಸ್ತು.

**ಲೂಪೊ:** ಸರಿ! "ಕೈ ಕಾಲು ಕಟ್ಟಿ ಅಂದ್ನಾ?" ಅವರು ನನ್ನ ಪ್ರಾಣ ತೆಗೀತಾರಾ ಹಾಗಾದ್ರೆ?

**ಬೇಕೊ :** ನೀನು ಆ ಊರಿನ ಬಹಳಷ್ಟು ಜನರ ಪ್ರಾಣ ತೆಗೆದಿದೀಯಲ್ಲಪ್ಪ.

**ಲೂಪೊ :** ಇನ್ನೂ ಬಹಳಷ್ಟು ಜನರ ಪ್ರಾಣ ತೆಗೀತೀನಿ! ಆಹ್. ಕುರುಡು ಬಾವಲಿಗಳೆ! [ಆಸೀಸಿ ಕಡೆ ಕೈ ಮಾಡಿ ತೋರಿಸುತ್ತಾ] ತಾಳಿ ತಾಳಿ, ನನ್ನ ಹಿಂಡು ದೊಡ್ಡದಾಗೋತನಕ !...ಎಲ್ಲಿ, ಬಾರ್ತೊಲೀಲ್, ನಿನ್ನ ಜಾಗಕ್ಕೆ ಹೋಗೀಗ.

[ಬಾರ್ತೊಲೀಲ್ ತನ್ನ ಕುರಿಚರ್ಮವನ್ನು ಪುನಃ ಹೊತ್ತು ತನ್ನ ಸ್ವಸ್ಥಾನಕ್ಕೆ ಮರಳುತ್ತಾನೆ.]

ಜ್ವೀಸೆಪ್ಪಿ : ಅವರಿಗೆ ನಿನ್ನ ಕಂಡರೆ ತುಂಬ ಭಯ. ಲೂಪೊ.
**ಲೂಪೊ:** ಹೌದು ಮತ್ತೆ.
ಜ್ವೀಸೆಪ್ಪಿ :ಈಗ ಯಾರೂ ಆಯುಧಗಳಿಲ್ಲದೆ ಮತ್ತೆ ಜೊತೆಗಾರರಿಲ್ಲದೆ ಊರ ಹೊರಗೆ ಕಾಲಿಡಲ್ಲ.
**ಲೂಪೊ:** ಹಾಗೆ ಮಾಡಿದ್ರೂ ಕೂಡ ಅವರು ನನ್ನಿಂದ ಬಚಾವಾಗಲ್ಲ ಬಿಡು.
**ಜೇಕೂ :** ಹೌದು. ಅವರ ಜೊತೆಗಿರೋರು ಕೂಡ.
**ಜ್ವೀಸೆಪ್ಪಿ :** ಸರಿಯಾಗಿ ಹೇಳ್ದೆ ! ಆಮೇಲೆ. ನಾವು ಎಗರಿಸಿಕೊಂಡು ಬಂದ ಕುರಿ ಮತ್ತೆ ಮೇಕೆಗಳ ಬಗ್ಗೆ ರೈತರು ಮಾತಾಡೋದು ನೀನು ಕೇಳಬೇಕು. ಒಂದು ಕಳೆದು ಹೋಗಿದ್ರೆ ಹತ್ತು ಅಂತಾರೆ. ಹಾಗಾಗಿ. ಅವು ಅಷ್ಟೊಂದು ಕಳೆದು ಹೋಗಿರೋದ್ರಿಂದ ನಾವು ಐವತ್ತು ಜನ ಇದೀವಿ ಅಂತಾರೆ !
**ಲೂಪೊ:** ನಾವು ಇನ್ನೂ ಐವತ್ತು ಆಗೋಣ ! ಓ. ನಾಯಿಗಳಾ. ನಾಯಿಗಳಾ! ನನ್ನ. ಹಿಂಡು ದೊಡ್ಡದಾದಾಗ ನಿಮಗೆ ಸರಿಯಾಗಿ ಮಾಡ್ತೀನಿ !
**ಇತರರು :** ಉಳಿದವರೆಲ್ಲಿ ಲೂಪೊ? ನಮ್ಮ ಜನ?
**ಲೂಪೊ :** ಬರ್ತಾರೆ. ಬರ್ತಾರೆ. ಸಾವಧಾನ ! ನೀವೇ ಮೊದ್ಲು ಬಂದಿರೋದು.
**ಎಲ್ಲರೂ :** ವೊವ್ ! ವೊವ್!
**ಲೂಪೊ:** ನಾವೀಗ ರಕ್ತ ಕುಡೀತೀವಿ !
**ಎಲ್ಲರೂ:** ವೊವ್ ! ವೊವ್ !
**ಲೂಪೊ :** ಓ. ಅಸೀಸಿ ! ನೀನು ಸುಟ್ಟು ಭಸ್ಮವಾಗುವೆ !
**ಎಲ್ಲರೂ :** ಅಸೀಸಿ. ಅಸೀಸಿ ! ಅಸೀಸೀಗೆ ಧಿಕ್ಕಾರ! ವೊವ್ ! ವೊವ್!
**ಲೂಪೊ:** ಇಲ್ಲಿ ಕೇಳು. ಅಸೀಸಿ! ನೀನು ನನಗೆ ಹೊಡೆದೆ. ನನ್ನ ಮೇಲೆ ಕಲ್ಲೆಸೆದೆ. ನನ್ನನ್ನ ಹೊರಹಾಕ್ದೆ ! ನನ್ನನ್ನು ಪ್ರಾಣಿಯಂತೆ ಅಟ್ಟಿಸಿಕೊಂಡು ಬಂದೆ ! ನಾನು ನ್ಯಾಯ ಕೇಳ್ದೆ. ಆದರೆ ಸಿಗಲಿಲ್ಲ. ನೀನು ನನ್ನನ್ನು ಗೇಲಿ ಮಾಡ್ದೆ : ನನ್ನ ಯಾವ ಮಾತೂ ಕೇಳಲಿಕ್ಕೆ ನೀನು ತಯಾರಿದ್ದಿಲ್ಲ.
**ಎಲ್ಲರೂ :** ಒವ್ !ವೊವ್ ! ವೊವ್!
[ಲೂಪೊ ಮೂಕಾಭಿನಯ ಮಾಡುತ್ತಾ ತನ್ನ ಕಠಾರಿಯನ್ನು ಒರೆಯಿಂದ ಓಡಿಯುತ್ತಾನೆ]
**ಲೂಪೊ:** ನಾನು ದ್ರೋಹ ಮಾಡಿದವನ ಮನೆ ಸುಟ್ಟು ಹಾಕಿದೆ. ಜನರನ್ನು ಕಚ್ಚುತ್ತಾ ದಾರಿ ಮಾಡಿಕೊಂಡು ಓಡಿ ಹೋದೆ. ಜನ "ತೋಳ !" ಎಂದು ಕೂಗುತ್ತಾ ನನ್ನನ್ನು ಹಿಡಿಯಲಿಕ್ಕೆ ನುಗ್ಗಿದರು !
**ಎಲ್ಲರೂ :** ವೊವ್ ! ವೊವ್ !ವೊವ್ !ವೊವ್ !
**ಲೂಪೊ :** ಅವರು ಹೆಬ್ಬಾಗಿಲನ್ನು ಮುಚ್ಚಿದರು. ಆದರೆ ನಾನು ಗೋಡೆ ಹತ್ತಿದೆ. "ತೋಳ ! ತೋಳ" ಅಂತ ಕೂಗುತ್ತಾ ಬಂದರು. ಆದರೆ ಆಗ ಅವರು ಏನೂ ಮಾಡಲಿಕ್ಕ ಆಗಲಿಲ್ಲ. ಯಾಕಂದ್ರೆ ನಾನು ಆಗಲೇ ಪರಾರಿಯಾಗಿದ್ದೆ.

**ಎಲ್ಲರೂ :** ವೊವ್ ! ವೊವ್ !

**ಲೂಪೊ :** ಅಮೇಲೆ, ನೀವು ಬಂದಿರಿ, ಬಂಧುಗಳೆ. ಅವರು ನಿಮಗೂ ಅನ್ಯಾಯ ಮಾಡಿದ್ದರು. ಈಗ ನಾವು ಅವರಲ್ಲಿ ಭಯ ಹುಟ್ಟಿಸಿದ್ದೇವೆ. ಕೂಗಿರಿ ! ಕೂಗಿರಿ! ಅವರಿಗೆ ಕೇಳಿಸಲಿ ತೋಳನ ಕೂಗು !

**ಎಲ್ಲರೂ :** ವೊವ್! ವೊವ್ !

**ಲೂಪೊ :** ನಾಯಿಗಳು!

**ಬಾರ್ಟೋಲ್ :** ಬ್ಯಾ sss [ ಬಾರ್ಟೋಲ್ ಈ ಎಚ್ಚರಿಕೆಯ ಸೂಚನೆ ಕೊಟ್ಟಾಕ್ಷಣ ಲೂಪೊ ಅದೇನೆಂದು ನೋಡಲು ಹೋಗುತ್ತಾನೆ ]

**ಲೂಪೊ :** ಹಿಂದೆ ಹೋಗ್ರಿ, ಬಚ್ಚಿಟ್ಕೊಳ್ರಿ – ಎಲ್ರೂನೆ. [ ಕಳ್ಳರು ಮರೆಯಾಗುತ್ತಾರೆ. ಲೂಪೊ ಮತ್ತು ಚೆಕೊ ಗುಹೆ ಸೇರಿಕೊಳ್ಳುತ್ತಾರೆ. ಜ್ವೀಸೆಪ್ಪಿ ಪೀತದಾರು ಮರವೊಂದರಡಿ ಬಚ್ಚಿಟ್ಟುಕೊಳ್ಳುತ್ತಾನೆ. ಬ್ಯಾಸ್ಟಿಯಾನೊ ಒಂದು ದೊಡ್ಡ ಬಂಡೆಯ ಹಿಂದೆ ಅಡಗಿಕೊಳ್ಳುತ್ತಾನೆ. ಬಾರ್ಟೋಲ್ ತನ್ನ ಕುರಿಚರ್ಮದಲ್ಲಿ ಮರೆಯಾಗುತ್ತಾನೆ. ಈಗ ಫ್ರಾನ್ಸಿಸ್‌ನ ಪ್ರವೇಶ. ಅವನ ಹಿಂದೆ ಜೂನಿಪರ್ ಇದ್ದಾನೆ. ಅವನ ಕೈಯಲ್ಲೊಂದು ಚೀಲವಿದೆ.]

**ಜೂನಿಪರ್ :** ಸ್ವಲ್ಪ ನಿಧಾನ. ಫಾದರ್ ಫ್ರಾನ್ಸಿಸ್. ದಯವಿಟ್ಟು ಸ್ವಲ್ಪ ನಿಧಾನ ನಡೆಯಿರಿ.

**ಫ್ರಾನ್ಸಿಸ್ :** ಸುಸ್ತಾಯಿತಾ, ತಮ್ಮಾ?

**ಜೂನಿಪರ್ :** ಇಲ್ಲ, ಗುರುಗಳೆ. ಹಾಗೇನೂ ಇಲ್ಲ. ಆದರೆ ನಾವು ಯಾವುದೋ ಭಯಂಕರ ಜಾಗಕ್ಕೆ ಬಂದಿರೋ ಹಾಗೆ ಕಾಣುತ್ತೆ.

**ಫ್ರಾನ್ಸಿಸ್ :** ಅಂದರೆ?

**ಜೂನಿಪರ್ :** ಕಗ್ಗತ್ತಲ ಕರಾಳ ಜಾಗ.

**ಫ್ರಾನ್ಸಿಸ್ :** ಮುಂದೆ ಇನ್ನೂ ಹೆಚ್ಚು ಕರಾಳವಾಗಿರುತ್ತೆ.

**ಜೂನಿಪರ್ :** ಹೌದು. ಚೂಪು ಕಲ್ಲುಗಳಿರುವಂಥದ್ದು, ನಾವು ಎಡವಿ ಬಿದ್ದುಹೋಗುವಂಥದ್ದು, ಗುಂಡಿಗಳಿರುವಂಥದ್ದು, ಪ್ರವಾಹವಿರುವಂಥದ್ದು ಮತ್ತು ಗುಹೆಗಳಿರುವಂಥದ್ದು. [ಅವನು ತಿರುಗಿ ನೋಡಿದಾಗ ಫ್ರಾನ್ಸಿಸ್ಸನು ಒಂದು ಗುಹೆಯ ಮುಂದೆ ಬಂದು ನಿಂತಿದ್ದಾನೆ.] ಅಯ್ಯೋ ದೇವರೆ! ಅಲ್ಲಿ ಹೋಗಬೇಡಿ, ಫಾದರ್ ! ಒಳಗೆ ಯಾರೋ ಇದಾರೆ!

**ಫ್ರಾನ್ಸಿಸ್ :** ಜಲಧಾರೆ ಇದ್ದಾಳೆ, ತಮ್ಮ. ಅವಳಿಗೆ ಭಯ ಇಲ್ಲವೆಂದ ಮೇಲೆ ನಾವೇಕೆ ಭಯ ಪಡಬೇಕು?

**ಜೂನಿಪರ್:** ಆದ್ರೆ ಅವಳು ಈಚೆ ಹರಿದು ಬರ್ತಾ ಇದಾಳಲ್ಲ.

**ಫ್ರಾನ್ಸಿಸ್ :** ಅವಳು ದಯಾಮಯಿ ಇದ್ದಾಳೆ, ಸೋದರ. ನಮಗೆ ನೀರಡಿಕೆ ಆಗಿರುವುದಿಂದಲೇ ಅವಳು ನಮ್ಮ ಕಡೆ ಹರಿದು ಬರ್ತಾ ಇರೋದು. [ ಅವನು ನೀರು ಕುಡಿಯಲು ಬಗ್ಗುತ್ತಾನೆ.]

**ಜೂನಿಪರ್** : [ ತಡವಿ ] "ಗುರುಗಳೇ, ಅದರಲ್ಲಿ ರಕ್ತ ಇರೋ ಹಾಗೆ ಕಾಣುತ್ತೆ ! [ಮೇಲಿಂದ ಒಂದರ ಹಿಂದೆ ಇನ್ನೊಂದು ಕಲ್ಲು ಕೆಳಗೆ ಬೀಳುತ್ತದೆ.] ಅಯ್ಯೋ ದೇವರೆ ! ಇದೇನಿದು?

**ಫ್ರಾನ್ಸಿಸ್** : ಬಾ. ಕುಡಿ. ಸಹೋದರ. ಈ ನೀರು ತಣ್ಣಗಿದೆ. ಸ್ವಚ್ಛವಾಗಿದೆ. ಕುಡಿದರೆ ನಿನ್ನ ದಣಿವಾರುತ್ತದೆ. ನಮಗೆ ನಮಗ ಮುಂದೆ ಮತ್ತೆ ನೀರು ಸಿಗಲಿಕ್ಕಿಲ್ಲ.

**ಜೂನಿಪರ್** : ನಾವು ಇನ್ನೂ ಮುಂದೆ ಹೋಗಬೇಕಾ, ಗುರುಗಳೇ? ಆಮೇಲೆ, ನಾವು ಯಾಕೆ ಹೋಗಬೇಕಾಗಿದೆ?

**ಫ್ರಾನ್ಸಿಸ್** : ತೋಳಣ್ಣನನ್ನು ಹುಡುಕಲಿಕ್ಕೆ.

**ಜೂನಿಪರ್** : ದೇವರು ನಮ್ಮನ್ನು ಕಾಪಾಡಲಿ ! ಅಂದ್ಹಾಗೆ, ಈ ಚೀಲದಲ್ಲಿ ಏನಿದೆ, ಫಾದರ್ ?

**ಫ್ರಾನ್ಸಿಸ್** : ಆಹಾರ ಇದೆ, ಜೂನಿಪರ್. ಜೊತೆಗೆ ವೈನ್ ಇದೆ. ಬಟ್ಟೆ ಬರೇನೂ ಇದೆ. [ಅವನು ಅವುಗಳನ್ನು ಒಂದು ಬಂಡೆಯ ಮೇಲೆ ಇಡುತ್ತಾನೆ. ಚೀಕೋನ ಜೊತೆ ಲೂಪೊ ಬಂದು ಗುಹೆಯ ಬಾಗಿಲಲ್ಲಿ ನಿಲ್ಲುತ್ತಾನೆ. ಉಳಿದ ದರೋಡೆಕೋರರು ಇವರ ಮಾತು ಕೇಳಲೆಂದು ಮೆಲ್ಲಗೆ ತಲೆಯೆತ್ತಿ ನೋಡುತ್ತಿದ್ದಾರೆ.]

**ಜೂನಿಪರ್** : ಇದೆಲ್ಲ ತಗೊಂಡು ಈ ಕಳ್ಳರ ನಾಯಕ ಏನ್ಮಾಡ್ತಾನೆ, ಫಾದರ್?

**ಫ್ರಾನ್ಸಿಸ್** : ಇವು ಅವನ ದೇಹಕ್ಕೆ ಬೇಕು. ಅವನಿಗೆ ಬೇಕಾಗಿರೋದು ಅಷ್ಟೆ ಅಲ್ವಾ ?

**ಜೂನಿಪರ್** : ಇಲ್ಲ, ಫಾದರ್. ಅವನಿಗೆ ಬೇಕಾಗಿರೋದು ರಕ್ತ, ಭಯ ಹುಟ್ಟಿಸೋದು. ಭೋಗ ಮತ್ತು ಕ್ರೌರ್ಯ. ಅವನು ಜನರನ್ನ ಕಟ್ಟಿಹಾಕ್ತಾನೆ. ಫಾದರ್ ಅವರ ಹೊಟ್ಟೆ ಬಗೀತಾನೆ. ಹಲ್ಲು ಕೀಳ್ತಾನೆ. ಕಿವಿ ಕೊಯ್ತಾನೆ. ಎದೆ ಸೀಳ್ತಾನೆ !

**ಫ್ರಾನ್ಸಿಸ್** : ಇವತ್ತು ರಾತ್ರಿಯಾಗುವುದರ ಒಳಗೆ, ಜೂನಿಪರ್, ನೀನು ತೋಳಣ್ಣನನ್ನು ನನ್ನ ಬಂಧಿಯಾಗಿ ಕಾಣುವೆ. ಹೌದು, ನಾನು ಅವನ ಹೊಟ್ಟೆ ಬಗೆಯುತ್ತೇನೆ. ಅವನ ಹಲ್ಲು ನನಗೇನೂ ಮಾಡಲಾರದು. ನಾನು ಅವನಿಗೆ ಮೂಗುದಾರ ಹಾಕ್ತೀನಿ! ಅವನ ಎದೇ ಸೀಳ್ತೀನಿ.

[ ಈ ಮಾತನ್ನು ಕೇಳಿ ಲೂಪೊ ಮತ್ತು ಅವನ ಸಂಗಾತಿಗಳು ಹಲ್ಲು ಮಸೆಯುತ್ತಾರೆ. ಜೂನಿಪರ್‌ನಿಂದ ಇಸಿದುಕೊಂಡಿರುವ ಚೀಲದಲ್ಲಿನ ಸಾಮಾನುಗಳನ್ನು ತೆಗೆದು ಜೋಡಿಸುತ್ತಿರುವ ಫ್ರಾನ್ಸಿಸ್‌ನನ್ನು ಈಗ ಅವರು ಸುತ್ತುವರಿಯುತ್ತಾರೆ. ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಲೆಂದು ಬಂಡೆಯ ಮೇಲೆ ಕೂರುತ್ತಾರೆ.]

**ಜೂನಿಪರ್** : ಗುರುಗಳೇ, ನಾವು ಹಾಗೆ ಮಾಡಿದರೆ ನಮ್ಮ ಕುತ್ತಿಗೆಗೆ ನೇಣು ಅಂತಾನೇ ಲೆಕ್ಕ.

**ಫ್ರಾನ್ಸಿಸ್** : ಜೂನಿಪರ್, ನೀನು ತೋಳವು ಕುರಿಮರಿಯಾಗಿ ಮಾರ್ಪಾಡಾಗುವುದನ್ನು ಕಾಣ್ತೀಯಂತೆ, ತಾಳು.

**ಬಾರ್ಟೋಲ್** : ಬ್ಯಾ sss!

**ಜೂನಿಪರ್:** ಗುರುಗಳೇ, ಅದ್ಯಾವುದೋ ಜಾಣ ಕುರಿಮರಿ, ನೋಡಿ. ನಿಮಗೆ ಉತ್ತರ ಕೊಡ್ತಾ ಇದೆ.

[ ಫ್ರಾನ್ಸಿಸ್ ಬ್ರೆಡ್ಡು, ಮಾಂಸ ಮತ್ತು ವೈನನ್ನು ಬಂಡೆಯ ಮೇಲೆ ಹರಡಿ ತೋರಿಸುತ್ತಾನೆ]

**ಫ್ರಾನ್ಸಿಸ್:** ಇಲ್ನೋಡು, ಸಹೋದರ, ಇಲ್ಲಿ ಒಳ್ಳೆಯ ಆಹಾರ ಇದೆಯಲ್ವಾ? ಅವನು ಇದನ್ನು ಕಂಡಾಗ ಅವನಿಗೆ ಖುಷಿಯಾಗಲ್ವಾ?

[ಲೂಪೋನ ಕಣ್ಣುಗಳೇನೂ ಇದಕ್ಕೆ ಪ್ರತಿಕ್ರಿಯಿಸುವುದಿಲ್ಲ.]

**ಜೂನಿಪರ್ :** ಖುಷಿ ಯಾತಕ್ಕೆ, ಗುರುಗಳೇ? ಅವನು ಪ್ರಾಮಾಣಿಕ ಜನರನ್ನು ದೋಚಿದಾಗ ಅವನಿಗೆ ಇವೆಲ್ಲ ಸಿಗ್ತವೆ. ಇದಕ್ಕೂ ಜಾಸ್ತೀನೂ ಸಿಗುತ್ತೆ.

**ಫ್ರಾನ್ಸಿಸ್ :** ತೋಳಣ್ಣನೇನೂ ಮೂರ್ಖನಲ್ಲ, ಜೂನಿಪರ್. ಅವನು ಜನರ ಸುಲಿಗೆ ಮಾಡಿದಾಗ ಅವನಿಗೆ ದುಃಖ ಆಗಿಲ್ಲ ಅಂತ ತಿಳಿದಿದ್ದೀಯಾ? ನಿನಗೆ ಏನೂ ಬೇಕಿಲ್ಲ ಅಂದಾಗ ನೀನು ಬೇರೆಯವರ ಸುಲಿಗೇನಾದ್ರೂ ಯಾಕೆ ಮಾಡ್ತೀಯಾ ಹೇಳು ?

**ಜೂನಿಪರ್ :** ನಿಜ, ಫಾದರ್. ನನಗೆ ಬೇರೆಯವರನ್ನು ದೋಚುವ ಇಚ್ಛೆ ಇಲ್ಲ.

**ಫಾನ್ಸಿಸ್ :** ಆಮೇಲೆ, ಈ ಜಗತ್ತಿನಲ್ಲಿ ನಿನಗಿಂತಲೂ ದಡ್ಡರು ಯಾರಾದರೂ ಇದಾರೆ ಅಂತ ತಿಳಿದಿದೀಯಾ? ತೋಳಣ್ಣನಿಗೆ ಕಣ್ಣು ಇವೆ – ನಿನಗೂ ನನಗೂ ಇರೋ ಹಾಗೇನೇ. ಅವನು ಕತ್ತಲಿಗಿಂತ ಹೆಚ್ಚು ಇಷ್ಟಪಡೋದು ಬೆಳಕಲ್ವಾ? ಅವನಿಗೆ ಕಿವಿ ಇವೆ. ಅವನು ಕೇಳಲಿಕ್ಕೆ ಇಷ್ಟಪಡೋದು ಬಯ್ಗುಳಕ್ಕಿಂತ ಒಳ್ಳೆಮಾತುಗಳಲ್ವಾ? ಅವನಲ್ಲಿ ಹೃದಯ ಇದೆ, ತಮ್ಮಾ, ದುಃಖಕ್ಕಿಂತ ಹೆಚ್ಚು ದಯೆಯಲ್ವಾ ಅವನು ಇಷ್ಟ ಪಡೋದು? ಅವನ ಹತ್ತಿರ ತಿನ್ನಲಿಕ್ಕೆ ಇದ್ದಿದ್ದರೆ ನಿನ್ನಿಂದ ಯಾಕೆ ಕಿತ್ತುಕೊಳ್ತಾ ಇದ್ದ?

**ಜೂನಿಪರ್ :** ನಂಗೊತ್ತಿಲ್ಲ, ಫಾದರ್.

**ಫ್ರಾನ್ಸಿಸ್:** ಯಾಕೆ ಗೊತ್ತಿಲ್ಲ? ನೀನು ದರೋಡೆಕೋರನಾಗಿದ್ದರೆ ಜನ ನಿನ್ನ ಕಂಡು ಹೆದರ್ತಾರೆ ! ನಿನ್ನ ಸಹವಾಸ ಇಷ್ಟ ಪಡಲ್ಲ : ಹಾಗಾಗಿ ನೀನು ಒಂಟಿ ಅಂತ. ಆಮೇಲೆ, ಅವರು ನಿನ್ನನ್ನು ಬೆನ್ನಟ್ಟಿದಾಗ, ನೀನು ಓಡಿಹೋಗಿ ಎಲ್ಲಾದರೂ ಬಚ್ಚಿಟ್ಟುಕೊಳ್ಳಬೇಕು. ಹಾಗಾಗಿ, ನಿನಗೆ ಮನೆ ಇಲ್ಲ ಅಂತ. ಆಮೇಲೆ, ಮನೆ ಇಲ್ಲ ಅಂದ ಮೇಲೆ ನಿನಗೆ ಕುಟುಂಬಾನೂ ಇಲ್ಲ ಮತ್ತು ಸೇವೆ ಮಾಡಲಿಕ್ಕೆ ನಿನಗೆ ಸ್ನೇಹಿತರೂ ಇಲ್ಲ ಅಂತ. ನಿನಗೆ ಇವು ಯಾವುವೂ ಇಲ್ಲ ಅಂದ ಮೇಲೆ ನೀನು ಬೇರೆಯವರಿಂದ ಕಿತ್ತುಕೊಳ್ಳುವ ಸಂಪತ್ತಾದ್ರೂ ಯಾವ ಕೆಲ್ಸಕ್ಕೆ ಬರುತ್ತೆ ?

**ಜೂನಿಪರ್ :** ನನಗೆ ಇವು ಯಾವುವೂ ಇಲ್ಲ. ಫಾದರ್. ನನ್ನ ಹತ್ತಿರ ಸಂಪತ್ತೂ ಇಲ್ಲ.

**ಫ್ರಾನ್ಸಿಸ್:** ನಿನ್ನ ಹತ್ತಿರ ಅಗಾಧ ಸಂಪತ್ತಿದೆ, ಜೂನಿಪರ್. ಯಾವುದಂದ್ರೆ, ದಯೆ. ನೀನು ನಿನ್ನ ಹತ್ತಿರ ಇರೋದೆಲ್ಲ ಕೊಡ್ತೀಯ. ಹಾಗಾಗಿ, ತೋಳಣ್ಣನಿಗೆ ದಯೆ ಮತ್ತು ಕಾರುಣ್ಯವನ್ನು ಕೊಡು, ಯಾಕಂದ್ರೆ ಅವನು ಪಶ್ಚಾತ್ತಾಪ ಪಟ್ಟಿದ್ದಾನೆ.

[ಈ ಮಾತು ಕೇಳಿದಾಗ ಲೂಪೊ ಹಲ್ಲು ಮಸೆಯುತ್ತಿರುವುದು ಕೇಳಿಸುತ್ತದೆ. ಈ ಚರ್ಚೆಯನ್ನು ಅರ್ಥ ಮಾಡಿಕೊಳ್ಳಲಾಗದಷ್ಟು ಗೊಂದಲ ಹಾಗೂ ಗಲಿಬಿಲಿಗೆ ಒಳಗಾಗಿರುವ ಅವನ ಅನುಯಾಯಿಗಳೂ ಅವನನ್ನು ಅನುಕರಿಸುತ್ತಾರೆ]

**ಜೂನಿಪರ್** : ಫಾದರ್, ಸುಮ್ಮನೆ ನಾಟ್ಕ ಆಡೋದ್ರಿಂದ ಏನೂ ಪ್ರಯೋಜನ ಇಲ್ಲ. ಅಲ್ಲವಾ?

**ಫ್ರಾನ್ಸಿಸ್** : ಇಲ್ಲ, ತಮ್ಮ.

**ಜೂನಿಪರ್**: ಹಾಗಾದ್ರೆ ನಿಜ ಹೇಳ್ಲಾ?

**ಫ್ರಾನ್ಸಿಸ್** : ಹೇಳು, ಮಗ.

**ಜೂನಿಪರ್**: ಫಾದರ್, ನಿಮಗೆ ಭಯಂಕರ ಹುಚ್ಚು ಹಿಡಿದಿದೆ. ಮತ್ತದನ್ನ ವಾಸಿ ಮಾಡೋಕಾಗಲ್ಲ. ನಾನು ಪ್ರಾರ್ಥಿಸಿದ್ದೇನೆ : ಫಾದರ್– ನಾನು ಬಹಳ ಸಲ ದೇವರಲ್ಲಿ ಪ್ರಾರ್ಥಿಸಿದ್ದೇನೆ. ನೀವು ಕಳಕೊಂಡಿರೋ ಬುದ್ಧಿ ನಿಮಗೆ ಅವನು ವಾಪಸ್ ಕೊಡ್ಲಿ ಅಂತ. ಆದರೆ ಅವನು ಹಾಗೆ ಮಾಡಿಲ್ಲ. ಅವನು ನನ್ನ ಬುದ್ಧೀನೂ ಕಿತ್ತುಕೊಂಡುಬಿಟ್ಟಿದ್ದಾನೆ. ಹಾಗಾಗಿ, ಇಲ್ನೋಡಿ. ನಾವಿಬ್ಬರೂ ಈಗ ಎಷ್ಟು ಹುಚ್ಚರಾಗಿದ್ದೇವೆ ಅಂದ್ರೆ, ಕಳ್ಳನನ್ನು ಹೋಗ್ಲಿ, ನಾವು ಒಂದು ಕೀಟವನ್ನೂ ಹಿಡೀಲಾರೆವು ಮತ್ತು ನಾನು ಅಂಥ ಹುಚ್ಚನಾಗಿಲ್ಲದೇ ಹೋಗಿದ್ದರೆ ನಾವೀಗ ಅಪಾಯದಲ್ಲಿ ಸಿಕ್ಕಿಹಾಕಿಕೊಂಡಿದೀವಿ ಅಂತ ನನಗೆ ಗೊತ್ತಾಗಿರೋದು.

**ಫ್ರಾನ್ಸಿಸ್**: ತಮ್ಮಯ್ಯ ಜೂನಿಪರ್, ನಾನು ನಿನಗೊಂದು ಕಥೆ ಹೇಳ್ತೀನಿ, ಕೇಳು.

**ಜನಿಪರ್**: ಹೇಳಿ ಫಾದರ್.

**ಫ್ರಾನ್ಸಿಸ್**: ಒಂದ್ಸಲ ಒಂದು ಗಿಡುಗ ತನ್ನ ಗೂಡಿಂದ ಕೆಳಗೆ ಬಿತ್ತು. ಬಿದ್ದು ಎಷ್ಟು ಗಾಯ ಆಯ್ತು ಅಂದ್ರೆ ಅದಕ್ಕೆ ಹಾರಲಿಕ್ಕೆ ಆಗಲಿಲ್ಲ. ನಾನು ಅದನ್ನ ಎತ್ತಿಕೊಂಡಾಗ ಅದು ನನ್ನ ಕೈ ಕುಟುಕಿತು. ನನ್ನ ಕೈಯಿಂದ ರಕ್ತ ಸುರಿಯಿತು. ಆದರೂ ನಾನದನ್ನ ಕೊಲ್ಲಲಿಲ್ಲ. ಅದು ಅಸಹಾಯಕ ಸ್ಥಿತಿಯಲ್ಲಿತ್ತಾದ್ದರಿಂದ ನಾನು ಅದನ್ನ ಮನೆಗೆ ತಂದೆ. ಅದರ ಕೊಕ್ಕು ಬಹಳ ಚೂಪಾಗಿತ್ತು.

**ಜೂನಿಪರ್**: ಬಹಳ ಜಾಣ ಹಕ್ಕಿ ! ನಿಮಗೆ ಹ್ಯಾಗೆ ಮೋಸ ಮಾಡಬೇಕು ಅನ್ನೋದು ಅದಕ್ಕೆ ಗೊತ್ತಿತ್ತು.

**ಫ್ರಾನ್ಸಿಸ್**: ಆಮೇಲೆ, ನಾನು ಅದಕೊಂದು ಗೂಡು ಕಟ್ಟಿದೆ. ಅದಕ್ಕೆ ಆಹಾರ ತಂದೆ ತಮ್ಮ , ಅದು ಇಲಿ, ಮಾಂಸ , ಸತ್ತ ಹುಳಗಳನ್ನು ತಿಂತಿತ್ತು. ಆಮೇಲೆ, ಅದಕ್ಕೆ ಬೇರೆ ಏನೂ ಸಿಗದಿದ್ದಾಗ ನನ್ನನ್ನೆಲ್ಲ ತಿಂದಿತು. ಅದಕ್ಕೆ ನನ್ನ ರುಚಿ ಹತ್ತಿದರೂ, ನನ್ನ ಬಗ್ಗೆ ಪ್ರೀತಿ ಇರಲಿಲ್ಲ. ಹಾಗಾಗಿ ಅದರ ರೆಕ್ಕೆಯ ಗಾಯ ವಾಸಿಯಾದ ತಕ್ಷಣ ಅದು ಹಾರಿ ಹೋಯಿತು.

**ಜೂನಿಪರ್**: ಗಿಡುಗ ಬಹಳ ಕೆಟ್ಟ ಹಕ್ಕಿ, ಗುರುಗಳೆ.

**ಫ್ರಾನ್ಸಿಸ್**: ಗಿಡುಗ ಗಿಡುಗಾನೇ ತಮ್ಮ. ದೇವರು ಗಿಡುಗಗಳನ್ನ ಸೃಷ್ಟಿಸಿದಾಗ ಅವನು ಮನುಷ್ಯರನ್ನಲ್ಲ ಸೃಷ್ಟಿಸುತ್ತಿದ್ದುದು. ಹಾಗಾಗಿ , ಅವನು ತೋಳಗಳನ್ನು ಸೃಷ್ಟಿಸಿದಾಗಲೂ ಅವು ಮನುಷ್ಯರಾಗಿದ್ದಿಲ್ಲ. ಆಮೇಲೆ, ಒಂದು ತೋಳ ಯಾವತ್ತೂ ಮನುಷ್ಯನಾಗಲಿಕ್ಕೆ ಸಾಧ್ಯವಿಲ್ಲ. ಹಾಗಿರುವಾಗ, ಒಬ್ಬ ಮನುಷ್ಯ ತೋಳ ಹ್ಯಾಗಾಗ್ತಾನೆ?

**ಜೂನಿಪರ್:** ಆದರೆ ಗಿಡುಗ ಮಾಡಿದ್ದು ತಪ್ಪಲ್ಲವಾ, ಗುರುಗಳೆ? ಯಾಕೆಂದ್ರೆ ನೀವು ಅದರ ಪ್ರಾಣ ಉಳಿಸಿದ್ದಿರಿ.

**ಫ್ರಾನ್ಸಿಸ್ :** ಅದೇ ರೀತಿ ದೇವರೂ ನನ್ನ ಪ್ರಾಣ ಉಳಿಸಿದಾನೆ. ಆದರೂ ನಾನು ದೇವರ ವಿರುದ್ಧವಾಗಿ ಪಾಪ ಮಾಡ್ತೀನಿ . ನಾವು ಹೇಗೆ ಅಸಹಾಯಕರಾಗಿರ್ತೇವೋ ಹಾಗೇನೇ ಬೇರೆಯವರೂ ಅಸಹಾಯಕರಾಗಿರ್ತಾರೆ ಅನ್ನೋದನ್ನ ಅವನು ತೋರ್ಸಿದಾನೆ. ಹಾಗಾಗಿ ನನ್ನ ದೇಹದ ಮಾಂಸವನ್ನು ಕಿತ್ತ ಗಿಡುಗಣ್ಣನನ್ನು ನಾನು ಪ್ರೀತಿಸಿದೆ ಎಂದಾಗ ನಾನು ತೋಳಣ್ಣನನ್ನೂ ಪ್ರೀತಿಸಲಾರೆನೇ?

[ಈ ಮಾತು ಲೂಪೊ ಮತ್ತು ಅವನ ಸಂಗಾತಿಗಳ ಗ್ರಹಿಕೆಗೆ ನಿಲುಕುವುದಿಲ್ಲ. ಆದರೂ ಅವರು ಈ ವಿಷಯವನ್ನು ಪರೀಕ್ಷಿಸಿ ನೋಡಬಯಸುತ್ತಾರೆ. ಹಾಗಾಗಿ ಲೂಪೊ ಒಂದು ಸನ್ನೆ ಮಾಡುತ್ತಾನೆ. ಆಗ ದರೋಡೆಕೋರರು ಕೈಯಲ್ಲಿ ಹಗ್ಗ ಹಿಡಿದುಕೊಂಡು ತಾವು ಕಟ್ಟಿಹಾಕಬಯಸುವವರನ್ನು ಸುತ್ತುವರೆಯುತ್ತಾರೆ. ಫ್ರಾನ್ಸಿಸ್ನು ಜೂನಿಪರ್ ಜೊತೆ ಮಾತಾಡುತ್ತಲೇ ಇದ್ದಾನೆ.] ಹೌದು. ಅವನು ನನ್ನನ್ನು ಹಿಡಿದು, ನನ್ನ ಹಲ್ಲು ಕಿತ್ತರೂ, ನನ್ನ ಹೊಟ್ಟೆಯನ್ನು ಬಗೆದರೂ– [ಅಷ್ಟು ಹೊತ್ತಿಗೆ ಫ್ರಾನ್ಸಿಸ್ ಮೇಲೆರಗಲು ಬರುತ್ತಿರುವ ದರೋಡೆಕೋರರನ್ನು ಜೂನಿಪರ್ ಗಮನಿಸುತ್ತಾನೆ].

**ಜೂನಿಪರ್:** ಗುರುಗಳೆ ! ಗುರುಗಳೆ !

**ಫ್ರಾನ್ಸಿಸ್:** ನನ್ನ ಕಿವಿ ಮತ್ತು ನಾಲಗೆಯನ್ನು ಕತ್ತರಿಸಿದರೂ ...[ಲೂಪೋನ ಸಹಚರರು ಅವರ ಮೇಲೆರಗಿ ಅವರನ್ನು ಕಟ್ಟಹಾಕುತ್ತಾರೆ. ತಕ್ಷಣವೇ ಜೂನಿಪರ್ ಬಿಡಿಸಿಕೊಳ್ಳಲು ಹೆಣಗುತ್ತಾನೆ. ಆದರೆ ಫ್ರಾನ್ಸಿಸ್ ಇದನ್ನು ತನ್ನ ಯಶಸ್ಸಿನ ಮೊದಲ ಸೋಪಾನವೆಂದು ತಿಳಿಯುತ್ತಾನೆ.]

**ಫ್ರಾನ್ಸಿಸ್ :** ನೀನಾ, ತೋಳಣ್ಣ?

**ಲೂಪೊ:** ಹೌದು. ಕಚ್ತೀನಿ ನೋಡೀಗ ನಿನ್ನನ್ನ, ಸನ್ಯಾಸಿ. 'ಕೈ ಕಾಲು ಕಟ್ಟಿ !' ಅಂ?

**ಫ್ರಾನ್ಸಿಸ್ :** ನೀನು ಚನ್ನಾಗೇ ಶುರು ಮಾಡಿದೀಯ, ತಮ್ಮ. ಆದರೆ ಸ್ವಲ್ಪ ತಾಳು. ಜೂನಿಪರ್, ಇಲ್ನೋಡು – ತೋಳಣ್ಣ ನನ್ನನ್ನ ಕಚ್ತಾ ಇದ್ದಾನೆ, ನಿನ್ನನ್ನು ಕೂಡ ಕಚ್ತಾನೆ. ಆಮೇಲೆ, ಅವನ ಮುಖ ನೋಡಿದರೇನೇ ಗೊತ್ತಾಗುತ್ತೆ– ಅವನು ನಮ್ಮನ್ನ ಕಡಿದು ತುಂಡು ತುಂಡು ಮಾಡಿ ಹಾಕ್ತಾನೆ ಅಂತ. ಆದರೂ ನಾವು ಅವನನ್ನು ಪ್ರೀತಿಸೋಣ. ಅದನ್ನ ಅವನು ತಪ್ಪಿಸಲಿಕ್ಕೆ ಸಾಧ್ಯವಿಲ್ಲ.

**ಲೂಪೊ** [ಚಾಕು ಹಿರಿಯುತ್ತಾ] ನಾನು ನಿನ್ನನ್ನು ಕೊಂದರೂ ಕೂಡಾ ?

**ಜೂನಿಪರ್ :** ಓ, ಫಾದರ್, ನನಗಾಗಿ ದಯವಿಟ್ಟು ಪ್ರಾರ್ಥಿಸಿರಿ! [ಆದರೆ ಜೂನಿಪರ್‌ನನ್ನು ಹಿಡಿದಿರುವವರು ಅವನಿಗೊಂದು ಏಟು ಕೊಟ್ಟು ಬಾಯಿ ಮುಚ್ಚುವಂತೆ ಮಾಡುತ್ತಾರೆ.]

**ಫ್ರಾನ್ಸಿಸ್:** ನೀನು ತೋಳದಂತೇನೇ ಇದೀಯ, ಸರಿ. ಆದರೆ ತೋಳ ನಿನ್ನ ಹಾಗೆ ಹಿಂಗಾಲ ಮೇಲೆ ನಿಲ್ಲಲ್ಲ.

**ಲೂಪೊ:** ಬಾಯಿ ಮುಚ್ಚು, ಮೂರ್ಖ !
**ಫ್ರಾನ್ಸಿಸ್:** ದೇವರು ನಿನಗೆ ಒಳ್ಳೇದು ಮಾಡಲಿ, ಸಹೋದರ !
**ಲೂಪೊ** [ಜೂನಿಪರ್‌ಗೆ ]: ಏನಯ್ಯ, ಈ ಮನುಷ್ಯ ಹುಚ್ಚನಾ ?
**ಜೂನಿಪರ್:** ಹೌದಣ್ಣ ! ನನಗಿಂತಲೂ ಹುಚ್ಚ. ನನಗೆ ಹುಚ್ಚು ಯಾವಾಗಲಾದ್ರೂ ಆಗಾಗ ಬರುತ್ತೆ, ಆದರೆ ಈತ ಯಾವಾಗ್ಲೂ ಹುಚ್ಚಾನೇ.
**ಫ್ರಾನ್ಸಿಸ್:** ನಿನ್ನ ಮುಖದಲ್ಲಿ ದಯೆ ಕಾಣುತ್ತೆ ಸಹೋದರ. ನಿನ್ನ ನಿಜವಾದ ಹೆಸರೇನು? [ಈ ಮಾತು ತನ್ನ ಮುಖಕ್ಕೆ ಹೊಡೆದ ಹಾಗೆ ಅನ್ನಿಸಿ ಲೂಪೊ ಇನ್ನೂ ಹೆಚ್ಚು ಉಗ್ರನಾಗುತ್ತಾನೆ.]
**ಜೂನಿಪರ್** [ ಫ್ರಾನ್ಸಿಸ್ಸನ ಮಾತಿನಿಂದ ಉತ್ತೇಜಿತನಾಗಿ ]: ಕಚ್ಚು ಅವರನ್ನ ! ಕಚ್ಚಿ ತೋರಿಸಣ್ಣ ! ನೀನು ಹಾಗೆ ಮಾಡಿದರೆ ಅವನಿಗೆ ಇನ್ನೂ ಹೆಚ್ಚು ಸಂತೋಷ !
**ಲೂಪೊ :** ಬಾಯಿ ಮುಚ್ಚು, ಮೂರ್ಖ ! ಇಲ್ಲ ಅಂದ್ರೆ ನಿನ್ನ ನಾಲಿಗೆ ಕತ್ತರಿಸಿ ಬಿಡ್ತೀನಿ.
**ಫ್ರಾನ್ಸಿಸ್ :** ನನ್ನದು ಮೊದಲು ಕತ್ತರಿಸು, ಸಹೋದರ. ಅದು ಹೆಚ್ಚು ಉದ್ದವಾಗಿದೆ. ಹೆಚ್ಚು ಸಿಕ್ಕಷ್ಟೂ ಹೆಚ್ಚು ಲಾಭ ಅಲ್ವಾ?
**ಲೂಪೊ:** ಇವರಿಬ್ಬರ ತಲೇನೂ ಸರಿ ಇಲ್ಲ !
**ಜೂನಿಪರ್** [ಹೌದು ಎಂಬಂತೆ ]: ನಿಜ, ಸಹೋದರ !
**ಫ್ರಾನ್ಸಿಸ್ :** ಅದೂ ಕೂಡ. ನಾನು ನಿನಗೆ ನನ್ನ ಹೃದಯವನ್ನು ಕೊಡಲಿಕ್ಕೆ ಇಷ್ಟಪಡ್ತೇನೆ. ನನ್ನ ಎಲುಬುಗಳ ಮೇಲೆ ಹೆಚ್ಚು ಮಾಂಸವಿಲ್ಲ. ಆದರೆ ನನ್ನ ಹೃದಯ ನಿನಗೆ ಇಷ್ಟವಾಗಬಲ್ಲದು.

**ಚೇಕೊ :** ಲೂಪೊ, ಇವರಿಬ್ಬರೂ ನಮಗೆ ತಮಾಷೆ ಮಾಡ್ತಿದಾರೆ .
**ಲೂಪೊ :** ಮಾಡ್ಲಿ ! ತಾಳು, ಇವರ ಮಾತು ಕೇಳೋಣ. ಎಲಪ್ಪೋ, ನೀನೆಲ್ಲಿಂದ ಬಂದಿದ್ದು?
**ಫ್ರಾನ್ಸಿಸ್ :** ಅಗೋ, ಅಲ್ಲಿ ಕೆಳಗಡೆಯಿಂದ. ಅಂದರೆ, ಅಸ್ಸೀಸಿಯಿಂದ.
**ಲೂಪೋ :** ಯಾಕೆ ಬಂದಿರೋದು?
**ಫ್ರಾನ್ಸಿಸ್ :** ನಿನಗೆ ಸಹಾಯ ಮಾಡ್ಲಿಕ್ಕೆ . ಯಾಕಂದರೆ, ನೀನು ದುಃಖಾವಸ್ಥೆಯಲ್ಲಿದೀಯ.
**ಲೂಪೊ** [ಸಿಟ್ಟನ್ನು ತಡೆದುಕೊಳ್ಳುತ್ತಾ ]: ಹ್ಞೂಂ. ಮುಂದೆ ಹೇಳು, ಸನ್ಯಾಸಿ.
**ಫ್ರಾನ್ಸಿಸ್:** ಈಗ, ಇಟ್ಕೋಳ್ಳೋಡು. ಇವು ನಿನ್ನ ದೇಹಕ್ಕಾಗಿ (ಅದು ಸಣ್ಣದಾಗಿದ್ದರೂ ಕೂಡ) ಆಹಾರ ಮತ್ತು ಬಟ್ಟೆ.
**ಜ್ಯೋಸೆಪ್ಪಿ:** ಜೋಕೆ, ಒಡೆಯ ! ಅವನು ಅವಕ್ಕೆ ಪಾಟ ಮಾಡಿದಾನೆ.
**ಫ್ರಾನ್ಸಿಸ್ :** ಇನ್ನು ನಿನ್ನ ಆತ್ಮಕ್ಕಾಗಿ (ಮತ್ತದು ದೊಡ್ಡದು)– ಅಯ್ಯೋ, ಸಹೋದರ, ನಿನ್ನ ಆತ್ಮ ...ನಿನ್ನ ಆತ್ಮ ಅಪಾಯದಲ್ಲಿದೆ !

**ಲೂಪೊ:** ಮತ್ತೆ ನಿನ್ನ ಪ್ರಾಣ ಕೂಡ ! [ ಚಾಕು ಮೇಲೆತ್ತುತ್ತಾನೆ.]
**ಫ್ರಾನ್ಸಿಸ್ :** ತೋಳಣ್ಣ. ನೀನು ಪಾಪ ಮಾಡಿ ಜೀವನ ನಡೆಸ್ತಿದೀಯ. ನೀನು ತುಂಬ ಅನ್ಯಾಯ ಮಾಡಿದೀಯ. [ಲೂಪೊ ಆಶ್ಚರ್ಯಚಕಿತನಾಗಿ ಚಾಕುವನ್ನು ಒರೆಯಲ್ಲಿಡುತ್ತಾನೆ]. ನಿನಗೆ ನಾಚಿಕೆ ಆಗಬೇಕು ! ತಮ್ಮ, ನಾಚಿಕೆ ಆಗಬೇಕು.
**ಚೇಕೊ:** ಧಣಿ, ಈ ಮನುಷ್ಯ ಬಿಡುಕಿರಬೇಕಾ?
**ಲೂಪೊ :** ಸುಮ್ನಿರು. ಚೇಕೊ !
**ಫ್ರಾನ್ಸಿಸ್:** ನೀನು ತುಂಬ ಕ್ರೌರ್ಯವೆಸಗಿದ್ದೀಯ. ರಕ್ತ ಚೆಲ್ಲಿದ್ದೀಯ. ದರೋಡೆ ಮಾಡಿದ್ದೀಯ. ಮನೆ–ಮಠಗಳನ್ನ ಸುಟ್ಟು ಹಾಕಿದ್ದೀಯ. ಬಹಳ ಹಾಳು ಮಾಡಿದ್ದೀಯ. ಆಮೇಲೆ, ದೇವರು ನಿನಗೆ ಕೊಟ್ಟಿರುವ ಸಂಪತ್ತೆಲ್ಲವನ್ನೂ ಅನ್ಯಾಯವಾಗಿ ಬಿಸುಟಿದ್ದೀಯ.
**ಲೂಪೊ:** ಯಾವ ದೇವರು ಕೊಟ್ಟಿದ್ದು ನನಗೆ, ಸನ್ಯಾಸಿ? ಏನು ಕೊಟ್ಟಿದಾನೆ ?
**ಫ್ರಾನ್ಸಿಸ್:** ಅವನು ನಿನಗೆ ಹೃದಯವನ್ನು ಕೊಡಲಿಲ್ಲವೆ, ಸಹೋದರ?– ಕಣ್ಣುಗಳನ್ನ? ಮಿದುಳನ್ನ? ಕಾರುಣ್ಯವನ್ನ? ದಯೆ ಮತ್ತು ಸಹಾನುಭೂತಿಯನ್ನ? ಅವನು ನಿನಗೆ ಕೊಟ್ಟ ಶಕ್ತಿ ಜನರ ಸೇವೆಗಲ್ಲವೆ? ಆದರೆ ಈಗ ನೋಡು, ನಿನ್ನ ಹೃದಯದಲ್ಲಿ ದ್ವೇಷವಿದೆ ಮತ್ತು ಕಣ್ಣಲ್ಲಿ ಕುರುಡು. ನಿನ್ನ ಮಿದುಳಲ್ಲಿ ಬೆಂಕಿ ಉರಿಯುತ್ತಿದೆ, ನಿನ್ನ ಕೈ ಮೇಲೆ ರಕ್ತದ ಕಲೆ ಇದೆ. ಹಾಗಾಗಿ. ಈ ಹೀನ ಸ್ಥಿತಿಯಲ್ಲಿರುವ ನಿನ್ನನ್ನು ನೋಡಿ ನಾನು ಕಣ್ಣೀರು ಹಾಕಲು ಕಾರಣವಿಲ್ಲವೆ ?
**ಲೂಪೊ:** ಭಲೆ, ಸನ್ಯಾಸಿ! ಸಾವಿನ ಬಗ್ಗೆಯೂ ನಿನಗೆ ಭಯ ಇಲ್ಲ. ಅಲ್ಲವೆ?
**ಫ್ರಾನ್ಸಿಸ್ :** ನನಗೆ ಭಯ ಇರುವುದು ನಿನ್ನ ಬಗ್ಗೆ, ಸಹೋದರ. ಕೆಳಗೆ ನೋಡಲ್ಲಿ. ನರಕವನ್ನು; ಅಲ್ಲಿ ಬೆಂಕಿ ಭುಗಿಲೇಳುತ್ತಿದೆ. ಮತ್ತು ಆ ಬೆಂಕಿಯಲ್ಲಿ ನಾನು ಪ್ರೀತಿಸುವಂಥವನು ಸುಟ್ಟುಹೋಗುತ್ತಾನೆ ! ನೀನು ಎಲ್ಲೇ ಓಡಿಹೋದರೂ ಆ ಜ್ವಾಲೆ ನಿನ್ನನ್ನು ಬೆನ್ನಟ್ಟಿ ಬರುತ್ತದೆ.
[ಲೂಪೊ ಮತ್ತು ಅವನ ಸಂಗಡಿಗರು ಭಯದಿಂದ ಹಿಮ್ಮೆಟ್ಟುತ್ತಾರೆ] ನೋಡು. ಅದು ನಿನ್ನ ಕಾಲಿನ ಬುಡಕ್ಕೇ ಬಂತು. ಅದು ನಿನ್ನನ್ನ ಬಿಡುವದಿಲ್ಲ. ನಿನ್ನ ಕೈ, ಕುತ್ತಿಗೆ, ಹೃದಯವನ್ನು ಒಂದೊಂದಾಗಿ ಕಬಳಿಸುತ್ತಾ ಹೋಗುತ್ತದೆ !
**ದರೋಡೆಕೋರರು :** ಲೂಪೊ, ಈ ಮನುಷ್ಯ ಭಯಂಕರನಿದ್ದಾನೆ. ನಮ್ಮನ್ನು ಕಾಪಾಡು. ನಮ್ಮನ್ನು ಕಾಪಾಡು!
**ಫ್ರಾನ್ಸಿಸ್:** ಅಗೋ, ಅಗೋ, ಅಗೋ, !....
[ಈಗ ಭಯಂಕರ ಸದ್ದಿನೊಡನೆ ಬಂಡೆಗಳು ಬೆಟ್ಟದ ಮೇಲಿಂದ ಕೆಳಗೆ ಉರುಳಿ ಬೀಳುತ್ತಿವೆ. ಕಡಿದಾದ ಕಣಿವೆಯ ತುಂಬ ಈಗ ಕಲ್ಲುಗಳು ಮತ್ತು ಉರುಳಿಬಿದ್ದ ಮರಗಳು]
**ದರೋಡೆಕೋರರು :** ಅಯ್ಯೋ ! ಅಯ್ಯೋ ! ಅಯ್ಯೋ ! ಬೆಟ್ಟ ನಮ್ಮ ಮೇಲೇ ಬೀಳ್ತಾ ಇದೆ !

[ಅವರು ಚೆಲ್ಲಾಪಿಲ್ಲಿಯಗಿ ಓಡುತ್ತಾರೆ. ಅಡಗುದಾಣಗಳಿಗೆ ಹೋಗಿ ಅಡಗಿಕೊಳ್ಳುತ್ತಾರೆ. ಕೈ-ಕಾಲು ಕಟ್ಟಿಹಾಕಲ್ಪಟ್ಟಿರುವ ಜೂನಿಪರ್ ಗೋಣಿಚೀಲದ ಪಂದ್ಯದ ರೀತಿಯಲ್ಲಿ ಕುಪ್ಪಳಿಸುತ್ತಾ, ಅಡೆ-ತಡೆಗಳನ್ನು ದಾಟಿ ಬಂದು ಫ್ರಾನ್ಸಿಸ್ನ ಮುಂದೆ ಮಂಡಿಯೂರುತ್ತಾನೆ ಅವನು ದಿಗ್ಭ್ರಾಂತನಾಗಿ ನಡಗುತ್ತಿದ್ದಾನೆ.]

**ಜೂನಿಪರ್ :** ಓ ಫಾದರ್ ಫ್ರಾನ್ಸಿಸ್. ಫಾದರ್ ಫ್ರಾನ್ಸಿಸ್. ನನ್ನನ್ನು ಹಿಡಿದುಕೊಳ್ಳಿ. ಇಲ್ಲವೆಂದರೆ ನಾನು ಸತ್ತುಹೋಗುತ್ತೇನೆ.

**ಫ್ರಾನ್ಸಿಸ್:** ಬೆಟ್ಟಣ್ಣ ಮೈ ಕೊಡವುತ್ತಿದ್ದಾನೆ, ಅಷ್ಟೆ. ಹೆದರಬೇಡ !

**ಜೂನಿಪರ್ :** ಅಯ್ಯೋ, ಅದು ಬೇರೆ ಯಾರಾದರೂ ಆಗಬಾರದಿತ್ತೆ, ಫಾದರ್? ಅಯ್ಯೋ, ನೋಡಿ! ಅವನು ಮತ್ತೆ ಶುರು ಮಾಡಿದ ! [ಈಗ ಮತ್ತೊಂದು ಭೂಕುಸಿತ. ದರೋಡೆಕೋರರು ಭಯದಿಂದ ಕಿರುಚುತ್ತಾ ಓಡುತ್ತಾರೆ. ಲೂಪೊ ಮಾತ್ರ ಹಾಗೆಯೇ ನಿಂತಿದ್ದಾನೆ. ಅವನ ದೇಹದ ಅರ್ಧಭಾಗ ನೆಲದೊಳಗೆ ಕುಸಿದಿದೆ. ಅವನು ಫ್ರಾನ್ಸಿಸ್ನನ್ನು ದುರುಗುಟ್ಟಿ ನೋಡುತ್ತಾನೆ. ಕೈಕಟ್ಟಿರುವ ಸ್ಥಿತಿಯಲ್ಲೇ ಜೂನಿಪರ್‌ನು ಫ್ರಾನ್ಸಿಸ್ನಿಗೆ ಆತುಕೊಂಡಿದ್ದಾನೆ.]

**ಫ್ರಾನ್ಸಿಸ್:** ಅದು ಮುಗೀತು ಬಿಡು, ಜೂನಿಪರ್.

**ಜೂನಿಪರ್:** ಹಾಗಾದರೆ ನಾವಿಲ್ಲಿಂದ ಬೇಗ ಹೊರಟುಹೋಗೋಣ! ಇಲ್ಲ ಅಂದರೆ, ಅವು ನಮ್ಮ ಮೇಲೆ ಮತ್ತೆ ಬೀಳಬಹುದು. ನೋಡಿ ! ನಾನು ನಿಮ್ಮ ಕೈ ಬಿಚ್ಚಿದರೆ ನೀವು ನನ್ನ ಕೈ ಬಿಚ್ಚಬಹುದಲ್ಲವೆ ?

**ಫ್ರಾನ್ಸಿಸ್:** ನಾವು ಯಾಕೆ ಓಡಿ ಹೋಗಬೇಕು, ಜೂನಿಪರ್ ? ತೋಳಣ್ಣನಿಗೆ ನಾವು ಬೇಕು.

**ಜೂನಿಪರ್ :** ನಿಜ. ನಿಜ! ಅವನ ಎಲ್ಲಾ ಹಲ್ಲುಗಳು ಅದಕ್ಕೇ ಕಾಯ್ತಿವೆ ಅಂತ ಕಾಣುತ್ತೆ!

[ಈಗ ಬದಲಾವಣೆಯ ಲಕ್ಷಣಗಳು ಕಂಡುಬರುತ್ತಿವೆಯಾದ್ದರಿಂದ ಜೂನಿಪರ್‌ಗೆ ಸ್ವಲ್ಪ ಸಮಾಧಾನವಾಗಿದೆ. ಲೂಪೊ ಮುಂದೆ ಬಂದು ಇವರಿಬ್ಬರ ಕೈಗಳನ್ನೂ ಬಿಚ್ಚುತ್ತಾನೆ.]

**ಲೂಪೊ :** ನಿಮ್ಮ ಶಾಪ ಹಿಂತಗೊಳ್ಳಿ, ಫಾದರ್. ಯಾಕೆಂದ್ರೆ ನಾನು ಸಾಯಲಿಕ್ಕೆ ಯೋಗ್ಯನಿಲ್ಲ.

**ಫ್ರಾನ್ಸಿಸ್:** ನಾನು ನಿನಗೆ ಶಾಪ ಹಾಕಲಿಲ್ಲ, ಸಹೋದರ .

**ಲೂಪೊ:** ಓ! ನರಕ ಬಾಯಿ ತೆಗೆಯಲಿಲ್ಲವೇ ?

**ಫ್ರಾನ್ಸಿಸ್:** ಅದು ಒಂದಿಷ್ಟು ಭೂಕುಸಿತ, ಅಷ್ಟೇ ಸಹೋದರ. ಭೂತಾಯಿ ಕೈತೆರೆದಳು, ನಿಜ. ಆದರೆ ಅವಳು ದಯೆ ತೋರಿಸಿದ್ದಾಳೆ : ಯಾರನ್ನೂ ಘಾಸಿಗೊಳಿಸಿಲ್ಲ.

**ಲೂಪೊ :** ಓಹೋ ! ಹಾಗಾದರೆ, ಆದರ ಆದದ್ದಾದರೂ ಯಾಕೆ?

**ಫ್ರಾನ್ಸಿಸ್ :** ನನಗೆ ಗೊತ್ತಿಲ್ಲ. ನಡಿ, ನಿನ್ನ ಜನರನ್ನು ಕರಿ. ನಾನು ಅವರ ಜೊತೆ ಮಾತಾಡಬೇಕು.

**ಲೂಪೊ** : ಅವರು ಹೊರಟುಹೋಗಿದ್ದಾರೆ. ಈಗ ಇಲ್ಲಿ ನಾನೊಬ್ಬನೇ ಇರೋದು.

**ಫ್ರಾನ್ಸಿಸ್** : ಒಬ್ಬನೇ ಅಲ್ಲ, ಸಹೋದರ.

**ಲೂಪೊ** : ಓ, ಪವಾಡಪುರುಷನೇ ! ನೀನ್ಯಾರು?

**ಫ್ರಾನ್ಸಿಸ್** : ನಾನು ಅಸೀಸಿಯ ತಿರುಕ. ಒಬ್ಬ ಹುಚ್ಚ. ಜನ ನನ್ನ ಬಗ್ಗೆ ಮಾತಾಡೋದು ನೀನು ಕೇಳಿಲ್ಲವಾ? ನನ್ನ ಬಗ್ಗೆ ಅವರು ಮಾತಾಡುವಾಗ ನಗ್ತಾರೆ.

**ಲೂಪೊ** : ನೀನು ಅಸೀಸಿಯಿಂದ ಬಂದದ್ದಾ?

**ಫ್ರಾನ್ಸಿಸ್** : ಅವಳು ನನ್ನ ತಾಯಿ; ನಾನು ಅಲ್ಲೇ ಹುಟ್ಟಿದ್ದು.

**ಲೂಪೊ** : ಅವಳು ನನ್ನ ತಾಯಿಯೂ ಹೌದು. ಆದರೆ ಅವಳೂ ನನ್ನನ್ನು ಹೊರ ಹಾಕಿಬಿಟ್ಟಳು ! ಅವಳು ನನಗೆ ನ್ಯಾಯ ನಿರಾಕರಿಸಿದಳು. ನನ್ನ ಮನೆಯಲ್ಲೇ ನನ್ನನ್ನು ದೋಚಿದಳು. ಪೇಟೆಯಲ್ಲಿ ನನ್ನ ಗೇಲಿ ಮಾಡಿದಳು. ರಸ್ತೆಯಲ್ಲಿ ನನಗ ಕಲ್ಲು ಹೊಡೆದಳು. ನನ್ನನ್ನು ಶಪಿಸಿದಳು, ದ್ವೇಷಿಸಿದಳು. ನನ್ನನ್ನು ಕೊಲ್ಲಲಿಕ್ಕೆ ಪ್ರಯತ್ನಿಸಿದಳು. ನಾನೀಗ ಅವಳನ್ನು ಸುಮ್ಮನೆ ಬಿಡಲಾ? ಸೇಡು ತೀರಿಸ್ಕೊಳೋದೂ ಬ್ಯಾಡವಾ?

**ಫ್ರಾನ್ಸಿಸ್** : ಸೇಡು ತೀರಿಸ್ಕೋ, ನನ್ನ ಕೈಕಟ್ಟಿಹಾಕು. ಅವಳಿಗೆ ದಯೆ ತೋರಿಸು !

[ ಅವನು ಶಿಲುಬೆಯಾಕಾರದಲ್ಲಿ ತನ್ನ ಕೈಗಳನ್ನು ಮುಂದೆ ಚಾಚುತ್ತಾನೆ.]

**ಲೂಪೊ** : ನಾನಾ? ದಯೆ ತೋರಿಸೋದು? [ದಿಗ್ಭ್ರಾಂತನಾಗಿ ಗಲಿಬಿಲಿಗೊಂಡಿದ್ದಾನೆ.]

**ಫ್ರಾನ್ಸಿಸ್** : ತಮ್ಮಾ, ನನ್ನ ಪಕ್ಕ ನಿಂತು ನೋಡು – ಈ ನಗರವನ್ನ ! ಅವಳು ಸುಂದರವಾಗಿಲ್ಲವೆ?

[ಲೂಪೊ ನೋಡುತ್ತಾನೆ; ಅವನ ಕಣ್ಣಲ್ಲಿ ಇನ್ನೂ ದ್ವೇಷವಿದೆ. ಅವನು ತನ್ನ ಕಠಾರಿಯ ಹಿಡಿಯ ಮೇಲೆ ಕೈ ಇಟ್ಟಿದ್ದಾನೆ.]

ಅವಳು ಮುಖ ನೋಡು ! ಅವಳು ನಿನ್ನ ಕಡೆ ಮುಖ ಮಾಡಿರುವುದನ್ನು ನೀನು ಸೂರ್ಯನ ಬೆಳಕಲ್ಲಿ ಕಾಣಬಹುದು ! ಗೋಡೆಯ ಮೇಲೆ ಕಾವಲುಗಾರರಂತೆ ನಿಂತಿರುವ ಆಕೆಯ ಗೋಪುರಗಳನ್ನು ನೋಡು !

ಅವಳ ರಕ್ಷಣೆಗೆಂಬಂತಿರುವ ಅವಳ ಛಾವಣಿಗಳನ್ನು ನೋಡು. ಕಣ್ಣುಗಳಂತಿರುವ ಅವಳ ಕಿಟಕಿಗಳನ್ನು ನೋಡು. ಅವಳಿಗೆ ಕಿವಿಗಳೂ ಇವೆ, ಕೈಕಾಲುಗಳೂ ಇವೆ, ಸಹೋದರ. ಜೊತೆಗೆ ಅವಳಲ್ಲಿ ಹೃದಯವೂ ಇದೆ. ಅಲ್ಲಿ ಕೆಳಗಡೆ ರಸ್ತೆಗಳಿವೆ, ಬಾಗಿಲುಗಳಿವೆ, ಮಾರುಕಟ್ಟೆ ಇದೆ, ಮತ್ತು ಮನೆಗಳಿವೆ – ಶ್ರೀಮಂತರಿಗೂ, ಬಡವರಿಗೂ. ಅಲ್ಲೆಲ್ಲ ಮನುಷ್ಯರ ಧ್ವನಿಗಳ ಮತ್ತು ಮಕ್ಕಳ ನಗುವಿನ ಸಂಗೀತವಿದೆ. ಕಣ್ಣೀರು, ರೋದನ, ದುಃಖ ಮತ್ತು ಸಿಟ್ಟಿನದೂ ಕೂಡ. ಆದರೆ ಅವಳ ಮುಖಕ್ಕೆ ಸೌಂದರ್ಯವನ್ನು ಕೊಡುವುದೂ ದುಃಖ ಅಥವಾ ಸಿಟ್ಟಲ್ಲ. ಅವಳ ಗೋಪುರಕ್ಕೆ ಬಲವನ್ನು ಕೊಡುವುದೂ ದುಃಖ ಅಥವಾ ಸಿಟ್ಟಲ್ಲ. ಮತ್ತು ನಿನ್ನ ಬಗೆಗಿನ ಭಯದಿಂದಾಗಿ ಅವಳ ಹೃದಯದಲ್ಲಿ ಸಂತೋಷವಿಲ್ಲ.

ಬಾ, ತಮ್ಮಾ, ನನ್ನ ಜೊತೆಯಲ್ಲಿ ನಿನ್ನ ಹೃದಯ ಬರಲಿ ಆ ನಗರಕ್ಕೆ. ಇಲ್ಲೊಂದು ಮನೆ ಇದೆ : ಮತ್ತು ಆ ಮನೆಯಲ್ಲಿ ತಾಯಿಯೊಬ್ಬಳು ತನ್ನ ಮಗುವಿಗೆ ಹಾಲುಣ್ಣಿಸುತ್ತಿದ್ದಾಳೆ; ಮಗುವಿಗೆ ಏನೂ ಅರ್ಥವಾಗದಿದ್ದರೂ ತಾಯಿ ಎಂಬುದು ಗೊತ್ತಾಗುತ್ತದೆ. ಇಲ್ಲೊಂದು ಮನೆ ಇದೆ : ಆ ಮನೆಗೆ ತರುಣನೊಬ್ಬ ತನ್ನ ವಧುವನ್ನು ಕರೆತಂದಿದ್ದಾನೆ. ಅವನು ಬಾಗಿಲು ಮುಚ್ಚಿ, ಅವಳತ್ತ ತಿರುಗಿ, ಅವಳಿಗೆ ಮುತ್ತು ಕೊಡುತ್ತಾನೆ. ಅವರ ತುಟಿಗಳ ಮೇಲೆ ಪ್ರೀತಿಯ ಸವಿರುಚಿ ಇದೆ. ಇಲ್ಲೊಂದು ಮನೆ ಇದೆ. ಅವರಲ್ಲೊಬ್ಬ ಸಾಯುವ ಸ್ಥಿತಿಯಲ್ಲಿದ್ದಾನೆ. ಅವನು ಮುಂಚೆ ಗಟ್ಟಿಮುಟ್ಟಾಗಿದ್ದ, ಆದರೆ ಈಗ ದುರ್ಬಲನಾಗಿದ್ದಾನೆ. ಅವನು ಏನೇನೋ ಮಾಡಿದ್ದಾನೆ, ತಮ್ಮಾ, ಕೆಲವೊಮ್ಮೆ ಒಳ್ಳೆಯದು, ಕೆಲವೊಮ್ಮೆ ಕೆಟ್ಟದ್ದು. ಮತ್ತೀಗ ಸಾವು ಸಮೀಪಿಸುತ್ತಿದೆ. ಅವನಿಗೆ ಅದು ತಿಳಿದಿಲ್ಲ. ಆದರೂ ಅವನು ಮಾಡಿದ ಒಳ್ಳೆಯ ಕೆಲಸಗಳಿಂದ ಅವನಿಗೆ ಸಮಾಧಾನವಿದೆ.

[ಲೂಪೊ ಪಶ್ಚಾತ್ತಾಪ ಪಟ್ಟಿದ್ದಾನೆ. ಅವನಲ್ಲೀಗ ದಯೆ ಇದೆ. ಅವನು ಕಠಾರಿಯ ಮೇಲಿನ ತನ್ನ ಕೈ ತೆಗೆಯುತ್ತಾನೆ.]

ಹೌದು. ಅವನ ಹೃದಯದಲ್ಲಿ ದ್ವೇಷದ ಬದಲಾಗಿ ಪ್ರೀತಿ ಇತ್ತಾದ್ದರಿಂದ ಅವನು ಒಂಟಿಯಲ್ಲ.

[ಫ್ರಾನ್ಸಿಸ್ಸನು ಲೂಪೋನ ಎದೆ ಮುಟ್ಟುತ್ತಾನೆ.]

ಆಹ್, ಸಹೋದರ, ನಿನ್ನ ಹೃದಯವೀಗ ಮಿಡಿಯುತ್ತಿರುವುದೇಕೆ? ಒಂದು ವಿಷಯ ಹೇಳುತ್ತೇನೆ, ಕೇಳು. ಒಬ್ಬ ಮನುಷ್ಯ ಒಂದು ಸಲ ನಿಂತು ಒಂದು ನಗರವನ್ನು ನೋಡುತ್ತಿದ್ದ. ಅಕೆ ಪಾಪ ಮಾಡಿದ್ದಳು. ಆ ಮನುಷ್ಯನ ಪಕ್ಕದಲ್ಲಿ ಪ್ರತೀಕಾರದ ದೇವತೆಯೊಬ್ಬ ನಿಂತಿದ್ದ. ಅತ ಆ ನಗರವನ್ನು ನಾಶ ಮಾಡಲಿಕ್ಕೆ ಬಂದಿದ್ದ. ಆ ಮನುಷ್ಯ ದೇವತೆಗೆ ಕೇಳಿದ : ನಗರದಲ್ಲಿ "ಈ ನಗರದಲ್ಲಿ ಐವತ್ತು ಜನ ಒಳ್ಳೆಯವರಿದ್ದರೆ, ಆ ಐವತ್ತು ಜನರಿಗಾಗಿ ನೀನು ಈ ನಗರವನ್ನು ನಾಶಮಾಡುವುದಿಲ್ಲ, ಅಲ್ಲವೆ !" ದೇವತೆ ಉತ್ತರಿಸಿದ : "ಇಲ್ಲ, ಐವತ್ತು ಜನರಿಗೋಸ್ಕರ ನಾನದನ್ನು ನಾಶ ಮಾಡುವುದಿಲ್ಲ." ಆಗ ಆ ಮನುಷ್ಯ ಕೇಳಿದ : "ಐವತ್ತರಲ್ಲಿ ಐದು ಜನ ಕಡಿಮೆ ಇದ್ದರೆ ?" "ಐದು ಜನ ಕಡಿಮೆ ಇದ್ದರೂ ನಾಶ ಮಾಡುವುದಿಲ್ಲ." "ನಲವತ್ತಿದ್ದರೆ?" "ಇಲ್ಲ." "ಇಪ್ಪತ್ತಿದ್ದರೆ?" ದೇವತೆ ಹೇಳಿದ : "ಇಪ್ಪತ್ತಿದ್ದರೂ ನಾನು ನಾಶ ಮಾಡುವುದಿಲ್ಲ."

[ಲೂಪೊ ಕಠಾರಿಯಿರುವ ತನ್ನ ಬೆಲ್ಟನ್ನು ಬಿಚ್ಚುತ್ತಾನೆ.]

ಆಗ ಆ ಮನುಷ್ಯ ಹೇಳಿದ : "ದೇವರು ನನ್ನ ಮೇಲೆ ಸಿಟ್ಟಾಗದಿದ್ದರೆ ಇನ್ನೊಂದ್ಸಲ ಕೇಳ್ತೇನೆ. ಒಂದು ವೇಳೆ ಹತ್ತು ಜನ ಇದ್ದರೆ?" ಆಗ ಅವನು ಉತ್ತರ ಕೊಟ್ಟ : ನಾನು ಹತ್ತು ಜನರಿಗೋಸ್ಕರ ನಾಶ ಮಾಡಲಾರೆ."

[ಲೂಪೋನ ಬೆಲ್ಟು ಮತ್ತು ಕಠಾರಿ ಕೆಳಗೆ ಬೀಳುತ್ತವೆ. ಜೂನಿಪರ್ ಸನ್ನೆಗಳಿಗಾಗಿ ಕುತೂಹಲದಿಂದ ಕಾಯುತ್ತಾ ನೋಡುತ್ತಾ, ಶಿಲುಬೆ ವಂದನೆ ಮಾಡುತ್ತಾ ಪ್ರಾರ್ಥಿಸುತ್ತಿದ್ದಾನೆ.]

ತೋಳಣ್ಣ, ನೀನು ಒಬ್ಬ ಪಾಪಿ. ಮತ್ತು ನಾನು ಕೂಡ. ನೀನು ಅಷ್ಟೊಂದು ಪಾಪ ಮಾಡಿರುವಾಗ, ಯಾವ ಪಾಪವನ್ನೂ ಮಾಡದ ದೇವರಿಗಿಂತ ಕಡಿಮೆ ದಯಾಮಯಿಯಾಗಲು ಸಾಧ್ಯವೆ?

[ಲೂಪೊ ಕೈಯಿಂದ ಮುಖ ಮುಚ್ಚಿಕೊಳ್ಳುತ್ತಾನೆ. ದೂರದಲ್ಲಿ ಗಂಟೆಯ ಶಬ್ದ ಕೇಳಿಸುತ್ತದೆ.]

**ಜೂನಿಪರ್** : ಗಂಟೆ ಹೊಡೀತಿದಾರ ನೋಡಿ, ಫಾದರ್ !

**ಫ್ರಾನ್ಸಿಸ್** : ಹೌದು. ನಿನಗೆ ಕೇಳಿಸುತ್ತಿರುವ ಆ ಗಂಟೆಯ ಶಬ್ದ ಅಸೀಸಿಯದು. ಅದು ನಿನಗಾಗಿ, ತೋಳಣ್ಣ. ಬಾ, ನಾನು ನಿನಗೆ ಆ ನಗರದಲ್ಲಿ ಇಪ್ಪತ್ತು ಜನರನ್ನು ತೋರಿಸುತ್ತೇನೆ. ಇಪ್ಪತ್ತ್ಯಾಕೆ, ನಲವತ್ತು, ಐವತ್ತು, ನೂರು ಜನರನ್ನು ತೋರಿಸುತ್ತೇನೆ. ನಿನ್ನ ಬಗೆಗಿನ ಅವರ ಭಯವನ್ನು ನೀನು ಅವರ ಹೃದಯದಿಂದ ತೆಗೆದುಹಾಕಿದಾಗ ಸಂತೋಷಪಡುವ ಜನರನ್ನು........

[ಸ್ವಲ್ಪ ಹೊತ್ತು ಮೌನ.] ತೋಳಣ್ಣ.

[ಲೂಪೊ ಬಿಕ್ಕಿ ಬಿಕ್ಕಿ ಅಳುತ್ತಾ ಫ್ರಾನ್ಸಿಸ್ಸನ ಮುಂದೆ ಕೈಚಾಚುತ್ತಾನೆ.]

**ಲೂಪೊ** : ನಾನು ಕುರಡನಿದ್ದೇನೆ, ತಂದೆ. ನನ್ನ ಕೈ ಹಿಡಿದು ನಡೆಸು...... ನನ್ನ ಪ್ರಾಣ ನಿಮ್ಮ ಕೈಯಲ್ಲಿದೆ. ನಾನು ನಿಮ್ಮೊಡನೆ ಬರುತ್ತೇನೆ.

**ಜೂನಿಪರ್** [ಖುಷಿಯಿಂದ] : ಓ, ಫಾದರ್, ನಾನೊಬ್ಬ ಮೂರ್ಖನಾಗಿದ್ದೆ ! ಯಾಕೆಂದರೆ, ನಾನು ಇಲ್ಲಿಗೆ ಬಂದಾಗ ನನಗೆ ಹೆದರಿಕೆಯಾಗಿತ್ತು.

[ಆದರೆ ಫ್ರಾನ್ಸಿಸ್ಸನು ಅವನಂತೆಯೇ ತನ್ಮಯತೆಯಿಂದ ಸುಮ್ಮನೆ ಆಲಿಸುತ್ತಾನೆ : ಉತ್ತರ ಕೊಡುವುದಿಲ್ಲ. ಈಗ ಎಲ್ಲವನ್ನೂ ಹೇಳುವುದು ಆ ಗಂಟೆಗಳು.]

* * *

# ವೃತ್ತಾಂತ

ಮೂಲ : ಕಮಲೇಶ್ವರ್ ಅನು : ಡಿ. ಎನ್. ಶ್ರೀನಾಥ್

ಇದಕ್ಕಿಂತ ನಾನು ಹೆಚ್ಚೇನು ಹೇಳಬಲ್ಲೆ ! ಒಂದು ಗಂಡು ಹೆಣ್ಣಿನ ಮಧ್ಯೆ ಏನು ಆಗಬೇಕೋ ಅದು ಆಗುತ್ತದೆ. ಅದರ ಸಂಬಂಧಗಳ ತಳಪಾಯ ಅವರಲ್ಲಿ ಮಾತ್ರ ಆಗುವದಿಲ್ಲ....

ನೋಡಿ, ನಾನು ದಾರಿ ತಪ್ಪುತ್ತಿಲ್ಲ. ನೀವು ಕೇಳಬೇಕೆಂದಿದ್ದರೆ ಪೂರ್ಣ ವಿಷಯ ಕೇಳಿ. ತುಂಡು-ತುಂಡು ಮಾತುಗಳಿಂದ ನನ್ನ ಮನಸ್ಸಿಗೆ ಭಯವಾಗುತ್ತದೆ. ಒಂದು-ವೇಳೆ ನೀವು ನನ್ನ ವಿವಾಹಕ್ಕೂ ಸ್ವಲ್ಪ ಮೊದಲಿನ, ಸ್ವಲ್ಪ ನಡುವಿನ ಮತ್ತು ಅಂತ್ಯದ ವಿಚಾರಗಳನ್ನು ಕೇಳಲು ಬಯಸುವಿರಾದರೆ. ನಾನು ಯಂತ್ರದಂತೆ ಹೇಳುತ್ತಾ ಸಾಗುವೆ. ಯಾಕೆಂದರೆ ನಾನು ಹೇಳಬೇಕಾಗುವುದು. ನಾನು ಮೌನಿಯಾಗಿದ್ದು ನಿಮ್ಮ ಕಾನೂನಿನಿಂದ ಪಾರಾಗಲಾರೆ. ಜನರ ತಿರಸ್ಕಾರದಿಂದ ಪಾರಾಗಲಾರೆ ಹಾಗೂ ನನ್ನ ಮಗುವಿನ ಪ್ರಶ್ನೆಗಳಿಂದಲೂ ಪಾರಾಗಲಾರೆ.....

ನನ್ನ ಬದುಕನ್ನು ಹೊರತು ಪಡಿಸಿ-ಬೇರ್‍ಯಾವ ಉತ್ತರವೂ ನನ್ನ ಬಳಿ ಇಲ್ಲ. ಇರುವುದೆಲ್ಲವು ನನ್ನ ಜೀವನದಲ್ಲಿಯೇ ಚೆಲ್ಲಾಪಿಲ್ಲಿಯಾಗಿದೆ. ಎಂದೂ ಚದುರಲು ಬಿಡದ ಆ ಕ್ಷಣಗಳೂ ಈಗ ನೆನಪುಗಳಲ್ಲಿ ಚದುರಿ ಹೋಗಿವೆ ಅಥವಾ ಚದುರುತ್ತಿವೆ. ಈಗ ನಾನೇನು ಬಚ್ಚಿಡುವುದಿದೆ? ಯಾರಿಗಾಗಿ ಮತ್ತು ಯಾಕಾಗಿ ಬಚ್ಚಿಡುವುದು ?

....ಹೌದು, ಇದು ನಿಜ! ವಿವಾಹಕ್ಕೂ ಮೊದಲು ನಾನು ಜಿತನ್‌ನನ್ನು ಬಯಸುತ್ತಿದ್ದೆ. ಆದರೆ ಇದಕ್ಕೂ ಅದಕ್ಕೂ ಏನು ಸಂಬಂಧ ? ಸುಳ್ಳು- ನಿಜವನ್ನು ಸೇರಿಸಬೇಡಿ. ನಾನು ದೇವರಾಣೆಗೂ ಹೇಳ್ತೇನಿ..... .ಇದಕ್ಕೂ ಈ ಅಪಘಾತಕ್ಕೂ ಯಾವುದೇ ಸಂಬಂಧವಿಲ್ಲ. ದೇವರಿಗಾಗಿಯಾದರೂ, ನನ್ನನ್ನು ಅವಮಾನ ಮಾಡಬೇಡಿ......

ಜಿತನ್ ಈಗೆಲ್ಲಿದ್ದಾನೆಂದು ನನಗೆ ತಿಳಿದಿಲ್ಲ. ಇದು ಇಪ್ಪತ್ತೆರಡು ವರ್ಷಗಳ ಹಿಂದಿನ ಮಾತು.. ಅಲ್ಲ, ಅದಕ್ಕೂ ಒಂದೆರಡು ವರ್ಷ ಹಿಂದಿನದ್ದು. ಇಲ್ಲ, ನಾವು ಯಾವುದೇ ವಾಗ್ದಾನ ಮಾಡಿಕೊಂಡಿರಲಿಲ್ಲ. ಇಲ್ಲ, ಇಲ್ಲ, ಅವನು ನನ್ನ ವಿವಾಹದ ಸಂದರ್ಭದಲ್ಲಿಯೂ ಇರಲಿಲ್ಲ. ಅವನು ಯಾವುದೇ ಬೆದರಿಕೆಯನ್ನೂ ಒಡ್ಡಿರಲಿಲ್ಲ; ಜಿತನ್ ಇಂಥ ಹುಡುಗನಾಗಿರಲಿಲ್ಲ. ಅವನು ತುಂಬಾ ತಿಳಿವಳಿಕಸ್ಥ, ಗಂಭೀರ ಮತ್ತು ವಿವೇಕಿಯಾಗಿದ್ದ.

ನೋಡಿ, ನೀವ್ಯಾಕೆ ತಪ್ಪು ಅರ್ಥ ಮಾಡಿಕೊಳ್ತೀರಾ? ಈ ಶಬ್ದಗಳ ಉಪಯೋಗದಿಂದ. ನಾನಿಂದೂ ಸಹ ಅವನನ್ನು ಬಯಸುತ್ತೇನೆ ಅಂತ ನಿಮಗೆ ಅನ್ನಿಸುತ್ತೆ. ನೀವೇನೇ ಬೇಕಾದರೂ ಹೇಳಿ. ನಾನೇನು ಹೇಳಬಲ್ಲೆ? ಆದರೂ ಒಳ್ಳೆಯವನನ್ನು ಒಳ್ಳೆಯವನು. ಕೆಟ್ಟವನನ್ನು ಕೆಟ್ಟವನೆಂದು ಹೇಳುವ ಹಕ್ಕು ನನಗಿಲ್ಲವೇ?

ಇಲ್ಲ. ನನಗೆ ಬಿಶನ್ ಬಗ್ಗೆ ಎಷ್ಟು ಪ್ರೀತಿಯಿತ್ತೆಂದರೆ, ಇಪ್ಪತ್ತೆರಡು–ಇಪ್ಪತ್ತಮೂರು ವರ್ಷಗಳ ಹಿಂದೆ ಯಾವುದೇ ಯುವತಿ ಯಾವದೇ ಯುವಕನನ್ನು ಪ್ರೀತಿಸಿದಾಗ ಇರುವಷ್ಟೇ ಪ್ರೀತಿಯಿತ್ತು. ಅವನು ನನ್ನನ್ನು ಭೇಟಿಯಾಗಲಿಲ್ಲವೆಂದು ನಾನು ಯಾವಾಗ ಅಲ್ಲಗಳೆಯುವೆ? ಆದರೆ ನನ್ನನ್ನು ನಂಬಿ.... ವಿವಾಹದ ನಂತರ ಅವನೆಲ್ಲಿಗೆ ಹೋದನೆಂದೂ ನನಗೆ ತಿಳಿದಿಲ್ಲ....ನಿಜವಾಗಿಯೂ!

ನೋಡಿ, ಮತ್ತೆ ತಪ್ಪು ಹೇಳುತ್ತಿರುವೆ. ನನ್ನ ಪತಿ ನನ್ನನ್ನು ತುಂಬಾ ಪ್ರೀತಿಸಿದರೆಂದು ನಾನು ನನ್ನ ಅಂತರಾತ್ಮದಿಂದ ಹೇಳುವೆ. ಅವರೆಂದೂ ನನಗೆ ತೊಂದರೆ ಕೊಡಲಿಲ್ಲ. ನಾನು....!ಇದಕ್ಕೆ ಅವರೇ ಸಾಕ್ಷಿ ಹೇಳಲು ಸಾಧ್ಯವಿತ್ತು, ಒಂದು ವೇಳೆ ಅವರಿದ್ದಿದ್ದರೆ..........

ಇದು ಶುದ್ಧ ಸುಳ್ಳು....ನೀವು ತಪ್ಪು ಮತ್ತು ವ್ಯರ್ಥ ಪ್ರಶ್ನೆಗಳಿಂದ ನಿಜವಾದ ಕಾರಣಗಳಿಗೆ ಹೇಗೆ ತಲುಪುವಿರಿ? ಈ ವ್ಯರ್ಥ–ವಿಚಾರಗಳಿಂದ ನೀವು ಅವರ ಸಾವಿನ ಕಾರಣಗಳನ್ನು ಹುಡುಕಲಾರಿರಿ. ವಿವಾಹಕ್ಕೂ ಮೊದಲಿನ, ಮೋಡದ ತುಂಡಿನಂತೆ ತೇಲಿ ಕಳೆದುಹೋದ ಪ್ರೀತಿ....ಆ ಪ್ರೀತಿಯ ಕಪ್ಪು ನೆರಳುಗಳು.... ಗಂಡ–ಹೆಂಡತಿಯ ವ್ಯಾಜ್ಯ. ಚಿಕ್ಕ–ಪುಟ್ಟ ಜಗಳಗಳು, ಮನೆಯವರಿಂದ ಒತ್ತಡ ಅಥವಾ ನೆರೆಹೊರೆಯವರಿಂದ ಮನಸ್ತಾಪ–ಇವೆಲ್ಲಾ ಸಾಮಾನ್ಯ ಸಂಗತಿಗಳು. ನೀವು ಇದುವರೆಗೆ ಇವುಗಳಿಂದಲೇ ವಾಸ್ತವಿಕತೆಯನ್ನು ಮುಟ್ಟಲುತೊಡಗಿದ್ದೀರಿ. ಇವುಗಳಿಂದ ಏನೂ ಲಭ್ಯವಾಗಲಾರದು.

ಅವರೊಂದಿಗೆ ನನ್ನ ಕೊನೆಯ ರಾತ್ರಿ! ನೀವು 'ಹೂ' ಅಂದರೆ, ನಿಮ್ಮ ಕುರುಡು ಮತ್ತು ಕಿವುಡುಕಾನೂನು ಒಂದು ನಿರ್ಣಯಕ್ಕೆ ತಲುಪುವಂತೆ ನಾನು ಹೇಳುವೆ. ಆದರೆ ಆ ಕೊನೆಯ ರಾತ್ರಿಯಂದು ಇಂಥದ್ದೇನು ಘಟಿಸಿರಲಿಲ್ಲ. ಎಂದಿನಂತೆ ನಮ್ಮ ಆ ರಾತ್ರಿಯು ತುಂಬಾ ಸಾಮಾನ್ಯವಾಗಿತ್ತು–ಓರ್ವ ಸಾಮಾನ್ಯ ವ್ಯಕ್ತಿಯ ರಾತ್ರಿಯಂತೆಯೇ.

ನಾನು... ನಾನು ಯಾವ ವಿಧದಲ್ಲಿಯೂ ಅವರನ್ನು ಜರೆದಿರಲಿಲ್ಲ. ಅವರು ಸಿಟ್ಟಿನಲ್ಲಿ ಸುತರಾಂ ಇರಲಿಲ್ಲ.ನಾವು ಪರಸ್ಪರ ಅರಿತುಕೊಳ್ಳುತ್ತಿದ್ದೆವು. ಕಳೆದ ಅದೆಷ್ಟೋ ವರ್ಷಗಳಿಂದ ನಮ್ಮ ರಾತ್ರಿಗಳು ಹೀಗೆಯೇ ಕಳೆಯುತ್ತಿದ್ದವು. ನಮ್ಮ ಬಳಿ ಮತ್ತೇನಿತ್ತು? ಪರಸ್ಪರರನ್ನು ಹೊರತು ಪಡಿಸಿ.......ಚಿಂತೆಗಳನ್ನು ಹೊರತು ಪಡಿಸಿ....

ಹೆಣ್ಣು ಮಗು ! ಅವಳು ನಮ್ಮ ಬಳಿ ಒಂದು ಚಿಕ್ಕ ಮಂಚದ ಮೇಲೆ ನಿದ್ರಿಸುತ್ತಿದ್ದಳು. ನೋಡಿ, ಎರಡೇ ರೂಮುಗಳಿವೆ. ಒಂದು ವರಾಂಡವನ್ನು ನೀಗಿಸುತ್ತದೆ.

ಸಂಜೆ ಅವರು ಆಡ್ಡಾಡಲು ಹೋಗಿದ್ದರು . ಒಮ್ಮೊಮ್ಮೆ ತಡವಾಗಿ ಮರಳಿ ಬರುತ್ತಿದ್ದರು. ಆದರೆ ಅಂದು ಸಮಯಕ್ಕೆ ಸರಿಯಾಗಿ ಮರಳಿ ಬಂದಿದ್ದರು. ಮಗುವಿಗೆ ನಾಲ್ಕು ಟಾಫಿಗಳನ್ನು ತಂದಿದ್ದರು. ಅವರು ಎರಡು ಟಾಫಿಗಳನ್ನು ಅವಳಿಗೆ ಕೊಟ್ಟು, ಇನ್ನೆರಡನ್ನು ಮಾರನೆಯ ದಿನಕ್ಕಾಗಿ ಒಂದು ಹಾಳೆಯ ಕೆಳಗಿಟ್ಟಿದ್ದರು. ನೋಡಿ. ಇದಕ್ಕೂ ಮೊದಲು ಅವರೊಂದು ಸರ್ಕಾರಿ ಪತ್ರಿಕೆಯಲ್ಲಿ ನೌಕರಿ ಮಾಡುತ್ತಿದ್ದರು. ಹೌದು ! ಹೌದು. ಅವರು ಛಾಯಾಗ್ರಾಹಕರಾಗಿದ್ದರು. ಅವರೆಂದೂ ತಮ್ಮ ಉದ್ಯೋಗವನ್ನು ಬದಲಿಸಲಿಲ್ಲ. ತಾನು ಒಂದು ದಿನ ಶ್ರೇಷ್ಠ ಛಾಯಾಗ್ರಾಹಕನಾಗುತ್ತೇನೆ ಎಂಬ ವಿಶ್ವಾಸ ಅವರಿಗಿತ್ತು. ಇದು ಅವರ ಜೀವನದ ಉದ್ದೇಶವಾಗಿತ್ತು.

ಎಂದಿಗೂ ಇಲ್ಲ......ಅವರೆಂದೂ ಮಾಡಲ್ ಫೋಟೋಗ್ರಾಫಿ ಮಾಡಲಿಲ್ಲ. ಒಂದು ವೇಳೆ ಮಾಡಿದ್ದರೂ. ನಮ್ಮ ನಡುವೆ ಯಾವುದೇ ಮನಸ್ತಾಪವಾಗುತ್ತಿರಲಿಲ್ಲ. ಅವರಿಗೆ ಜಗತ್ತಿನಲ್ಲಿ ಅತ್ಯಂತ ಸುಂದರ ಹೆಣ್ಣು, ಹೆಂಡತಿ ಮತ್ತು ಯುವತಿ–ಎಲ್ಲವೂ ನಾನೇ ಆಗಿದ್ದೆ.

ನೀವು ಮುಗುಳ್ನಗಿ .....ನಿಮಗೆ ನಾನು ಸಾಧಾರಣ ಹೆಣ್ಣಾಗಿಯೇ ತೋರುತ್ತೇನೆ. ಆದರೆ ನೀವು ನನ್ನ ಪತಿಯ ದೃಷ್ಟಿಯಂತೆ ನೋಡಲು ಪ್ರಯತ್ನಿಸಿ....ಆಗಲೇ ನಿಮಗೆ ನನ್ನ ಮಾತು ಅರ್ಥವಾಗುತ್ತದೆ. ಕ್ಯಾಮರಾ ಮತ್ತು ನಾನು_ಇವರಿಗೆ ಈ ಎರಡು ಮಾತ್ರ ಸರ್ವವೂ ಆಗಿತ್ತು....ಅಥವಾ ನಮ್ಮ ಮಗು. ಒಮ್ಮೊಮ್ಮೆ ನಾನು ಅವರ ಎದೆಯಲ್ಲಿ ತಲೆಯಿಟ್ಟುಕೊಳ್ಳುತ್ತಿದ್ದೆ, ಆಗ ಅವರ ಬೆರಳುಗಳು ನನ್ನ ಗಂಡಸ್ಥಳಗಳಲ್ಲಿ. ಕಣ್ಮರೆಯಾಗುವ ಕ್ಷಣವನ್ನು ಸೆರೆಹಿಡಿಯಲು ಕ್ಯಾಮರಾದ ಮೇಲೆ ಕಂಪಿಸುವಂತೆ. ಕಂಪಿಸುತ್ತಿದ್ದವು. ನನ್ನ ಬೆರಳುಗಳನ್ನು ಒತ್ತಿ ಹಿಡಿಯುತ್ತಿದ್ದರು.... ಇವು ನಮ್ಮ ಪ್ರೀತಿಯ ಅತ್ಯಂತ ಮಧುರ ಕ್ಷಣಗಳಾಗಿರುತ್ತಿದ್ದವು.

ನೀವು ಸರಿಯಾಗಿಯೇ ಹೇಳುತ್ತೀರಿ. ವೈಯಕ್ತಿಕ ವಿಚಾರಗಳಿಂದ ನಿಮಗೇನಾಗಬೇಕಿದೆ? ಹೀಗಿರುವಾಗ ನೀವು ಕಾರಣಗಳನ್ನು ಎಲ್ಲಿಂದ ಹುಡುಕುವಿರಿ? ಎಂದು ನನಗರ್ಥವಾಗುವುದಿಲ್ಲ. ನನ್ನ ಬದುಕಿನ ಮಸಕು– ಬೆಳಕಿನಿಂದಲೇ ನೀವು ಕಾರಣ ಹುಡುಕಲು ಅನುಕೂಲವಾಗುವದು. ಈ ಕ್ಷಣಗಳಿರದಿದ್ದರೆ ನನ್ನ ಜೀವನದಲ್ಲಿ ಏನಿತ್ತು? ಇಪ್ಪತ್ತೆರಡು ವರ್ಷಗಳ ನಿರ್ಜನ ಯಾತ್ರೆ! –ವ್ಯರ್ಥವಾಗಿದ್ದು . ಪ್ರತಿ ಪದಕ್ಕೂ ತಲೆ ಚಚ್ಚಿಕೊಳ್ಳುತ್ತಾ ಸಾಗುವ ಯಾತ್ರೆ ! ಸರಿ. ನಾನು ಮೌನ ವಹಿಸುತ್ತೇನೆ.

ಆದರೆ, ಈ ವಿಚಾರಗಳನ್ನು ಬಿಡಿ ಅಂತ ನೀವೇ ಹೇಳುತ್ತೀರಿ. ಇವಲ್ಲದೆ ನನ್ನ ಬಳಿ ಬೇರೇನೂ ಇಲ್ಲ. ನನಗೆ ಮಾತನಾಡಲು ಹೇಳಿದರೆ, ನಾನು ಹೀಗೇ ಮಾತನಾಡ್ತೀನಿ. ನೀವು ಬೇಕಾದರೆ ತುಂಡು–ತುಂಡು ಪ್ರಶ್ನೆಗಳನ್ನು ಕೇಳಿ.

ಹೌದು, ಅವರು ಸರ್ಕಾರಿ ಪತ್ರಿಕೆಯಲ್ಲಿ ಛಾಯಾಗ್ರಾಹಕರಾಗಿ ಸೇರಿಕೊಳ್ಳುವುದಕ್ಕೂ ಮೊದಲು ಸರ್ಕಾರದ ಪ್ರೆಸ್ ಇನ್‌ಫಾರ್ಮೇಶನ್ ಬ್ಯೂರೋದಲ್ಲಿದ್ದರು. ಅಲ್ಲೂ ಛಾಯಾಗ್ರಾಹಕರಾಗಿಯೇ ಇದ್ದರು. ಅವರು ತಮ್ಮ

ಉದ್ಯೋಗವನ್ನು ಎಂದೂ ಬದಲಾಯಿಸಲಿಲ್ಲವೆಂದು ನಾನು ಹೇಳಿದೆನಲ್ಲ. ಪ್ರಾರಂಭದಲ್ಲಿ ಅವರು ನನ್ನನ್ನು, ತಮ್ಮ ಕಣ್ಣನ್ನು ಒತ್ತಿ ನೋಡಿದಾಗ ನನಗೆ ಕಚಗುಳಿಯಿಟ್ಟಂತಾಗುತ್ತಿತ್ತು. ಇದು ವಿವಾಹದ ನಂತರದ ಪ್ರಾರಂಭದ ದಿನಗಳ ಮಾತು. ಒಂದು ಕಣ್ಣನ್ನು ಒತ್ತಿ ನೋಡಿದಾಗಲೇ ನನಗೆ ಕಚಗುಳಿಯಾಗುತ್ತಿತ್ತು..... ನಿಮಗೆ ಗೊತ್ತಿದೆ. ನನಗೂ ಈಗ ನಗು ಬರುತ್ತದೆ. ಆದರೆ ಇದು ಅವರ ಅಭ್ಯಾಸವಾಗಿತ್ತು. ಹೌದು. ಈ ಚೇಷ್ಟೆ ತುಂಬಾ ಮಕ್ಕಳಾಟಿಕೆಯೆಂದು ಅನ್ನಿಸುತ್ತದೆ.... ಆದರೆ ಕ್ಯಾಮರಾದಿಂದಾಗಿ ಅವರು ಅಸಹಾಯಕರಾಗಿದ್ದರು. ಆನಂತರ ನನಗೆ ಅವರ ಈ ಅಭ್ಯಾಸದಿಂದ ಒಮ್ಮೊಮ್ಮೆ ಸಿಟ್ಟು ಬರುತ್ತಿತ್ತು. ಆದರೆ ಮತ್ತೆ ಕೆಲವು ದಿನಗಳ ನಂತರ, ಅವರು ಒಂದು ಕಣ್ಣನ್ನು ಒತ್ತಿ ನನ್ನನ್ನು ನೋಡುತ್ತಿದ್ದಾಗ, ನನ್ನನ್ನಷ್ಟೇ ನೋಡುತ್ತಿದ್ದರೆಂಬುದನ್ನು ತಿಳಿದೆ.

ನನ್ನನ್ನು ಕ್ಷಮಿಸಿ. ಏನು ಮಾಡಲಿ? ಮತ್ತೆ –ಮತ್ತೆ ಆ ಕ್ಷಣಗಳಿಗೇ ಹೋಗುತ್ತೇನೆ. ಈಗಂತೂ ದುಃಖ ಅನುಭವಿಸಲೇಬೇಕು. ಸಾಧ್ಯವಾದುದ್ದನ್ನು ಇಬ್ಬರೂ ಕೂಡಿ ಅನುಭವಿಸಿದೆವು. ಆದರ ಈಗ ನಮ್ಮಿಬ್ಬರ, ದಾರಿ ತಪ್ಪಿ ಬರುತ್ತಿದ್ದ ಆ ಕ್ಷಣಗಳೇ ಉಳಿದಿವೆ....ನಗು ಸಂತೋಷದ ಆ ಕೆಲವು ಕ್ಷಣಗಳು.

ಅವರು ಪ್ರೆಸ್ ಇನ್‌ಫಾರ್ಮೇಶನ್ ಬ್ಯೂರೋದಲ್ಲಿ– ಸುಮಾರು ಐದು ವರ್ಷಗಳಿದ್ದರು. ಸುಮಾರು ಆರು ವರ್ಷಗಳ ಕಾಲ ಸರ್ಕಾರಿ ಪತ್ರಿಕೆಯಲ್ಲಿದ್ದರು. ನಾಲ್ಕು ನಾಲ್ಕೂವರೇ ವರ್ಷ ಒಂದು ಜಾಹಿರಾತು ಕಂಪನಿಯಲ್ಲಿದ್ದರು.

ಹೌದು. ಅವರು ಸೋತು ನೌಕರಿ ತ್ಯಜಿಸಿದ್ದರು. ಅಥವಾ ನೌಕರಿಯಿಂದ ಬಿಡಿಸಲಾಯಿತೆಂದು ಹೇಳಿ. ಅವರು ಯಾವ ಅನುಚಿತ ಕಾರ್ಯವನ್ನೂ ಎಸಗಿರಲಿಲ್ಲ.

ಹೂಂ. ಆ ಬಗ್ಗೆ ತಿಳಿವಳಿಕೆ ನಿಮ್ಮ ಬಳಿ ಇರಬಹುದು. ಸರ್ಕಾರಿ ಕೆಲಸದ ರಿಪೋರ್ಟ್ ಸಹ ಸರ್ಕಾರದಿಂದ ಬಂದಿರಬಹುದು. ಸರಿ. ಅವರ ಕಚೇರಿಜೀವನದ ಬಗ್ಗೆ ನನಗೆ ಹೆಚ್ಚು ಗೊತ್ತಿಲ್ಲ. ವಿವಾಹದ ನಂತರ ಪ್ರಾರಂಭದ ವರ್ಷಗಳಲ್ಲಿ ಅವರು ತುಂಬಾ ಉತ್ಸಾಹದಿಂದಿರುತ್ತಿದ್ದರು !

ಹೌದು. ಚಿತ್ರಗಳ ಬಗ್ಗೆ! ಎಂಥಾ ಚಿತ್ರಗಳು? ಅವರು ಸರ್ಕಾರಿ ಛಾಯಾಗ್ರಾಹಕರಾಗಿದ್ದರು. ಅಗಸ್ಟ್ 15. ಅದ್ದೂರಿ ಭೋಜನಗಳು, ವಿದೇಶೀ ಅತಿಥಿಗಳು, ಕೆಂಪು ಕೋಟೆಯಲ್ಲಿ ಸ್ವಾಗತ ಸಮಾರಂಭ, ರಾಜಸವಾರಿ. ಶಿಲಾನ್ಯಾಸ. ಉದ್ಘಾಟನೆ– ಈ ಎಲ್ಲದರ ಚಿತ್ರಗಳಿರುತ್ತಿದ್ದವು.

ಮತ್ತೆ ಯಾವ ವರ್ಷ 26 ಜನೆವರಿಯ ಸಮಾರಂಭ ಪ್ರಾರಂಭವಾಯಿತೋ. ಆ ವರ್ಷದಿಂದ ಕೆಲವು ಯುವತಿಯರು– ಹುಡುಗಿಯರ ಭಾವಚಿತ್ರಗಳನ್ನೂ ತೆಗೆಯಲು ಪ್ರಾರಂಭಿಸಿದ್ದರು. ಜಾನಪದ ನೃತ್ಯಗಳು. ಅನೇಕ ನೋಟಗಳು, ಹಡಗಿನ ವಾದ್ಯಗಳು, ರಾಷ್ಟ್ರಪತಿಗಳ ಸವಾರಿ ಮತ್ತು ವಂದನೆ ಸ್ವೀಕರಿಸುವ ದೃಶ್ಯ – ಹೀಗೆ ನಾನಾ ರೀತಿಯ ಚಿತ್ರಗಳಿರುತ್ತಿದ್ದವು.

ಒಂದು ವಿಷಯ ಗಮನಿಸುವಂಥದ್ದು ! ಅವರನ್ನು ಸರ್ಕಾರಿ ಪತ್ರಿಕೆಗೆ ವಿಶೇಷವಾಗಿ ನೇಮಿಸಿದಾಗ ತೊಯ್ದಾಡುವ ಹೊಲಗಳು, ಅಣೆಕಟ್ಟುಗಳು, ವಿದ್ಯುತ್

ಆಗಾರಗಳು, ಫ್ಯಾಕ್ಟರಿಗಳು ಮಿಲ್‌ಗಳು, ಹೊಸ ರೇಲ್ವೆಲೈನ್‌ಗಳು, ಸೇತುವೆಗಳ ಉದ್ಘಾಟನೆಗಳು, ಶಾಲೆಗಳು, ಇತ್ಯಾದಿಗಳ ಭಾವಚಿತ್ರಗಳನ್ನು ತೆಗೆಯುತ್ತಿದ್ದರು. ಅವರು ತುಂಬಾ ಸಂತೋಷ ಪಡುತ್ತಿದ್ದರು. 'ಸ್ವಾತಂತ್ರ್ಯದ ಸುಖ ಅಂದರೆ ಇದೇ' ಎನ್ನುತ್ತಿದ್ದರು. ಆದರೆ ಅನೇಕ ವರ್ಷಗಳ ನಂತರ ಅವರ ಉತ್ಸಾಹ ಅದೆಲ್ಲಿ ಕಳೆದುಹೋಯಿತೋ? ತಿಳಿಯಲಿಲ್ಲ. ಅವರ ಮನಸ್ಸಿನಲ್ಲಿ ಅದೇನೋ ಕವಿದಿರುತ್ತಿತ್ತು. ಅವರು ಒಮ್ಮೆ 'ಈ ಚಿತ್ರಗಳಿಂದ ಏನೂ ಲಭಿಸುವದಿಲ್ಲ. ನಾನು ನನ್ನೊಳಗೆಲ್ಲೋ ಸುಳ್ಳುಗಾರನಾಗುತ್ತಿದ್ದೇನೆ. ಬಹುಶ: ಕೆಲವು ದಿನಗಳ ನಂತರ ಚಿತ್ರಗಳು ವಾಸ್ತವಿಕವಾಗಿರುತ್ತವೆ' ಎಂದು ನಾನು ಹೇಳಲಾರದ ಸ್ಥಿತಿಗೆ ಹೋಗಿರುತ್ತೇನೆ.

ಹೌದು, ಅಂದು ಅವರ ಕಣ್ಣುಗಳು ತುಂಬಾ ಕೆಂಪಗಾಗಿದ್ದನ್ನು ನೋಡಿದ್ದೆ. ಕಣ್ಣುಗಳಲ್ಲಿ ರಕ್ತ ಉಕ್ಕುತ್ತಿದೆಯೆಂದು ತೋರುತ್ತಿತ್ತು. ನಾನು ತ್ರಿಫಲಾಜಲವನ್ನು ಸಿದ್ಧಪಡಿಸಲು ಪ್ರಾರಂಭಿಸಿದ್ದೆ. ಆದರೆ ಅವರ ಕಣ್ಣುಗಳ ಕೆಂಪು ಹೋಗಲಿಲ್ಲ.

ಆ ದಿನಗಳಲ್ಲಿಯೇ ಘಟನೆಯೊಂದು ಘಟಿಸಿತ್ತು. ಥಾರ್‌ನ ಮರುಭೂಮಿಯನ್ನು ತಡೆಯುವ ಬಗ್ಗೆ ಮಂತ್ರಿಯೊಬ್ಬರು ಹೇಳಿಕೆ ನೀಡಿದ್ದರು. ಮೈಲಿಗಟ್ಟಲೆ ಕಾಡನ್ನು ಬೆಳೆಸಿ, ಮರುಭೂಮಿಯನ್ನು ಪೂರ್ವದಡೆಗೆ ಮುಂದುವರಿಯುವುದನ್ನು ತಡೆಯಲಾಗಿದೆ ಎಂದು ಬಹುಶಃ ಹೇಳಿಕೆ ನೀಡಿದ್ದರು. ಇವರು ಕಾಡಿನ ಭಾವಚಿತ್ರಗಳನ್ನು ತಂದರು. ಆದರೆ ಚಿತ್ರಗಳಲ್ಲಿ ಎಲ್ಲೂ ಕಾಡಿರಲಿಲ್ಲ. ಎಲ್ಲೆಲ್ಲೂ ಮರುಭೂಮಿಯೇ ಇತ್ತು. ಮರಗಳನ್ನು ಬೆಳೆಸಿದ್ದರೂ ಎಲ್ಲವೂ ಒಣಗಿ ಹೋಗಿದ್ದವು. ಆ ಚಿತ್ರಗಳು ತಪ್ಪಿನಿಂದಾಗಿ ಪ್ರಕಟಗೊಂಡಿದ್ದವು. ವಿರೋಧ ಪಕ್ಷದ ಸದಸ್ಯನೊಬ್ಬ ಆ ಚಿತ್ರಗಳನ್ನು ಉಲ್ಲೇಖಿಸಿ ರಂಪವೆಬ್ಬಿಸಿದ್ದ. ಇವೆಲ್ಲಾ ಬಹುಶಃ ಲೋಕಸಭೆಯಲ್ಲಿಯೇ ಘಟಿಸಿತ್ತು. ಮಂತ್ರಿಗಳ ಹೇಳಿಕೆ ಇವರ ಚಿತ್ರಗಳಲ್ಲಿ ಪುಷ್ಟಿಗೊಳ್ಳುತ್ತಿರಲಿಲ್ಲ. ಮನುಷ್ಯ ತಪ್ಪು ಮಾಡುವುದು ಸಹಜ. ಇವರಿಂದಲೂ ತಪ್ಪಾಗಿತ್ತು; ಆದರೆ ಈ ತಪ್ಪಿಗೆ ಇವರನ್ನು ತೀವ್ರವಾಗಿ ಹಳಿಯಲಾಗಿತ್ತು. ಮಂತ್ರಿಗಳು ಇವರನ್ನು ನೌಕರಿಯಿಂದ ತಗೆದುಹಾಕಲು ಆದೇಶಿಸಿದ್ದರು. ಆ ದಿನಗಳಲ್ಲಿ ಇವರು ತುಂಬಾ ವ್ಯಗ್ರರಾಗಿದ್ದರು. ಕಡೆಗೆ ಇವರು ಅಲ್ಲಿರುವುದು ಕಷ್ಟವಾಗಿತ್ತು.

ಆಗ ನಾನು ಇವರ ಕೆಂಪುಕಣ್ಣುಗಳಿಂದ ರಕ್ತದ ಮೊದಲ ಹನಿ ಉದುರುವುದನ್ನು ನೋಡಿದ್ದೆ. ರಾತ್ರಿಯೆಲ್ಲಾ ಇವರು ಚಡಪಡಿಸುತ್ತಿದ್ದರು. ಬೆಳಿಗ್ಗೆ ಎದ್ದಾಗ ಇವರ ತಲೆದಿಂಬು ರಕ್ತದ ಹನಿಗಳಿಂದ ಕೆಂಪಗಾಗಿತ್ತು.

ಹೌದು, ರಕ್ತ! ಈ ಮೊದಲು ಇದನ್ನು ನಾನೆಂದೂ ನೋಡಿರಲಿಲ್ಲ. ಕೇಳಿರಲಿಲ್ಲ. ಆದರೆ ಹೀಗಾಗಿತ್ತು. ನಮ್ಮ ಮನೆಯ ಪರಿಸ್ಥಿತಿ ತುಂಬಾ ಶೋಚನೀಯವಾಗಿತ್ತು. ಹೌದು, ನಂತರ ನೌಕರಿಯಿಂದ ಇವರು ದೂರವಾಗಿದ್ದರು. ಒಂದು ವಿಧದಲ್ಲಿ ವಿಧಿಯಿಲ್ಲದೆ ದೂರವಾಗಬೇಕಾಗಿತ್ತು, ಆಗ ಇವರು ಒಂದು ಜಾಹಿರಾತು ಕಂಪನಿಯಲ್ಲಿ ಕೆಲಸ ಪಡೆದಿದ್ದರು. ಅದು ಒಂದೆರಡು ಗಂಟೆಗಳ ಕೆಲಸವಾಗಿತ್ತು. ಕೆಲಸವಲ್ಲ, ಒಂದು

ನೆಪಮಾತ್ರವಾಗಿತ್ತು. ಬಹಳ ಕಷ್ಟದಿಂದ ಸಂಸಾರ ಸಾಗುತ್ತಿತ್ತು. ಆಗಲೇ ಹೆಣ್ಣುಮಗು ಹುಟ್ಟಿತು. ಮಗುವಿನ ಆಗಮನದಿಂದಾಗಿ ನಾವು ಕೆಲವು ದಿನ ಉಲ್ಲಸಿತರಾಗಿದ್ದೆವು.

[ಇಲ್ಲ, ಇವರೆಂದೂ ಮದ್ಯ ಸೇವಿಸಲಿಲ್ಲ. ಜಾಹೀರಾತು ಕಂಪನಿಯಲ್ಲೂ ಸೇವಿಸಲಿಲ್ಲ. ಮಾಡೆಲ್ –ಗಿಡೆಲ್ ಕರೆದುಕೊಂಡು ಎಂದೂ ಮನೆಗೆ ಬರಲಿಲ್ಲ. ಹೌದು, ಎಂದೂ ಮನೆಯಿಂದ ಹೊರಗುಳಿಯಲಿಲ್ಲ. ಪ್ರತಿಯೊಂದು ರಾತ್ರಿಯೂ ಮನೆಯಲ್ಲಿಯೇ ಕಳೆಯಿತು. ಇಲ್ಲ, ಅದೃಷ್ಟವನ್ನು ನಾನೆಂದೂ ದೂಷಿಸಲಿಲ್ಲ. ಅವರು ತುಂಬಾ ಚೆನ್ನಾಗಿ ನಡೆದುಕೊಳ್ಳುತ್ತಿದ್ದರು. ಭಾವಚಿತ್ರಗಳು! ಸುಮಾರು ಐದಾರು ಸಾವಿರಗಳಿರಬಹುದು. ಆದರೆ ಎಲ್ಲವೂ ಸರ್ಕಾರಿ ಚಿತ್ರಗಳು. ಹೌದು. ಅವು ತುಂಬಾ ಕಷ್ಟಕರ ದಿನಗಳಾಗಿದ್ದವು.

ಇನ್ನೂರು ರೂಪಾಯಿ ಸಿಗುತ್ತಿತ್ತು, ಹೌದು. ಆ ದಿನಗಳಲ್ಲಿಯೇ ನನಗೆ ನೌಕರಿ ಮಾಡಬೇಕಾಯಿತು. ಶಾಲೆಯಲ್ಲಿ ನೌಕರಿ ಮಾಡಬೇಕಾಯಿತು. ಮ್ಯಾನೇಜರ್ ಒಮ್ಮೊಮ್ಮೆ ಬರುತ್ತಿದ್ದರು. ಇವರು ಎಂದೂ ಬೇಡ ಅನ್ನಲಿಲ್ಲ. ಹೌದು, ಒಮ್ಮೊಮ್ಮೆ ಅವರನ್ನು ಬಿಟ್ಟು ಬರಲು ಹೋಗುತ್ತಿದ್ದರು.

ಮಗು ಇವರೊಂದಿಗೇ ಇರುತ್ತಿತ್ತು. ಇವರು ಹೆಚ್ಚಾಗಿ ಮನೆಯಲ್ಲಿಯೇ ಇರುತ್ತಿದ್ದರು. ಇಲ್ಲ, ಜಾಹಿರಾತು ಕಂಪನಿಯ ನೌಕರಿ ಕೊನೆಗೊಂಡ ಮೇಲೆ, ಹೌದು. ಮತ್ತೆ ಇವರು ತಮ್ಮ ಕೆಲಸವನ್ನು ಪ್ರಾರಂಭಿಸಿದ್ದರು. ಇಲ್ಲ, ಕೆಲವು ಪತ್ರಿಕೆಗಳಿಗೆ ಚಿತ್ರಗಳನ್ನು ಕಳುಹಿಸುತ್ತಿದ್ದರು. ಮನೆಯ ಬಾಥ್‌ರೂಮನ್ನು ಡಾರ್ಕ್‌ರೂಮನ್ನಾಗಿ ಮಾಡಿಕೊಂಡಿದ್ದರು. ಮಗುವಿನ ಅನೇಕ ಭಾವಚಿತ್ರಗಳನ್ನು ತೆಗೆದಿದ್ದರು. ಕೆಲವು ಚಿತ್ರಗಳು ಪತ್ರಿಕೆಗಳಲ್ಲಿಯೂ ಪ್ರಕಟಗೊಂಡಿದ್ದವು. ಆದರೆ ಅವುಗಳಿಂದ ವಿಶೇಷ ಆದಾಯವಿರಲಿಲ್ಲ ಮನೆಯ ಖರ್ಚು ನನ್ನ ನೌಕರಿಯಿಂದ ಸಾಗುತ್ತಿತ್ತು.

ದೇವರಿಗಾಗಿಯಾದರೂ ನನ್ನನ್ನು ಮತ್ತೆ ಅವಮಾನಿಸಬೇಡಿ. ನಾನು ಮ್ಯಾನೇಜರ್‌ರವರ ಮನೆಗೆ ಹೋಗುತ್ತಿದ್ದೆ. ಆದರೆ, ನಾನು ಇಲ್ಲಿಯೂ ಹಾಜರಾಗುತ್ತೇನೆಂದು ಇದರ್ಥವಲ್ಲ! ನೀವು ಹೇಳಿದರೆ ನಾನು ನನ್ನ ಈ ಮಾತಿಗೆ ಕ್ಷಮೆ ಯಾಚಿಸುತ್ತೇನೆ. ಏನು ಮಾಡಲಿ ! ಮನಸ್ಸಿಗೆ ತೀವ್ರ ಬೇಸರವಾದಾಗ ಇದೆಲ್ಲಾ ಬಾಯಿಂದ ಹೊರಬರುತ್ತದೆ. ನೋಡಿ, ನನ್ನನ್ನು .... ಕ್ಷಮಿಸಿ .... ಕ್ಷಮಿಸಿ .... ವಾಕ್ಯ.... ವಾಪಸ್ ತೆಗೆದುಕೊಳ್ತೀನಿ ..... ಆಗ ನನ್ನ ವಯಸ್ಸು .... ಈಗ ಮೂವತ್ತೆಂಟು. ಆಗ ಮೂವತ್ತೆರಡಿರಬಹುದು.

ಮ್ಯಾನೇಜರ್‌ಗೆ ಸುಮಾರು ಅರವತ್ತು ವರ್ಷ. ಹೌದು, ಹೀಗಂತ ಹೇಳಿದ್ದರು, ಒಮ್ಮೆ. ನಾನು ಇವರಿಗೆ "ನೀವು ಬೆಳಿಗ್ಗೆ–ಸಂಜೆ ಶಾಲೆಗೆ ಬರುವುದು ಮ್ಯಾನೇಜರ್‌ಗೆ ಇಷ್ಟವಿಲ್ಲವೆಂದು" ಹೇಳಿಯೂ ಇದ್ದೆ. ಇದು ಹುಡುಗಿಯರ ಶಾಲೆ ಎಂದೂ ಹೇಳಿದ್ದೆ. ಬಹುಶಃ ಇವರಿಗೆ ಬೇಸರವಾಗಿರಬಹುದು.

ನೀವು ಈ ಕಾರಣಗಳ ಬಗ್ಗೆ ಗಮನ ಕೊಡಬೇಡಿರೆಂದು ನಾನು ಮತ್ತೆ ನಿಮಗೆ ಹೇಳುತ್ತೇನೆ. ಈ ಕಾರಣಗಳು ಸುತರಾಂ ಅಲ್ಲ. ಕಥೆ–ಗಿಥೆಗಳ ಮಾತು

ಬೇರೆ. ಆದರೆ ಇದು ನನ್ನ ಜೀವನದ ವಾಸ್ತವಿಕತೆಗಳು. ಈ ರೀತಿ ಗೇಲಿ ಮಾಡಬೇಡಿ. ನನ್ನ ಒಳ್ಳೆಯ ದಿನಗಳನ್ನು ಕೊಳಕು ಮಾಡಬೇಡಿ. ಕಷ್ಟಗಳಿಗೆ ನಾವು ಹೊಂದಿಕೊಂಡುಬಿಟ್ಟಿದ್ದೆವು. ಆದರೆ ಅವೇ ನಮಗೆ ಒಳ್ಳೆಯ ದಿನಗಳಾಗಿದ್ದವು. ನನ್ನ ಪ್ರಿಯಕರ... ಅಥವಾ ಮ್ಯಾನೇಜರ್..... ಅಥವಾ ನಂತರ ಇವರೊಂದಿಗೆ ನನ್ನ ಮನೆಗೆ ಬರಲಾರಂಭಿಸಿದ್ದ ಆ ಸಂಪಾದಕ– ಅವರೆಲ್ಲಾ ಈ ನೌಕರಿ–ಕೆಲಸದ ಬದುಕಿನಲ್ಲಿ ಎಲ್ಲರೊಂದಿಗೆ ಸಮೀಪಕ್ಕೆ ಬರುತ್ತಾರೆ. ಅವರಲ್ಲಿ ವಕೀಲರು, ಸ್ನೇಹಿತರು ಮತ್ತು ಅಧಿಕಾರಿಗಳು. ಒಂದೆಡೆಯಾದರೆ, ಇನ್ನೊಂದೆಡೆ ವೈದ್ಯರು, ಗುತ್ತಿಗೆದಾರರು ಮತ್ತು ಇಂಜಿನಿಯರ್ ಆಗಿರಬಹುದು..... ಜನ ಹೀಗೇ. ಮೂವರು, ನಾಲ್ವರು ಅಥವಾ ಹತ್ತು ಜನರಾಗಬಹುದು. ಆದರೆ ಇದಕ್ಕೆ ನೀವೇನು ಅರ್ಥ ಕಲ್ಪಿಸಲು ಬಯಸುತ್ತೀರಿ? ಜೀವನ ಮತ್ತು ಸಾವಿನ ನಿರ್ಣಯವನ್ನು ಈ ಸಾಮಾನ್ಯ ಕಾರಣಗಳಿಂದ ಮಾಡುವಿರಾ? ವ್ಯರ್ಥ ಕಳಂಕವನ್ನು ಹೊತ್ತುಕೊಳ್ಳುತ್ತೀರಾ?

ಓಹ್, ನಾನು ಕ್ಷಮೆ ಯಾಚಿಸುವೆ. ಸಂಪಾದಕರು! ಅವನು ಒಂದು ಸಾಮಾನ್ಯ ಪತ್ರಿಕೆಗೆ ಸಂಪಾದಕನಾಗಿದ್ದ. ತನ್ನ ನೌಕರಿಯ ನಡುವೆಯೇ ಇವರ ಪರಿಚಯವಾಗಿತ್ತು.

ಹೂಂ, ನೋಡಿ ! ಬೇಸಿಗೆ ರಜೆಯ ಸಂಬಳ ಶಾಲೆಯಿಂದ ಸಿಗುತ್ತಿರಲಿಲ್ಲ. ರಜದಲ್ಲಿ ನಮ್ಮನ್ನು ನೌಕರಿಯಿಂದ ತೆಗೆದು ಹಾಕಲಾಗುತ್ತಿತ್ತು. ಸೆಶನ್ ಪ್ರಾರಂಭವಾದ ಮೇಲೆ ಮತ್ತೆ ನೌಕರಿಗೆ ತೆಗೆದುಕೊಳ್ಳಲಾಗುತ್ತಿತ್ತು. ರಜದ ಆ ಎರಡು ತಿಂಗಳು ನಮ್ಮ ಪರಿಸ್ಥಿತಿ ಶೋಚನೀಯವಾಗುತ್ತಿತ್ತು. ಅಲ್ಲದೆ, ಮಗಳು ಬೇರೆ !

ಆ ಸಂಪಾದಕನಿಂದಾಗಿ ನಾನು ನೌಕರಿ ತ್ಯಜಿಸಿದೆ ಎನ್ನುವುದು ಶುದ್ಧ ತಪ್ಪು. ಆ ಸಂಪಾದಕನಿಗೂ ಮ್ಯಾನೇಜರ್‌ಗೂ ಯಾವುದೇ ಜಗಳವಾಗಿರಲಿಲ್ಲ. ನನ್ನಿಂದಾಗಿಯಂತೂ ಖಂಡಿತ ಜಗಳವಾಗಿರಲಿಲ್ಲ. ಅವರ ಜಗಳಕ್ಕೆ ನಾನೇಕೆ ಕಾರಣವಾಗಲಿ? ಆ ಸಂಪಾದಕನೇ ಹಾಗಿದ್ದ. ಅವನ ಪತ್ರಿಕೆಗೆ ಎಲ್ಲರೂ ಹೆದರುತ್ತಿದ್ದರು. ಜಗಳಕ್ಕೆ ಕಾರಣ ಆ ಪತ್ರಿಕೆಯಾಗಿತ್ತು.ಇಲ್ಲ. ಇಲ್ಲ. ಇಲ್ಲ.....ನನ್ನ ನಿರ್ದೋಷ ಪತಿಯ ಬಗ್ಗೆ ಕಳಂಕ ಹೊರಿಸಬೇಡಿ. ನನಗೆ ಗೊತ್ತಿದೆ, ಕಡೆಗೆ ಈ ಕಳಂಕ ಸುತ್ತಿ ಬಳಸಿ ನನ್ನ ಬುಡಕ್ಕೇ ಬರುತ್ತದೆ. ನನ್ನ ತುಂಬು ಜೀವನದ ಗುಟ್ಟು ರಟ್ಟು ಮಾಡುತ್ತದೆ. ನೀವು ನನ್ನನ್ನು ಎಲ್ಲಿಗೆ ತಳ್ಳುತ್ತಿದ್ದೀರೆಂಬುದು ನನಗೆ ತಿಳಿದಿದೆ. ಕಾನೂನಿನ ಕೆಲಸ, ಸಾಕ್ಷಿಯನ್ನಷ್ಟೇ ಬಿಟ್ಟು ಹಾಕಿ ಅವಮಾನಗೊಳಿಸುವುದಾಗಿದೆಯೇ? ನಾನು ನನ್ನ ಪತಿಯ ಸಾವಿಗೆ ಹೇಗೆ ಜವಾಬ್ದಾರಳಾಗಬಲ್ಲೆ? ನೀವು ನನ್ನನ್ನು ಮುಳ್ಳುಗಳ ಬಳಗೆ ಯಾಕೆ ಎಳೆಯುತ್ತಿದ್ದೀರಿ? ಹೌದು, ಆ ಸಂಪಾದಕನೊಂದಿಗೆ ನನ್ನ ಪತಿ ವಿಶೇಷ ಗೆಳೆತನವನ್ನು ಮಾಡಿಕೊಂಡಿದ್ದರು. ಸರಿ, ನೀವು ವಿಶೇಷ ಶಬ್ದವನ್ನು ನೋಟ್ ಮಾಡಿಕೊಳ್ಳಲು ಬಯಸುತ್ತೀರಿ. ಸತ್ಯ ಸದಾ ಅನೇಕ ವಿಚಾರಗಳನ್ನು ಅವಲಂಬಿಸುತ್ತದೆ. ಮನುಷ್ಯನ ಇತಿಹಾಸ, ಪರಿಸ್ಥಿತಿಗಳು, ವಾತಾವರಣ, ಒಂದು ವಿಶೇಷ – ಘಟನಾಕ್ಷಣದ ಯಥಾರ್ಥ ಮತ್ತು ಎಲ್ಲದಕ್ಕಿಂತ ಹೆಚ್ಚಾಗಿ ಆಂತರಿಕ ಯಾತನೆಗಳ ದುಃಖದ ಬಗ್ಗೆ ಹಾಗೂ

ಪತಿಯ ದುಃಖಗಳು ಅಥವಾ ಅವನ ಸುಖಗಳಿಗೆ ಹೆಂಡತಿ ಮಾತ್ರ ಕಾರಣಗಳಾಗುವುದಿಲ್ಲ. ಈ ಅಭಿಪ್ರಾಯ ಶುದ್ಧ ತಪ್ಪು . ಇಬ್ಬರೂ ಪರಸ್ಪರ ಗಾಢವಾಗಿ ಬಯಸುತ್ತಿದ್ದಾಗ್ಯೂ ಪರಸ್ಪರ ಮುಗ್ಧರೂ ಆಗುತ್ತಾರೆ ..... ಒಂದೊಂದಾಗಿಯೂ ಬೇರೆಯಾಗುತ್ತಾರೆ–ನೀರಿನ ಅಲೆಗಳಂತೆ.

ಇಲ್ಲ, ನಾನು ದರ್ಶನಶಾಸ್ತ್ರವನ್ನು ಬೋಧಿಸುವುದಿಲ್ಲ. ಕೆಲವು ಶಬ್ದಗಳು ಅರ್ಥವಾಗುವದಿಲ್ಲ– ಇತಿಹಾಸ, ಪರಿಸ್ಥಿತಿಗಳು, ಯಾತನೆಗಳು ಮುಕ್ತಿ ! ನಾನು ಅವುಗಳ ಅರ್ಥ ಹೇಳಲಾರೆ. ನೀವು ದಯಪಿಟ್ಟು ಹಿಂದೀ, ಇಂಗ್ಲೀಷ್ ಶಬ್ದಕೋಶದಲ್ಲಿ ನೋಡಿಕೊಳ್ಳಿ. ಬರೆದ ಅರ್ಥಗಳು ನನ್ನ ಶಬ್ದಗಳ ಆಳದವರೆಗೆ ಹೋಗಲಾರವ ಸಾಧ್ಯತೆಯಿದೆ. ಇಲ್ಲ, ನಾನು ಭಾಷಣ ಮಾಡುವುದಿಲ್ಲ. ಘಟನೆಗಳನ್ನಷ್ಟೇ ವರ್ಣಿಸುತ್ತಾ ಹೋಗುವೆ.

ವಿಶೇಷ ಗೆಳೆತನ ! ಈ ಗೆಳೆತನ, ಅಗತ್ಯದ ಮೇಲೂ ನಿಂತಿತ್ತು. ಹೌದು, ಆ ಸಂಪಾದಕ ಮನೆಗೆ ಊಟ ಮಾಡಲೂ ಬರುತ್ತಿದ್ದ. ನನ್ನ ಪತಿಯೇ ಕರೆಯುತ್ತಿದ್ದರು. ನಾನು ಅವನೊಂದಿಗೆ ಎಲ್ಲಿಗೂ ಹೋಗುತ್ತಿರಲಿಲ್ಲ. ಅವನ ಕಣ್ಣುಗಳಲ್ಲಿಯೂ ಯಾವುದೇ ವಿಶೇಷ ಕೊಳಕು ನನಗೆ ಕಾಣಿಸುತ್ತಿರಲಿಲ್ಲ. ನೀವು ಹೇಳುವ ಕೊಳಕು ಎಲ್ಲರ ದೃಷ್ಟಿಗಳಲ್ಲಿರುತ್ತದೆ. ಅದನ್ನು ನೀವು ಗಂಡು–ಹೆಣ್ಣಿನ ನಡುವಿನ ಸಾಮಾನ್ಯ ಸಳೆತ ಎನ್ನಬಲ್ಲಿರಿ...... ಒಂದು ವೇಳೆ ಆ ಗೆಳೆತನವನ್ನು ಕೊಳಕು, ತುಚ್ಛ ಅಥವಾ ಕೆಡುಕೆಂದು ತಿಳಿಯದಿದ್ದರೆ ಅದು ತುಂಬಾ ಸಾಮಾನ್ಯ ವಸ್ತು. ತನ್ನನ್ನು ಕನ್ನಡಿಯಲ್ಲಿ ನೋಡಿಕೊಳ್ಳುವಂತೆ. ಪ್ರತಿಯೊಬ್ಬರೂ ಹೆಣ್ಣಿನ ಕನ್ನಡಿಯಲ್ಲಿ ತನ್ನನ್ನು ನೋಡುತ್ತಾರೆ. ಇದರಲ್ಲಿ ವಯಸ್ಸು ಅಥವಾ ಸಂಬಂಧಗಳ ಕೈವಾಡವಿರುವ ಅಗತ್ಯವಿಲ್ಲ.

ಈ ಸುದ್ದಿಯನ್ನು ನಿಮಗೆ ತಪ್ಪಾಗಿ ಕೊಡಲಾಗಿದೆ. ರಜ ಕಳೆದ ಮೇಲೆ ಮತ್ತೆ ನನ್ನನ್ನು ಶಾಲೆಗೆ ನೇಮಿಸಿಕೊಳ್ಳಲಾಗಿತ್ತು. ಇಲ್ಲ, ನಾನು ಸಂಪಾದಕ ಮತ್ತು ಮ್ಯಾನೇಜರರ ಜಗಳದಿಂದಾಗಿ ಕೆಲಸವನ್ನು ಬಿಡಲಿಲ್ಲ. ಇದು ಶುದ್ಧ ತಪ್ಪು. ನೋಡಿ ಅವನ ಪತ್ರಿಕೆಯಲ್ಲಿ ಗುಟ್ಟು ರಟ್ಟಾಗುವಂತಹ ವರದಿಗಳು ಪ್ರಕಟಗೊಳ್ಳುತ್ತವೆ.

ಸಂಪಾದಕ, ಮ್ಯಾನೇಜರರ ಕಾರ್ಯವೈಖರಿಯ ಬಗ್ಗೆ ಯಾವುದೇ ವರದಿಯನ್ನು ಬರೆದಿರಲಿಲ್ಲ. ಪ್ರಕಟಿಸಿಯೂ ಇರಲಿಲ್ಲ. ಅವನು ಬ್ಲಾಕ್ ಮೇಲ್ ಮಾಡಿರಲಿಲ್ಲ. ನೀವು ಇದನ್ನ ನನ್ನ ಸಲಹೆಯೆಂದು ಹೇಗೆ ಹೇಳಬಲ್ಲಿರಿ? ಸಂಪಾದಕರನ್ನು ಪಾರು ಮಾಡುವುದು ಅಥವಾ ಅವನ ನಿಯತ್ತನ್ನು 'ಸರಿ' ಯೆನ್ನುವುದು ಕೇವಲ ಒಂದು ವಾಸ್ತವಿಕತೆ. ಇದನ್ನು ನೀವು ನನ್ನ ಮನಸ್ಸಿನ ದೌರ್ಬಲ್ಯವೆಂದು ಹೇಗೆ ಹೇಳಬಲ್ಲಿರಿ? ಹಾಗಂತ ಹೆಣ್ಣಿನ ಮನಸ್ಸು ಪ್ರತಿಯೊಂದು ದೌರ್ಬಲ್ಯದ ಬಗ್ಗೆ ದುರ್ಬಲವಾಗಿರುತ್ತದೆ.

ನನ್ನ ಪತಿ ಯಾವುದೋ ಒಪ್ಪಂದವೊಂದನ್ನು ಮಾಡಿಕೊಂಡಿದ್ದರೆಂದು ಹೇಳುವುದು ಶುದ್ಧ ತಪ್ಪು. ನೀವು ಅವರ ಸಾವಿನ ವಾಸ್ತವಿಕ ಕಾರಣಗಳನ್ನು ಇಷ್ಟು

ಸಣ್ಣ ಮತ್ತು ಅಶಿಷ್ಟ ವಿಚಾರಗಳೊಂದಿಗೆ ಯಾಕೆ ಜೋಡಿಸುತ್ತಿದ್ದೀರಿ? ಒಂದು ವೇಳೆ ನೀವು ಅರ್ಥಮಾಡಿಕೊಳ್ಳುವುದಾದರೆ ನಾನು ಅವರ ಬಗ್ಗೆ ಸ್ವಲ್ಪ ಹೇಳುವೆ.....ಅವರ ಕಣ್ಣುಗಳು ಕೆಂಪಗಾಗಿರುತ್ತಿದ್ದವು ಎಂದು ನಾನು ನಿಮಗೆ ಹೇಳಿದ್ದೆ. ತಪ್ಪು ಚಿತ್ರಗಳು ಪ್ರಕಟಗೊಂಡ ಮೇಲೆ ಅವರೊಂದಿಗೆ ಏನು ಘಟಿಸಿತ್ತೋ ಅದನ್ನು ಅವರಿಂದ ಸಹಿಸಲು ಸಾಧ್ಯವಾಗಿರಲಿಲ್ಲ. ಅವರು ತಮ್ಮ ಕೆಲಸದ ಬಗ್ಗೆಯೇ ವಿಶ್ವಾಸವನ್ನು ಕಳೆದುಕೊಂಡಿದ್ದರು. ಮನುಷ್ಯನ ನಂಬಿಕೆ ತನ್ನ ಕೆಲಸದ ಬಗ್ಗೆ ಕಳೆದುಹೋದರೆ ಅವನ ಪರಿಸ್ಥಿತಿ ಏನಾಗುತ್ತದೆಯೆಂಬುದನ್ನು ನೀವು ಯೋಚಿಸಬಲ್ಲಿರಿ! ಅವರಿಗೆ ಭರವಸೆಯನ್ನು ತುಂಬುತ್ತಿದ್ದ ಆ ಚಿತ್ರ ಒಮ್ಮೆಲೆ ಅವರ ನಂಬಿಕೆಯನ್ನು ಚೂರು ಚೂರು ಮಾಡಿತ್ತು. ಯಾಕೆಂದರೆ ಅವರನ್ನು ಸತ್ಯದಿಂದ ವಿಮುಖಗೊಳಿಸಲಾಗಿತ್ತು. ಇನ್ನೊಬ್ಬರು ಬಯಸುತ್ತಿದ್ದಂತೆಯೇ ಅವರು ಹೇಳಬಲ್ಲವರಾಗಿದ್ದರು. ಈ ಪರಿಣಾಮಕ್ಕೆ ಬಂದ ನಂತರ ಅವರ ಕಣ್ಣುಗಳಿಂದ ರಕ್ತದ ಹನಿಗಳು ಮೊದಲ ಬಾರಿಗೆ ಬಿದ್ದಿದ್ದವು.

ನೀವು ಬಯಸಿದರೆ ಕಣ್ಣೀರು ಎಂದು ಹೇಳಿ. ಆದರೆ ಇದು ಸರಿಯಲ್ಲ. ನಾನು ಖಂಡಿತ ದೊಡ್ಡದು ಮಾಡಿ ಹೇಳುತ್ತಿಲ್ಲ. ಅವು ಖಂಡಿತವಾಗಿಯೂ ರಕ್ತದ ಹನಿಗಳಾಗಿದ್ದವು. ಹೌದು. ಒಮ್ಮೊಮ್ಮೆ ಕೆಲವು ವಿಷಯಗಳನ್ನು ಮೊದಲು ನೋಡಿರುವುದಿಲ್ಲ. ಕೇಳಿರುವುದಿಲ್ಲ. ಅವು ವಿಚಿತ್ರವಷ್ಟೇ ಆಗಿರುತ್ತವೆ.

ಸರಿ....ಆ ದಿನಗಳಲ್ಲಿ ನಾನು ನೌಕರಿಗೆ ಹೋಗಲಾರಂಭಿಸಿದ್ದೆ. ಅವರು ಮನೆಯಲ್ಲಿ ಮಗುವಿನೊಂದಿಗೆ ಸಮಯ ಕಳೆಯುತ್ತಿದ್ದರು. ಅಂದು ಭಾನುವಾರವಾಗಿತ್ತು. ಅವರು ಮಗುವನ್ನು ಪಕ್ಕದ ಮನೆಗೆ ಆಡಲು ಕಳುಹಿಸಿದ್ದರು. ಇಲ್ಲಿ, ಜಗಳದ ಮಾತಿರಲಿಲ್ಲ. ಬದಲಾಗಿ ಅಂದು ಅವರಲ್ಲಿ ಪ್ರೀತಿಯನ್ನು ಕಾಣಬಹುದಿತ್ತು. ಅದೆಷ್ಟೋ ದಿನಗಳ ನಂತರ ಅವರು ನನ್ನ ಕೈಯನ್ನು ತಮ್ಮ ಕೈಯಲ್ಲಿ ಹಿಡಿದುಕೊಂಡು, ನನ್ನ ಬೆರಳುಗಳನ್ನು ಒತ್ತಿದ್ದರು. ಅವರು ನನಗೆ ರವಿಕೆ ಕಳಚಲು ಹೇಳಿದ್ದರು. ನಾನು ಸ್ವಲ್ಪ ಸಂಕೋಚಗೊಂಡಿದ್ದೆ. ಹಗಲು ವೇಳೆಯಾಗಿತ್ತು. ಅವರು ಕ್ಯಾಮರಾದೊಂದಿಗೆ ಕೂತಿದ್ದರು. ನಂತರ ಅವರು ನನಗೆ ವಾಯಿಲ್‌ನ ತೆಳು ಸೀರೆಯುಡಲು ಹೇಳಿದ್ದರು. ನಾನಾಭಂಗಿಯಲ್ಲಿ ಕೂರಿಸಿ, ಮಲಗಿಸಿ ನನ್ನ ಭಾವಚಿತ್ರಗಳನ್ನು ತೆಗೆದಿದ್ದರು. ಆಗ ಅವರ ಒಂದು ಕಣ್ಣು ಮೊದಲಿನಂತೆ ಕಂಪಿಸುತ್ತಿತ್ತು. ಅವರು ನನ್ನನ್ನಷ್ಟೇ ನೋಡುತ್ತಿದ್ದಾರೆಂದು ನಾನು ತಿಳಿದಿದ್ದೆ. ಆಗ ಅವರು ತನ್ಮಯರಾಗಿದ್ದರು.... ಅಂದರೆ ಅವರು ಭಾವಚಿತ್ರ ತೆಗೆಯುವಲ್ಲಿ ತನ್ಮಯರಾಗಿದ್ದಾಗ್ಯೂ ಎಂಟು-ಹತ್ತು ಬಾರಿ ಅವರ ಕಣ್ಣುಗಳಿಂದ ರಕ್ತದ ಹನಿಗಳು ಉದುರಿದ್ದವು. ಅವರು ನನ್ನನ್ನು ದಯನೀಯವಾಗಿ ಆಯಾಸಪಡಿಸಿದ್ದರು. ಅವರು ತುಂಬಾ ದಣಿದಿದ್ದರು. ನಂತರ ಅವರು ಹಾಸಿಗೆಯಲ್ಲಿ ಮಲಗಿ ಛಾವಣಿಯನ್ನೇ ದುರುಗುಟ್ಟಿ ನೋಡಲಾರಂಭಿಸಿದ್ದರು. ನಾನು ಬಟ್ಟೆಧರಿಸಿ ಅವರಿಗೆ ಚಹಾ ಕೊಡಲು ಬಂದಾಗ ಅವರ ಕಣ್ಣುಗಳಿಂದ ರಕ್ತ ಹನಿಯುತ್ತಿತ್ತು. ಒಂದು ವೇಳೆ ಅವರು ಪ್ರೀತಿಯಿಂದ

ನೋಡಲು ಕಣ್ಣುಗಳ ರೆಪ್ಪೆ ಬಡಿದಾಗ, ರಕ್ತದ ಹನಿಗಳು ಉದುರಿದರೆ ಎಂದು ಭಯವೂ ಆಯಿತು. ಚಹಾವನ್ನು ತಲೆಯ ಬಳಿಯಿದ್ದ ತಿವಟಿಗೆಯ ಮೇಲಿಟ್ಟಿದ್ದೆ. ಅದು ಅಲ್ಲಿಯೇ ಉಳಿದು ತಣ್ಣಗಾಗಿತ್ತು.

ಊಟ ಮಾಡುವಾಗ ಅವರು, 'ಸ್ವಲ್ಪ ಸಂಪಾದನೆಯಾದರೆ ಒಂದು ಟೆಲಿಲೆನ್ಸ್ ಕೊಳ್ತೀನಿ, ಜಾಹಿರಾತಿಗೆ ಯೋಗ್ಯವಾದ ಕೆಲಸ ಮಾಡಬಹುದು' ಎಂದಿದ್ದರು. ಅದಕ್ಕೆ ಅವರಿಗೆ ಸ್ವಲ್ಪ ಹಣದ ಅಗತ್ಯವಿತ್ತು. ಮನೆಯ ರಥ ನನ್ನ ಸಂಬಳದಿಂದ ಸಾಗುತ್ತಿತ್ತು. ಆಗಲೂ ಅವಶ್ಯಕತೆಗಳಿಗಾಗಿ ಹಣ ಬೇಕಾಗುತ್ತಿತ್ತು. ಊಟ ಮಾಡುವಾಗ ಅವರು ಶಾರ್ಕ್, ಸ್ಟೀಗಲಿಟ್ಜ್/ಸ್ಟೈಶನ್, ಸ್ಟ್ರೆಂಡ್, ವೆಸ್ಟನ್, ಸ್ಮಿಥ್, ಅವೆದೋನ್, ಪಾಲ್, ಕಾಶೀನಾಥ್, ಪಾರೀಖ್ ಮುಂತಾದವರ ಹೆಸರನ್ನು ಪದೇ ಪದೇ ಹೇಳುತ್ತಿದ್ದರು.

ಇಲ್ಲ. ಇಲ್ಲ; ತಪ್ಪು ತಿಳಿಯಬೇಡಿ, ಇವು ನನ್ನ ಸ್ನೇಹಿತರ ಅಥವಾ ಬಯಸುವವರ ಹೆಸರಲ್ಲ. ನೀವು ಸದಾ ತಪ್ಪು ಸಂಬಂಧಗಳನ್ನೇ ಜೊತೆ ಹಾಕುತ್ತೀರಿ.....ಸದಾ ಮನುಷ್ಯನ ಅಸ್ತಿತ್ವದ ಬಗ್ಗೆ ಅನುಮಾನಿಸುತ್ತೀರಿ....ಅಸ್ತಿತ್ವ. ಹೌದು, ಅಸ್ತಿತ್ವವೆಂದು ತಿಳಿಯಿರಿ. ಇದು ವ್ಯಕ್ತಿಯ ಬದುಕಿನ ಕಾನೂನು ಶಬ್ದ. ಇದು ನಿಮಗೆ ಪುಸ್ತಕಗಳಲ್ಲಿ ಸಿಗುವದಿಲ್ಲ. ಸರಿ, ಸಂಜೆಯೇ ಅವರು ಫಿಲ್ಮ್ ಡೆವಲಪ್ ಮಾಡಿ ಪ್ರಿಂಟ್ ತೆಗೆದಿದ್ದರು. ಪ್ರಿಂಟ್‌ಗಳನ್ನು ನೋಡುವಾಗ ತುಂಬಾ ಗಂಭೀರರಾಗಿದ್ದರು. ಅವರಿಗೇನಾಗಿತ್ತೆಂದು ನನಗೆ ತಿಳಿಯಲಿಲ್ಲ. ಅವರು ನನ್ನ ಚಿತ್ರಗಳೊಂದಿಗೆ ಕನ್ನಡಿಯೆದುರು ನಿಂತಿದ್ದರು. ಅವರು ಚಿತ್ರಗಳನ್ನು ನೋಡಿ, ಕನ್ನಡಿಯಲ್ಲಿ ತಮ್ಮ ಮುಖವನ್ನು ನೋಡಿಕೊಳ್ಳುತ್ತಿದ್ದರು.

ಸರಿ, ಆಗಲೇ ಅವರ ಕಣ್ಣುಗಳಿಂದ ರಕ್ತದ ಧಾರೆ ಸ್ರವಿಸಲು ಪ್ರಾರಂಭವಾಗಿತ್ತು, ಅಂದು ಸಂಜೆಯಿಂದ ತೊಟ್ಟಿಕ್ಕುವ ರಕ್ತ ಮತ್ತೆಂದೂ ನಿಲ್ಲಲಿಲ್ಲ. ಒಂದೇ ಸಮನೆ ರಕ್ತ ತೊಟ್ಟಿಕ್ಕುತ್ತಲೇ ಇತ್ತು.

ಸಂಪಾದಕರು ನನ್ನ ಎರಡು ಚಿತ್ರಗಳನ್ನು ಮಾರನೇ ದಿನ ಪ್ರಕಟಿಸಿದ್ದರು. ಸರಿ, ಇಲ್ಲಿಂದಲೇ ಗದ್ದಲ ಪ್ರಾರಂಭವಾಗಿತ್ತು. ನನ್ನ ಆ ಅರೆಬೆತ್ತಲೆ ಚಿತ್ರಗಳು ಶಾಲೆಯ ಮ್ಯಾನೇಜರರಿಗೆ ತಲುಪಿದ್ದವು. ಇಂಥ ಹೆಣ್ಣು ಶಾಲೆಯಲ್ಲಿರುವುದು ಒಂದು ಕ್ಷಣವೂ ಸಂಭವವಿಲ್ಲವೆಂದು ಅವರು ತಕ್ಷಣ ನಿರ್ಧರಿಸಿದರು. ನನ್ನನ್ನು ಆ ಕೂಡಲೇ ತರಗತಿಯಿಂದ ಕರೆಸಿ, ನಿಂತಂತೆಯೇ ನನ್ನ ಲೆಕ್ಕ ಚುಕ್ತಾ ಮಾಡಲಾಗಿತ್ತು.

ನನ್ನನ್ನು ಶಾಲೆಯಿಂದ ತೆಗೆದು ಹಾಕಿದ ಕಾರಣವೇನೆಂದು ನೀವು ಅರ್ಥ ಮಾಡಿಕೊಳ್ಳಬಲ್ಲಿರಿ! ಸಂಪಾದಕರಿಗೂ ಮ್ಯಾನೇಜರ್‌ರವರಿಗೂ ಯಾವುದೇ ಜಗಳವಿರಲಿಲ್ಲ. ನನ್ನ ಬಗ್ಗೆ ಅವರಲ್ಲಿ ಹಗೆತನವಿರಲಿಲ್ಲ. ನನ್ನ ಮತ್ತು ಸಂಪಾದಕರ ಸಂಬಂಧಗಳ ಬಗ್ಗೆ ಯೋಚಿಸುವುದು ಅಥವಾ ತಿಳಿಯುವುದು ಶುದ್ಧ ಅನಾವಶ್ಯಕ. ಅವರ ಸಾವಿಗೆ ಕಾರಣವನ್ನು ಈ ಕಾರಣಗಳಲ್ಲಿ ಹುಡುಕಬೇಡಿ. ನೋಡಿ, ರಕ್ತದ ಧಾರೆಗೆ ಕಾರಣವನ್ನು ನಾನೇನು ಹೇಳಬಲ್ಲೆ? ನನ್ನ ವಶದಲ್ಲಿಲ್ಲದ ಪರಿಣಾಮಗಳನ್ನು ನಾನು

ನೋಡಬಲ್ಲೆನಷ್ಟೆ....ಮತ್ತೇನು ತಾನೇ ಮಾಡಬಲ್ಲೆ! ಒಂದು ವೇಳೆ ನೀವು ತುಂಬಾ ಸಾಮಾನ್ಯವಾಗಿ ಯೋಚಿಸಿದರೆ. ಆಗ ನಾನು ಕಾರಣಗಳಾಗಬಹುದು. ಅವರೇ ಕಾರಣರಾಗಬಹುದು. ಆ ಭಾವಚಿತ್ರಗಳೂ ಆಗಬಹುದು. ಮತ್ತೆ ಆ ಕನ್ನಡಿಯೂ ಆಗಬಹುದು—ಅದೇ ಕನ್ನಡಿಯಲ್ಲಿ ಅವರು ಪದೇ ಪದೇ ತಮ್ಮ ಮುಖವನ್ನು ನೋಡಿಕೊಳ್ಳುತ್ತಿದ್ದರಲ್ಲ.... ಫಲಿತಾಂಶಗಳು ಮತ್ತು ಅವುಗಳ ಕಾರಣಗಳನ್ನು ತಿಳಿಯಲು ಅತ್ಯಂತ ಸುಲಭ ವಿಧಾನವೆಂದರೆ ನಾನು. ಅವರು. ಚಿತ್ರಗಳು ಮತ್ತು ಕನ್ನಡಿ—ಈ ನಾಲ್ಕು ವಸ್ತುಗಳ ಮೇಲೆ ಭಾರ ಹೊರಿಸುವುದೇ ಅತ್ಯಂತ ಸುಲಭ ವಿಧಾನವಾಗಬಲ್ಲದು. ಇದನ್ನು ಸರಿಯೆಂದು ಸಾಬೀತುಪಡಿಸಲು ಅಗತ್ಯವುಂಟಾದರೆ ನನ್ನ ನಾಮಮಾತ್ರದ ಪ್ರಿಯಕರ ಬಿಶನ್/ ಮ್ಯಾನೇಜರ್ ಅಥವಾ ಸಂಪಾದಕನನ್ನು ಅಗತ್ಯಕ್ಕನುಗುಣವಾಗಿ ಸೇರಿಸಬಹುದು. ನಾನೇನು ತಾನೇ ಮಾಡಲು ಸಾಧ್ಯ? ನನ್ನನ್ನು ತಪ್ಪಿತಸ್ಥಳೆಂದು ಪರಿಗಣಿಸಿ.

ನೋಡಿ. ನಾನಾಗ ಮನೆಯಲ್ಲಿರಲಿಲ್ಲ. ಮಗು ಅವರನ್ನು ತುಂಬಾ ಪ್ರೀತಿಸುತ್ತಿತ್ತು. ಹೌದು, ಮಗುವೂ ಸಹ ಅವರ ಕಣ್ಣುಗಳಲ್ಲಿ ಒಂದೇ ಸಮನೆ ರಕ್ತದ ಧಾರೆ ಹರಿಯುತ್ತಿರುವುದನ್ನು ನೋಡಿತ್ತು. ಅವಳು ತುಂಬಾ ಹೆದರಿದ್ದಳು. 'ಮಮ್ಮಿ, ಡ್ಯಾಡಿಯ ಕಣ್ಣುಗಳಿಂದ ರಕ್ತ ಯಾಕೆ ಬರುತ್ತೆ?' ಎಂದು ಅವಳು ಪ್ರಶ್ನಿಸಿದ್ದಳು. 'ಮಗು. ನಿಮ್ಮ ಡ್ಯಾಡಿಯ ಆರೋಗ್ಯ ಸರಿಯಿಲ್ಲ. ಅವರಿಗೆ ಸ್ವಲ್ಪ ಕಾಯಿಲೆಯಾಗಿದೆ' ಎಂದು ಅವಳಿಗೆ ಪ್ರೀತಿಯಿಂದ ಹೇಳಿದ್ದೆ.

ಮಗಳು ನನ್ನ ಮಾತಿನಿಂದ ತೃಪ್ತಳಾಗಿರಲಿಲ್ಲ. ಅವಳು ಅವರನ್ನು ಕೇಳಿದ್ದಳು. 'ನನ್ನ ಆರೋಗ್ಯ ಸರಿಯಿಲ್ಲ' ಎಂದು ಅವರೂ ಹೇಳಿದ್ದರು. ಅಂದಿನಿಂದ ಮಗಳ ಭಯ ದೂರವಾಗಿತ್ತು. ಅವರ ಮಡಿಲಲ್ಲಿ ಅಥವಾ ಅವರ ಕತ್ತನ್ನು ಬಳಸಿ ಅವಳು ಅವರನ್ನು ಮುದ್ದಿಸುತ್ತಿದ್ದಳು. ಒಮ್ಮೊಮ್ಮೆ ತನ್ನ ಪುಟ್ಟ, ಕೋಮಲ ಕೈಗಳಿಂದ ರಕ್ತವನ್ನು ಒರೆಸುತ್ತಿದ್ದಳು.

ನಾನೊಂದು ಕಡೆ ನೌಕರಿ ಅರಸುವ ಬಗ್ಗೆ ಹನ್ನೊಂದು ಗಂಟೆಗೆ ಹೋಗಿದ್ದೆ, ಮಗಳು ಶಾಲೆಗೆ ಹೋಗಿದ್ದಳು. ಅವರು ಮನೆಯಲ್ಲಿ ಒಂಟಿಯಾಗಿದ್ದರು ಎಂದು ನಾನು ಹೇಳಿದೆನಲ್ಲ....

ಹೌದು. ನೌಕರಿ ತಪ್ಪಿಹೋದ ಎರಡನೆಯ ದಿನದ ಸಂಗತಿ. ನನಗೆ ಈ ಅಪಘಾತದ ಅಂದಾಜೇ ಇರಲಿಲ್ಲ. ನಾನು ಹೋಗಿದ್ದಾಗ ರಕ್ತ ಹೆಚ್ಚಾಗಿಯೇ ಒಸರುತ್ತಿತ್ತು. ಅದರೆ ಇದು ನಿತ್ಯದ ಸಾಮಾನ್ಯ ಸಂಗತಿಯಾಗಿತ್ತು .

ಹೌದು. ಅವರ ಛಾವಣಿಯ ಕಡಗಿಗೆ ಜೋತುಬಿದ್ದು ನೇಣು ಹಾಕಿಕೊಂಡಿದ್ದರು. ಹಗ್ಗ, ಹಗ್ಗವೆಲ್ಲಿತ್ತು? ರಗ್ಗಿನಿಂದ ನೇಣು ಹಾಕಿಕೊಂಡಿದ್ದರು.

ನನಗೆ ಯಾವುದೇ ವಿಷಯ ತಿಳಿಯಲಿಲ್ಲ. ಯಾರು ನನಗೆ ವಿಷಯ ತಿಳಿಸುತ್ತಾರೆ? ನಾನು ಸುಮಾರು ನಾಲ್ಕು ಗಂಟೆಗೆ ಮರಳಿ ಬಂದೆ. ಅಷ್ಟರಲ್ಲಿ ಎಲ್ಲವು

ಸಂಭವಿಸಿತ್ತು. ಪೊಲೀಸರು ಬಂದಿದ್ದರು. ಅವರ ಶವವನ್ನು ಇಳಿಸಿ ಮಂಚದ ಮೇಲೆ ಮಲಗಿಸಲಾಗಿತ್ತು. ಅವರಿಗೆ ಜೇರೆ ರಗ್ಗನ್ನು ಹೊದಿಸಲಾಗಿತ್ತು. ನೆರೆಹೊರೆಯವರು ಹೊರಟು ಹೋಗಿದ್ದರು. ಓರ್ವ ನೆರೆಯವರು ಮಾತ್ರ ವ್ಯಗ್ರರಾಗಿ ಅಡ್ಡಾಡುತ್ತಿದ್ದರು. ನಾನು ಬಂದಾಗ ಪೊಲೀಸಿನವನೊಬ್ಬ ಕಾವಲು ಕೂತಿದ್ದ. ಅವನನ್ನು ನೋಡಿದ ಮೇಲೂ ನನಗೆ ಅರ್ಥವಾಗಿರಲಿಲ್ಲ, ಇದು ಎಂದಾದರೂ ಸಂಭವಿಸುವುದೆಂದು ನಾನು ಯೋಚಿಸಿಯೇ ಇರಲಿಲ್ಲ.

ಮೊಟ್ಟಮೊದಲು ಯಾರು ಹೇಳಿದರು? ನನ್ನ ಮಗಳು ಹೇಳಿದಳು. ಹೌದು, ಅವಳು ಶಾಲೆಯಿಂದ ಎರಡು ಗಂಟೆಗೆ ಬರುತ್ತಾಳೆ. ಅವಳು ನನಗಿಂತ ಮೊದಲೇ ಬಂದಿದ್ದಳು. ಎಂದಿನಂತೆ ಹೊರಗೆ ನಿಂತಿದ್ದಳು. ನನ್ನನ್ನು ನೋಡುತ್ತಲೇ ಓಡಿ ಬಂದು ನನ್ನ ಕಾಲುಗಳಿಗೆ ಅಪ್ಪಿಕೊಂಡಿದ್ದಳು. ನಾನು ಅವಳನ್ನು ಮುದ್ದಾಡಿದ್ದೆ. ಆದರೆ ಅವಳು ಏನೋ ಹೇಳಲು ಕಾತುರಳಾಗಿದ್ದಳು. ಅವಳು ಒಮ್ಮೆಲೆ ಉಲಿಯುತ್ತಾ ಹೇಳಿದ್ದಳು, ಮಮ್ಮಿ, "ಮಮ್ಮಿ, ಡ್ಯಾಡಿಯ ಆರೋಗ್ಯ ಸರಿಯಾಯ್ತು! ಅವರು ಆರಾಮಾಗಿ ಮಲಗಿದ್ದಾರೆ...."

ಹೌದು, ಮಗಳೇ ಮೊಟ್ಟ ಮೊದಲು ಹೇಳಿದ್ದಳು. ನಾನು ರೂಮಿಗೆ ಹೋದಾಗ ಎಲ್ಲವೂ ತಿಳಿಯಿತು. ನಾನು ಗೋಡೆಗೆ ತಲೆಯನ್ನು ಚಚ್ಚಿಕೊಳ್ಳದ ಹೊರತು ಇನ್ನೇನು ತಾನೇ ಮಾಡಲು ಸಾಧ್ಯವಿತ್ತು? ಅವರು ನಿಶ್ಚಲರಾಗಿ ಮಲಗಿದ್ದರು. ಉಗುರು ಮತ್ತು ತುಟಿಗಳು ನೀಲಿಯಾಗಿದ್ದವು. ದೇಹ ಕಾಯಿಲೆಯ ರೋಗಿಯಂತೆ ಹಳದಿಯಾಗಿತ್ತು. ಹೌದು, ಕಣ್ಣುಗಳು ಮುಚ್ಚಿಕೊಂಡಿದ್ದವು. ಅವು ತುಂಬಾ ಸೊರಗಿದ್ದವು. ಕಣ್ಣುಗಳಲ್ಲಿ ರಕ್ತದ ಮಾತಿರಲಿ, ತೇವವೂ ಇರಲಿಲ್ಲ. ಮರಳಿನ ಮೇಲೆ ಬಿದ್ದ ಕಪ್ಪೆಚಿಪ್ಪಿನಂತೆ....

ನಂತರ ಸಂಭವಿಸಿದ್ದು ನಿಮ್ಮೆದುರಿಗಿದೆ. ಆತ್ಮಹತ್ಯೆಗೂ ಮೊದಲಿನ ಸಂಗತಿಗಳನ್ನು ನಾನು ನಿಮ್ಮೆದುರಿಗಿಟ್ಟಿರುವೆ. ಏನಾದರೂ ತೀರ್ಮಾನವಾಗುವುದಂತೂ ನಿಶ್ಚಿತ. ಅದು ವ್ಯಕ್ತಿಯ ವಿರುದ್ಧವೇ ಆಗಬಹುದು. ನೋಡಿ, ವ್ಯಕ್ತಿಯೆಂದರೆ ಒಂಟಿ ಮನುಷ್ಯ, ಉದಾಹರಣೆಗೆ ಒಂಟಿ ನಾನು .... ಅಥವಾ ನೀವು......

***

## ಹಸಿವು

**ಓರಿಯಾ ಮೂಲ : ಜಯಂತ ಮಹಾಪಾತ್ರ** **ಅನು : ಕಮಲಾಕರ ಕಡವೆ**

ದೇಹದಾಹದ ಸೆಳವು ನನ್ನಲ್ಲಿ ಇಷ್ಟೆಂದು ನಂಬಲಾರೆ:
ಅಸಡ್ಡೆಯಿಂದ ದೋಸ್ತ ಕೇಳಿದ, ಬೇಕಾ ನಿನಗವಳು?
ಅವನ ಹಿಂದೆ ನರಜಾಲದಂತೆ ಬಲೆ: ಶಬ್ದಗಳೇ
ತನ್ನ ಉಳಿವಿನ ಇರಾದೆ ಪೂಜ್ಯಗೊಳಿಸಿತೆಂಬಂತಿದ್ದನಾತ.
ಕಣ್ಣೊಳಗೆ ಬಿಳಿಯೆಲುಬು ತೊನೆಯುವುದ ಕಂಡೆ.

ಪಿಕಾಲಿ ಮರಳದಿನ್ನೆಗುಂಟ ಅವನ ಹಿಂದೆ ನಡೆದೆ
ಮನಸು ಮಾಂಸದ ಕವಣೆಯೊಳಗೆ ಗುದ್ದಾಡುತ್ತಲಿತ್ತು.
ನನ್ನೀ ಮನೆಯ ಸುಡುವುದೊಂದೇ ಉಳಿದ ಉಪಾಯ.

ನನ್ನ ತೋಳುಗಳ ಗುಂಟ ಮೌನ: ಅವನ ದೇಹ ಸಮುದ್ರದಿಂದ
ಬಲೆಯೊಳಗೆ ಹಿಡಿದು ತಂದ ನೊರೆಗಳನ್ನು ಪರಚುತ್ತಿತ್ತು.
ಮಿಣುಕು ಬೆಳಕಲ್ಲಿ ಗಾಯದಂತೆ ಅವನ ಬಿಹಾರ ತೆರೆದುಕೊಂಡಿತು.
ನಾನೇ ಗಾಳಿ ಒಳಗೆ, ಹಾಗೂ ಮುಂಚಿನ ದಿನ ರಾತ್ರಿಗಳು.
ಸೋಗೆ ತೊಗಲ ಸೋಕಿದವು. ಬಿಹಾರದೊಳಗೆ
ಎಣ್ಣೆಬತ್ತಿಯೊಂದು ಗೋಡೆಯ ಮೇಲೆ ಕ್ಷಣಗಳ ಕಿಸಿದಿತ್ತು.
ಮತ್ತೆ ಮತ್ತೆ ಚಿಗುಟು ಮಸಿ ಮನಸಿನವಕಾಶವ ತುಂಬಿತ್ತು.
ಅವನನ್ನುತ್ತಿದ್ದ: ಬೇಗ ಬರ್ತೀನೆ. ನಿನ್ನ ಬಸ್ಸು ಒಂಬತ್ತಕ್ಕೆ.
ಬಾನು ಬಿತ್ತು ನನ್ನ ಮೇಲೆ ಹಾಗೂ ಅಪ್ಪನೊಬ್ಬನ ದಣಿದ ಕಪಟತನ.
ಉದ್ದಕ್ಕೆ ಸಪೂರವಿದ್ದ ಅವಳ ವಯಸ್ಸು ರಬ್ಬರಿನಂತೆ ತಣ್ಣಗಿತ್ತು.
ಹುಳುವಿನಂತೆ ಕಾಲಿಗಲಿಸಿದಳು. ಅಲ್ಲಿನ ಹಸಿವು ಅರಿತೆ.
ಆ ಇನ್ನೊಂದು ಹಸಿವು. ಮೀನಂತೆ ತಿಣುಕಿ ಒಳತಿರುಗಿತು.

* * *

## ಕೈಗಳು

**ಒರಿಯಾ ಮೂಲ : ಜಯಂತ ಮಹಾಪಾತ್ರ** **ಅನು : ಕಮಲಾಕರ ಕಡವೆ**

ಅವುಗಳ ನಡುವೆ
ಇಡೀ ಜಾಗವನ್ನಾವರಿಸುವ ಮೌನ.
ಮೆಲ್ಲಗೆ ನನ್ನ ದೇಹ ನಡೆದಿದೆ
ನೀರಿನಾಳದೊಳಗೆ.

ಹುಡುಗನಾಗಿ ಹಿಂಬಾಗಿಲಿಂದ
ಒಳ ಬರುವುದ ಕಲಿತೆ. ನೊಂದ
ಒಂದಕ್ಕೊಂದು ಆತುಕೊಂಡ
ನಿರ್ಮಲ ಮನೆಗಳು ಈಗ ನಿದ್ದೆಯಲ್ಲಿ.

ಚಿಕ್ಕ ಚೀತ್ಕಾರಗಳಲ್ಲಿ ಉಸಿರುಗಟ್ಟಿದ
ನನ್ನ ಹಳೆಯ ಹತ್ತಿಯಾನೆ.

ಮಂಕಾದ ಹೊರರೂಪದಿಂದ
ಹುಲ್ಲಿಂತೆ ತೊನೆಯುತ್ತ–
ಕೊನೆಯ ದೋಣಿ ಕೆರೆಯನ್ನು ದಾಟಿದಂತೆ.

* * *

## ಪುರಿಯ ಬೆಳಗು

ಓರಿಯಾ ಮೂಲ : ಜಯಂತ ಮಹಾಪಾತ್ರ ಅನು : ಕಮಲಾಕರ ಕಡವೆ

ಕೊನೆಯಿರದ ಕಾಗೆಗಲಭೆ
ಪವಿತ್ರ ಮರಳಲ್ಲಿ ತಲೆಬುರುಡೆಯೊಂದು
ಹಸಿವಿನೆಡೆಗೆ ವಾಲಿಸುತ್ತದೆ ಖಾಲಿ ದೇಶವನ್ನು.

ಬಿಳಿತಳೆದ ವಿಧವೆಯರು
ತಮ್ಮ ಬಾಳಿನ ಮಧ್ಯದಾಚೆ
ಮಹಾಮಂದಿರದೊಳಗೆ ಹೋಗಲು ಕಾದಿದ್ದಾರೆ.

ಅವರ ವಿರಕ್ತ ಕಣ್ಣುಗಳು
ಬಲೆಯಲ್ಲಿ ಸಿಕ್ಕಿಬಿದ್ದವರಂತೆ ದಿಟ್ಟಿಸುತ್ತವೆ,
ಬೆಳಬೆಳಗ್ಗೆ ಶ್ರದ್ಧೆಯ ಬೆಳಗಿನೆಳೆಗೆ ಜೋತುಬಿದ್ದು.

ನಿತ್ರಾಣ ಮುಂಜಾನೆ ಬೆಳಕಿಗೆ ಬಿದ್ದಿವೆ
ಒಂದನ್ನೊಂದು ಆತಿರುವ ಪಾಳು ತೊನ್ನುಭರಿತ ಚಿಪ್ಪುಗಳು.
ಹೆಸರಿರದೆ ಕುಗ್ಗಿಹೋದ ಮುಖಗಳ ಮಂದೆ.

ತಟ್ಟನೆ ನನ್ನ ತೊಗಲೊಳಗಿಂದ ಹೊರಬೀಳುವ ಚಿಕ್ಕು
ಸೇರುತ್ತದೆ ಏಕಾಕಿ ಮಂಕು. ಚಿತೆಯೊಂದರ ಹೊಗೆಯ
ನನ್ನ ಮುದಿ ಅಮ್ಮನ ಕವಿಯುವ ಧಗೆಯ:

ತನ್ನನಿಲ್ಲಿ ಸುಡಬೇಕೆಂಬ ಅವಳ ಕೊನೆಯಾಸೆ
ನೆಲೆಬದಲುವ ಮರಳದಿಣ್ಣೆಯ ಮೇಲೆ
ಬೆಳಕಂತೆ ಸಂದಿಗ್ಧವಾಗಿ ತಿರುಚಿ.

* * *

## ಮತ್ತೆ, ಒಂದು ದಿನ, ನಡೆಯುತ್ತ ನದಿಯ ಪಕ್ಕ

ಓರಿಯಾ ಮೂಲ : ಜಯಂತ ಮಹಾಪಾತ್ರ          ಕನ್ನಡಕ್ಕೆ: ಕಮಲಾಕರ ಕಡವೆ

ಅದೇ ನದಿ. ಅದೇ ರವಿ. ಅದೇ ಪೇಟೆ.
ನನ್ನ ಕಣ್ಣಂಚಿನಾಚೆ
ಹಳದಿಹುಲ್ಲು ಹೊತ್ತ ದೋಣಿ
ಸಿಕ್ಕಿಬಿದ್ದಿದೆ ಎಲೆಯಂತೆ ಒಂದು ಕೆರೆಯ ನಡುವೆ.

ನ್ಯಾಯಾಧೀಶರ ಮನೆಯೆದುರು ಕುದಿವ ಡಾಂಬರು ಡ್ರಮ್ಮು
ನಾಲ್ಕು ಹೆಣ್ಣಾಳುಗಳು ಕುಳಿಬಿದ್ದ ರಸ್ತೆಗೆ
ಬಿಸಿ ಟಾರು ಬಳಿದಂತೆ.
ಮಧ್ಯಾಹ್ನ ಎರಡು ಗಂಟೆ, ಹಾಗೂ
ನಿನ್ನೆಯ ಬಿಸಿಲು ಝಳ ಹಳೆಯ ಗೋಡೆಗಿನ್ನೂ ಅಂಟಿವೆ
ಉರಿಉಪ್ಪು ಮೈಗಂಟಿಂದಂತೆ.
ತಿಳಿಗಾಳಿ, ಎಷ್ಟು ಹಗುರವೆಂದರೆ
ಎಲ್ಲಿಂದ ಬಂತೆಂದೂ ಹೇಳಲಾರೆ.
ದಿನ ಮುಗಿದಿಲ್ಲವಿನ್ನೂ. ಸದ್ಯದಲ್ಲೇ
ವಿಕಾರ ತೊನ್ನಿಗರು ನಡೆಯಲಿದ್ದಾರೆ, ಮನೆ ಕಡೆ.
ಅವರ ಅಸಹಾಯಕ ನೋಟ
ಪೇಟೆ ಚೌಕದಲ್ಲಿ ಕನಸುಗಳ ನೇಯುತ್ತವೆ.
ನಾನಂತೂ ಕೇಳಿಲ್ಲ ಯಾವೊಬ್ಬನೂ ಅನ್ನುವುದ
ನಾನಳಿದ ಮೇಲೆ ಶೋಕಿಸುವುನೆಂಬುದಾಗಿ.

ಟಾರುಹೊಗೆ ನೋಟಕ್ಕೆ ದಕ್ಕದೇ ಹಬ್ಬುತ್ತದೆ ನೀರ ಮೇಲೆ
ದಿನ ಹೋಗುತ್ತದಾದರೂ ಎಲ್ಲಿ?
ಇಷ್ಟು ಪ್ರಖರ ಸೂರ್ಯಬೆಳಕಲ್ಲೂ
ಈ ವಾಸ್ತವ ನನ್ನ ಅರಿವಿನಲ್ಲಿರಲಿಲ್ಲ.

* * *

# ಸೃಷ್ಟಿ

ಮೂಲ ತೆಲುಗು: ಡಾ. ಎನ್ ಗೋಪಿ　　　　ಅನು : ಕೃಷ್ಣಮೂರ್ತಿ ಕಲುಮಂಗಿ

ಚಕ್ಕೆಯಲ್ಲಿ ಬಂಧಿಯಾಗಿರುವ
ಪೆನ್ಸಿಲ್ ಅನ್ನು ಬಿಡಿಸಬೇಕು.
ಥಳಥಳಿಸುವ ಸಾವಿರಾರು ಕಪ್ಪು
ಅಕ್ಷರಗಳು ಹುದುಗಿರುವ ಕಡ್ಡಿಯನ್ನು
ಮೊನಚುಗೊಳಿಸಬೇಕು.
ಪೆನ್ಸಿಲ್ಅನ್ನು ಹೊರತರಬೇಕಾದರೆ
ಚಕ್ಕೆಯನ್ನು ಗಾಯಗೊಳಿಸಲೇಬೇಕು.
ಸಿಪ್ಪೆ ಸಿಪ್ಪೆಗಳಾಗಿ ಹೆರೆದು
ಬಾಧೆ ಪಡಿಸಲೇ ಬೇಕು.
ಅಥವಾ ಮೆಂಡರ್ ಎಂಬ ಸುರಂಗದೊಳಗೆ
ಚಿತ್ರ ಹಿಂಸೆಗಳಿಗೀಡು ಮಾಡಬೇಕು.
ಮರೆತು ಹೋದೆಯಾ!?
ಇಷ್ಟು ದಿನಗಳೂ ಪೆನ್ಸಿಲ್ಅನ್ನು
ಗರ್ಭದಲ್ಲಡಗಿಸಿಕೊಂಡು ಕಾಪಾಡಿದ್ದು ಚಕ್ಕೆಯೇ ಎಂಬುದ!
ಬೇರೆ ದಾರಿಯಿಲ್ಲ
ನನಗೆ ಬರೆಯಲು ಪೆನ್ಸಿಲ್ ಬೇಕು
ಅದರ ಹೃದಯದೊಳಗಿಂದ ಹೂಗಳ ಉದುರಿಸಬೇಕು.
ಚಕ್ಕೆಯೊಂದನ್ನೇ ಹಿಂಸಿಸುತ್ತಿರುವೆನೆಂದು ಭಾವಿಸದಿರು
ಪೆನ್ಸಿಲೂ ಸವೆದು ಹೋಗುತ್ತದೆ
ಚಕ್ಕೆಯೂ ನವೆದು ಹೋಗುತ್ತದೆ.
ಎರಡೂ ನಾಮರೂಪಗಳಿಲ್ಲದವುಗಳಾಗಿ
ಹೊಸ ಸೃಷ್ಟಿಗೆ ನಾಂದಿಯ ಹಾಡುತ್ತವೆ
ರಕ್ತಸಿಕ್ತವಾದ ಸೃಜನ
ಸೂರ್ಯನಿಗೆ ಕೆಂಪನ್ನು ಪ್ರಸಾದಿಸುತ್ತದೆ.

* * *

## ಹಾಸ್ಯಾಸ್ಪದ

**ತೆಲುಗು ಮೂಲ : ಜೋಡಿಶೆಟ್ಟಿ ಶ್ರೀನಿವಾಸರಾವ್. ಅನು : ಕೃಷ್ಣಮೂರ್ತಿ ಕಲುಮಂಗಿ**

ಆರ್. ಟಿ. ಸಿ. ಬಸ್‌ಸ್ಟಾಂಡ್ ಬಳಿ ರಿಕ್ಷಾದಿಂದ ಇಳಿದು ಶೀಘ್ರಗತಿಯಲ್ಲಿ ಬಸ್‌ಸ್ಟಾಂಡಿನೊಳಗೆ ಹೆಜ್ಜೆ ಹಾಕಿದೆ. ಬೇರೆ ಬೇರೆ ಊರುಗಳಿಗೆ ಹೋಗಲಿರುವ ಜನರಿಂದ ಬಸ್‌ಸ್ಟಾಂಡಿನಲ್ಲಿ ಕೋಲಹಲವಿತ್ತು. ಗುಂಪು ಗುಂಪುಗಳಾಗಿ ಇದ್ದ ಜನರ ಮಧ್ಯದಿಂದ ನುಸುಳಿಕೊಳ್ಳುತ್ತಾ ಆರನೇ ನಂಬರ್ ಪ್ಲಾಟ್‌ಫಾರ್ಮ್‌ನ ಬಳಿ ಬಂದೆ ಅಲ್ಲಿ ನಾನು ಹತ್ತಬೇಕಾಗಿದ್ದ ಬಸ್ಸು ಇರಲಿಲ್ಲ. ವಿಚಾರಣೆಯ ಕಿಟಕಿಯ ಬಳಿಗೆ ಹೋಗಿ ಕೇಳಿದೆ. ಆ ಬಸ್ಸು ಹತ್ತೂವರೆಗೆ ಬರುವುದೆಂದು ಹೇಳಿದ ಆರ್. ಟಿ. ಸಿ. ಉದ್ಯೋಗಿ. ಇನ್ನೂ ಅರ್ಧ ಗಂಟೆಯ ಅವಧಿ ಇತ್ತು. ನನ್ನ ಆತುರಕ್ಕೆ ನಾನೇ ನಗಾಡುತ್ತಾ ಅಲ್ಲೆ ಪಕ್ಕದಲ್ಲಿದ್ದ ಬುಕ್‌ಸ್ಟಾಲಿನ ಕಡೆಗೆ ನಡೆದೆ.

ವರ್ಣರಂಜಿತ ಮುಖ ಚಿತ್ರಗಳುಳ್ಳ ಅನೇಕ ವಾರ, ಮಾಸ ಹಾಗೂ ಪಕ್ಷ ಪತ್ರಿಕೆಗಳಿಂದ, ದಿನಪತ್ರಿಕೆಗಳಿಂದ ಹಾಗೂ ಇನ್ನೂ ವಿವಿಧ ಪುಸ್ತಕಗಳಿಂದ ಬುಕ್‌ಸ್ಟಾಲ್ ಕಂಗೊಳಿಸುತ್ತಿತ್ತು. ಒಂದೆರಡು ನಿಮಿಷಗಳು ಪುಸ್ತಕಗಳೆಲ್ಲವನ್ನೂ ಪರೀಕ್ಷೆಯಾಗಿ ನೋಡಿ ಒಂದು ಭಾಗದಲ್ಲಿದ್ದ 'ಶ್ರೀ ಶ್ರೀ' ಅವರ 'ಮಹಾಪ್ರಸ್ಥಾನಂ' ಕೃತಿಯನ್ನು ಕೊಂಡು ಪುಟಗಳನ್ನು ತಿರುವಿ ಹಾಕುತ್ತಿದ್ದಾಗ "ನಮಸ್ಕಾರ ಮೇಷ್ಟ್ರೇ!" ಎಂಬ ಧ್ವನಿ ಕೇಳಿ ಬಂತು.

ಯಾರಿರಬಹುದೆಂದು ತಲೆ ಎತ್ತಿ ನೋಡಿದಾಗ ಚಂದ್ರು ಕಂಡು ಬಂದ. ಅವನು ನನ್ನ ಅನೇಕ ಶಿಷ್ಯರಲ್ಲಿ ಒಬ್ಬ. ಎಂಟು ವರ್ಷಗಳು ತುಂಬಿದ್ದರೂ ಚಂದ್ರುಗೆ 'ಅ, ಆ' ಗಳು ಬರೆಯಲು ಬರುತ್ತಿರಲಿಲ್ಲ. ಎಲ್ಲರೂ ಮೊದ್ದು ಹುಡುಗನೆನ್ನುತ್ತಿದ್ದರು. ಅಂತಹ ಚಂದ್ರುಗೆ ಪಟ್ಟು ಹಿಡಿದು ಅಕ್ಷರಗಳನ್ನು ಕಲಿಸಿ, ಓದಿನ ಬಗ್ಗೆ ಆಸಕ್ತಿಯನ್ನುಂಟುಮಾಡಿದ್ದೆ ನಾನು. ಆಗ ತುಂಬಾ ತೆಳ್ಳಗೆ, ಅಮಾಯಕನಂತೆ ಇರುತ್ತಿದ್ದ ಚಂದ್ರು ಈಗ ತುಂಬಾ ಬದಲಾಗಿದ್ದಾನೆ.

"ಮೇಷ್ಟ್ರೇ, ನನ್ನ ನೆನಪಿದೆಯೇ!" ಎಂದು ಕೇಳಿದ ಚಂದ್ರು. "ನೆನಪಿದೆ ಚಂದ್ರು! ಸೌಖ್ಯ ತಾನೇ?" ಎಂದೆ ಕಿರು ಮುಗುಳುನಗೆಯೊಂದಿಗೆ.

"ನೀವು ಕ್ಷೇಮ ತಾನೇ? ಈ ಊರಲ್ಲಿ ಯಾವುದಾದರೂ ಕೆಲಸವಿತ್ತೇ ಮೇಷ್ಟ್ರೇ?" ಕೇಳಿದ ಚಂದ್ರು ವಿನಯದಿಂದ.

"ನಮ್ಮ ಮೂರನೇ ಮಗಳು ಸುನಂದಾಳನ್ನು ಈ ಊರಿಗೇ ಕೊಟ್ಟಿರೋದು ಚಂದ್ರು... ಅಳಿಯನು ಆನಂದ್ ಚಿತ್ರಮಂದಿರದಲ್ಲಿ ಕ್ಲರ್ಕ್ ಆಗಿ ಕೆಲಸ ಮಾಡುತ್ತಿದ್ದಾನೆ. ಒಮ್ಮೆ ಅವರಿಬ್ಬರನ್ನೂ ನೋಡಿಕೊಂಡು ಹೋಗೋಣವೆಂದು ಬಂದಿದ್ದೆ" ಎಂದೆ.

"ಹಾಗೇನು ಮೇಷ್ಟ್ರೇ! ನೀವು ಹೇಳುವವರೆಗೂ ನನಗೆ ಈ ವಿಷಯ ತಿಳಿದಿರಲಿಲ್ಲ" ಎಂದ ಚಂದ್ರು ಆಶ್ಚರ್ಯದಿಂದ.

"ಹೇಗೆ ತಿಳಿಯುತ್ತೆ ಚಂದ್ರು? ಅವಕಾಶ ಎಲ್ಲಿತ್ತು? ಹಲವಾರು ವರ್ಷಗಳ ನಂತರ ನಾವಿಬ್ಬರೂ ಭೆಟ್ಟಿಯಾದುದು ಈಗ ತಾನೇ!" ಎಂದೆ ನಗುತ್ತಾ.

"ಕ್ಷಮಿಸಿ ಮೇಷ್ಟ್ರೇ... ಪಟ್ಟು ಹಿಡಿದು ನಾಲ್ಕು ಅಕ್ಷರಗಳನ್ನು ಕಲಿಸಿದ ನಿಮ್ಮನ್ನು ಕಾಣಬೇಕೆಂದು ಯಾವಾಗಲೂ ಅಂದುಕೊಳ್ಳುತ್ತಾ ಇರ್ತೇನೆ. ಆದರೆ ವ್ಯಾಪಾರದ ಜಂಜಾಟದಲ್ಲಿ ಬಿದ್ದು ಎಲ್ಲಿಯೂ ಬಿಡುವೆಂಬುದೇ ಸಿಗುತ್ತಿಲ್ಲ!" ಎಂದ ಚಂದ್ರು ನೊಂದುಕೊಳ್ಳುತ್ತಾ.

"ಅದಕ್ಕೇನಂತೆ ಚಂದ್ರೂ!... ನಾವು ಎಲ್ಲೇ ಇರಲಿ. ಮನಸ್ಸಿನಲ್ಲಿ ಅಭಿಮಾನವೆಂಬುದು ಇರುವುದೇ ಮುಖ್ಯವಾಗುತ್ತದೆ! ಅದಿರ್ಲಿ. ನೀನು ಮಾಡುತ್ತಿರುವ ವ್ಯಾಪಾರವು ಯಾವುದು?" ಆಸಕ್ತಿಯಿಂದ ಕೇಳಿದೆ.

"ಒಂದಿಲ್ಲ ಮೇಷ್ಟ್ರೇ! ಧಾನ್ಯ. ತೆಂಗಿನ ಕಾಯಿಗಳು. ಬೆಲ್ಲ. ಒಣಮೆಣಸಿನಕಾಯಿ ಮುಂತಾದವುಗಳನ್ನು ಆಯಾ ಸೀಜನ್‌ಗಳಲ್ಲಿ ಕೊಂಡಿಟ್ಟು. ಅವುಗಳಿಗೆ ಒಳ್ಳೆಯ ಬೆಲೆ ಬಂದ ಕೂಡಲೇ ಮಾರುತ್ತೇನೆ!" ಹೇಳಿದ ಚಂದ್ರು.

"ಚೆನ್ನಾಗಿದೆ ಚಂದ್ರು! ಬೆಲೆಗಳು ಏರುತ್ತಲೇ ಇರುತ್ತವೆ ಹೊರತು ಇಳಿಯುವ ಪ್ರಸಕ್ತಿಯೇ ಇಲ್ಲವಲ್ಲಾ! ಹಾಗಾಗಿ ನಿನಗೆ ವ್ಯಾಪಾರದಲ್ಲಿ ತುಂಬಾ ಲಾಭಗಳು ಬಂದಿರಬೇಕು ಅಂದುಕೊಳ್ತೇನೆ. ಇಷ್ಟಕ್ಕೂ ಏನಾದರೂ ಸಂಪಾದಿಸಿಟ್ಟಿರುವೆಯಾ. ಇಲ್ಲವಾ?" ಎಂದೆ.

ತನ್ನ ಸಂಪಾದನೆಯನ್ನು ಕುರಿತು ವಿವರವಾಗಿ ನನಗೆ ತಿಳಿಸಿದ ಚಂದ್ರು.

"ಮತ್ತೆ ಮಕ್ಕಳೆಷ್ಟು ನಿನಗೆ?"

"ಇಬ್ಬರು ಮೇಷ್ಟ್ರೇ! ಒಬ್ಬನು ಏಳನೇ ತರಗತಿ. ಮತ್ತೊಬ್ಬನು ಒಂಬತ್ತನೇ ತರಗತಿಯಲ್ಲಿರುವರು"

"ಅಂದರೇ ನಿನ್ನದು ಪರಿಮಿತ ಸಂತಾನವೆಂದ ಹಾಗಾಯಿತು. ಭೇಷ್, ಒಳ್ಳೆಯ ಕೆಲಸ ಮಾಡಿದಿ ಚಂದ್ರು! ಅವರ ಅಭ್ಯಾಸ ಹೇಗೆ ನಡೆದಿದೆ?" ಕೇಳಿದೆ.

"ನನ್ನಂತೆ ಮಾತ್ರ ಅಲ್ಲ ಮೇಷ್ಟ್ರೇ! ಇಬ್ಬರೂ ಚೆನ್ನಾಗಿಯೇ ಓದುತ್ತಿರುವರು..." ಸ್ವಲ್ಪ ನಾಚಿಕೆ ಪಡುತ್ತಾ ಹೇಳಿ ನೀವಿನ್ನೂ ಸರ್ವೀಸ್‌ನಲ್ಲಿ ಇರುವಿರಾ ಮೇಷ್ಟ್ರೇ?" ಎಂದು ಪ್ರಶ್ನಿಸಿದ ಚಂದ್ರು.

"ಇಲ್ಲ. ಚಂದ್ರು! ಈಗ ಆರು ತಿಂಗಳಾಯ್ತು ರಿಟೈರ್ ಆಗಿ. ಸದ್ಯಕ್ಕೆ ಕೆಲವು ಮಕ್ಕಳಿಗೆ ಟ್ಯೂಷನ್ ಹೇಳುತ್ತಾ ಕಾಲಕ್ಷೇಪ ಮಾಡುತ್ತಿರುವೆ. ಹೇಗೋ ಮಾಡಿ

ಮೂವರು ಹೆಣ್ಣು ಮಕ್ಕಳ ಮದುವೆ ಮುಗಿಸಿದೆ ಅಂತ ಅಂದ್ಕೋ! ಇನ್ನು ಅಂತಹ ತಲೆತಿನ್ನುವ ಸಮಸ್ಯೆಗಳಾವೂ ಇಲ್ಲದಂತೆಯೇ" ಹೇಳಿದೆ ನಿಟ್ಟುಸಿರು ಬಿಡುತ್ತಾ.

ಚಂದ್ರು ಮತ್ತೇನನ್ನೋ ಹೇಳುವಷ್ಟರಲ್ಲಿ, ಕಿವಿಗಳ ತಮಟೆಗಳು ಹರಿದು ಹೋಗುವ ಹಾಗೆ ದೊಡ್ಡದಾಗಿ ಹಾರನ್ ಮಾಡುತ್ತಾ ಆರನೇ ನಂಬರ್ ಪ್ಲಾಟ್‌ಫಾರಮ್ಮಿನ ಮೇಲೆ ಬಸ್ಸೊಂದು ಬಂದು ನಿಂತಿತು. 'ನಾ' ಮುಂದೆ 'ತಾ' ಮುಂದೆ ಎನ್ನುತ್ತಾ ಬಸ್ಸನ್ನು ಹತ್ತಲು ಕೆಲವು ಜನರು ಬಸ್ಸಿನ ಮೇಲೆ ಮುಗಿಬಿದ್ದರು. ನಾನು ಬಸ್ಸಿನ ಕಡೆಗೆ ಹೊರಡಲುದ್ಯುಕ್ತನಾದೆ. "ಮೇಷ್ಟ್ರೇ... ಅದು ನೀವು ಹತ್ತಬೇಕಾಗಿರುವ ಬಸ್ಸು ಅಲ್ಲ! ಬನ್ನಿ. ಕಾಫಿ ಕುಡಿಯೋಣ! ನಾನೂ ನಿಮ್ಮೊಡನೆ ಅನಕಾಪಲ್ಲಿಯವರೆಗೂ ಬರ್ತೇನೆ!" ಎಂದ ಚಂದ್ರು ನನ್ನನ್ನು ತಡೆಯುತ್ತಾ.

ಚಂದ್ರು ತುಂಬಾ ಬಲವಂತ ಮಾಡಿದ್ದರಿಂದ ಕ್ಯಾಂಟೀನ್‌ನ ಕಡೆಗೆ ಹೆಜ್ಜೆ ಹಾಕಲೇ ಬೇಕಾಯಿತು. ಕಾಫಿ, ಟೀಗಳನ್ನು ಕುಡಿಯುತ್ತಿರುವ ಜನರಿಂದ, ಅವರ ಜೋರಾದ ಮಾತುಗಳಿಂದ ಕ್ಯಾಂಟೀನಿನಲ್ಲಿ ಗಲಿಬಿಲಿ ವಾತಾವರಣವಿತ್ತು. ಆ ಗೊಂದಲದಲ್ಲಿಯೂ ನನ್ನ ಕಿವಿಗಳು ಕ್ಯಾಷ್ ಕೌಂಟರ್‌ನ ಬಳಿಯಿದ್ದ ರೇಡಿಯೋದಿಂದ ಆಗ ತಾನೇ ಪ್ರಾರಂಭವಾದ ಪಾಡವೋಯಿ ಭಾರತೀಯುಡಾ... ಆಡಿ ಪಾಡವೋಯಿ..." ಎಂಬ ಹಾಡಿನತ್ತ ವಾಲಿದವು. ಆ ಹಾಡನ್ನು ಕೇಳುತ್ತಲೇ ನನ್ನಲ್ಲಿ ಯಾವುದೋ ತಿಳಿಯದ ಉತ್ಸಾಹವು ಮನೆ ಮಾಡಿತು. ಸರಿಯಾಗಿ ಕೇಳಿಸಿಕೊಳ್ಳಲು ರೇಡಿಯೋದ ಪತ್ತಿರದಲ್ಲಿದ್ದ ಖಾಲೀ ಟೇಬಲ್‌ನ ಮುಂದೆ ಹೋಗಿ ಕುಳಿತೆ. ಆ ಹಾಡನ್ನು ಕೇಳುವುದರಲ್ಲಿ ಲೀನವಾದೆ.

ಕೆಲ ನಿಮಿಷಗಳ ನಂತರ ಎರಡು ಕಾಫಿ ಕಪ್ಪುಗಳನ್ನು ಹಿಡಿದು ತಂದು "ತೆಗೆದುಕೊಳ್ಳಿ ಮೇಷ್ಟ್ರೇ" ಎನ್ನುತ್ತಾ ಒಂದನ್ನು ನನ್ನ ಮುಂದಿಟ್ಟ ಚಂದ್ರು.

ಯಾಂತ್ರಿಕವಾಗಿ ಕಪ್ಪು ಹಿಡಿದು ಕಾಫಿ ಸೇವಿಸುತ್ತಿದ್ದನಾಗಲೀ ನನ್ನ ಗಮನವೆಲ್ಲವೂ ಕೇಳುತ್ತಿದ್ದ ಹಾಡಿನ ಮೇಲಿದ್ದವು. ನನ್ನನ್ನೇ ಗಮನಿಸುತ್ತಿದ್ದ ಚಂದ್ರು "ಮೇಷ್ಟ್ರೇ, ಈ ಹಾಡೆಂದರೆ ನಿಮಗೆ ತುಂಬಾ ಇಷ್ಟ ಅಲ್ವೇ!" ಎಂದು ಕೇಳಿದ ಕಿರುನಗೆಯೊಂದಿಗೆ.

"ಹೌದು ಚಂದ್ರು!... ಇಂದಿನ ಅಸ್ತವ್ಯಸ್ತ ಪರಿಸ್ಥಿತಿಗಳನ್ನು ಎಂದೋ ಊಹಿಸಿ ಕಣ್ಣಿಗೆ ಕಟ್ಟಿದಂತೆ ಈ ಹಾಡಿನಲ್ಲಿ ಅಳವಡಿಸಿದ್ದಾರೆ ಶ್ರೀ ಶ್ರೀ ಅವರು. ಏಕೋ ಗೊತ್ತಿಲ್ಲ, ಈ ಹಾಡನ್ನು ಕೇಳಿದಾಗಲೆಲ್ಲ ಅದು ಬಾಧೆಯೋ, ಆನಂದವೋ ತಿಳಿಯದ ಒಂದು ವಿಚಿತ್ರಾವಸ್ಥೆಯಲ್ಲಿ ನನ್ನ ಹೃದಯವು ಓಲಾಡುತ್ತಿರುತ್ತದೆ!" ಎಂದೆ. ನನ್ನ ಕಂಠವು ಗದ್ಗದವಾಗಿತ್ತು.

ಚಂದ್ರು ಮೆಲ್ಲಗೆ ನಿಟ್ಟುಸಿರು ಬಿಡುತ್ತಾ ತಾನು ಸಹ ಹಾಡನ್ನು ಕೇಳುತ್ತಾ ಕಾಫಿ ಕುಡಿಯತೊಡಗಿದ.

ನಾವು ಕಾಫಿ ಮುಗಿಸುವಷ್ಟರರಲ್ಲಿ ಹಾಡು ಪೂರ್ತಿಯಾಗತೊಡಗಿತು.

ಹಾಡಿನ ಕೊನೆಯ ಚರಣಗಳನ್ನು ಕೇಳಿದ ಚಂದ್ರು ಇದ್ದಕ್ಕಿದ್ದಂತೆ "ನನ್ನದೊಂದು

ಸಂದೇಹ ಮೇಷ್ಟ್ರೇ" ಎಂದ.

"ಹೇಳು ಚಂದ್ರು. ಏನು ನಿನ್ನ ಸಂದೇಹ?"

"ಅದೇ ಮೇಷ್ಟ್ರೇ, ಆ ಮಹಾಕವಿಯು ಹಾಡಿನಲ್ಲಿ ಪ್ರಬೋಧಿಸಿದ ಸಮಸಮಾಜವು ಬರಬಹುದು ಎನ್ನುವಿರಾ ನಮ್ಮ ದೇಶದಲ್ಲಿ?" ಎಂದು ಕೇಳಿದ ಚಂದ್ರು

ಆತನ ಮಾತುಗಳನ್ನು ಕೇಳಿದ ಕೂಡಲೇ ಆಶ್ಚರ್ಯದೊಂದಿಗೆ ತಡೆಯಲಾಗದ ನಗು ಬಂದಿತು ನನಗೆ. ನಗುತ್ತಲೇ "ನಿನಗೆ ಅಂತಹ ಸಂದೇಹ ಉಂಟಾಗಿರುವುದು ತುಂಬಾ ಹಾಸ್ಯಾಸ್ಪದವಾಗಿದೆ, ಚಂದ್ರು!" ಎಂದೆ. "ಹಾಸ್ಯಾಸ್ಪದವೇ!" ಆಯೋಮಯನಾಗಿ ನನ್ನತ್ತ ನೋಡಿದ ಚಂದ್ರು

"ಹೌದು. ಚಂದ್ರು! ನಾಲ್ಕೈದು ನಿಮಿಷಗಳ ಕೆಳಗೆ, ನಾಲ್ಕು ಮನೆಗಳನ್ನು ಕಟ್ಟಿಸಿರುವೆನೆಂದೂ, ಇನ್ನೂ ನಾಲ್ಕು ಮನೆಗಳ ಸ್ಥಳಗಳನ್ನು ಕೊಂಡು ಇಟ್ಟಿರುವೆನೆಂದೂ, ಸುಮಾರು ಎಂಟು ಲಕ್ಷಗಳಷ್ಟು ನಗದು ಹಣವನ್ನು ಸಂಪಾದಿಸಿರುವೆನೆಂದೂ ನನ್ನೊಂದಿಗೆ ಹೇಳಿದ ನೀನು "ಸಮಸಮಾಜವು ಬರಬಹುದೇ?" ಎಂದು ಕೇಳುತ್ತಿರುವುದು ಹಾಸ್ಯಾಸ್ಪದವಲ್ಲದೆ ಮತ್ತಿನ್ನೇನು?" ಎಂದೆ ತೀವ್ರವಾದ ಸ್ವರದಲ್ಲಿ.

ಮುಖ ಬಿಳಚಿಕೊಂಡಂತಾಗಿದ್ದ ಚಂದ್ರು ತಲೆಯನ್ನು ತಗ್ಗಿಸಿಕೊಂಡ.

***

# ಮಧುರ ಸ್ಪಂದನ

ಹಿಂದೀ ಮೂಲ : ಮಾಲತಿ ಜೋಶಿ ಅನು : ಲೀಲಾ ನಾಯಿಕ

"ಆಸ್ಪತ್ರೆಯಲ್ಲಿದ್ದೇನೆ. ಚೆನ್ನಾಗಿದ್ದೇನೆ. ಚಿಂತಿಸುವ ಕಾರಣವಿಲ್ಲ. ಈ ಪತ್ರವನ್ನು ಟೆಲಿಗ್ರಾಂ ಎಂದು ತಿಳಿದು ತಕ್ಷಣ ಹೊರಟು ಬರುವದು.

ನಿಮ್ಮ ರಮಾ

ಸಂತೋಷ ಆ ಪೋಸ್ಟ್ ಕಾರ್ಡನ್ನು ಇಪ್ಪತ್ತು ಸಾರೆಯಾದರೂ ಓದಿರಬಹುದು. ಆದರೂ ತನ್ನ ರಮಾ ಬದುಕಿರುವಳೆಂಬ ವಿಶ್ವಾಸವಾಗುತ್ತಿಲ್ಲ. ತಕ್ಷಣ ಅವಳಿದ್ದ ಲಕ್ಷರಿಗೆ ಹೊರಟ.

ರಮಾ ಪ್ರತಿ ವರ್ಷದಂತೆ ಸುಮಾರು ಒಂದು ತಿಂಗಳ ಹಿಂದೆ ರಕ್ಷಾಬಂಧನಕ್ಕಾಗಿ ತನ್ನ ಅಣ್ಣನ ಮನೆಗೆ ಹೋಗಿದ್ದಳು. ಅವಳು ಹೋದ ಕೆಲವೇ ದಿನಗಳ ನಂತರ ರೇಡಿಯೋ ಹಾಗೂ ವರ್ತಮಾನ ಪತ್ರಗಳ ಮೂಲಕ "ಕುಂವಾರಿ' ನದಿಗೆ ಭಯಂಕರ ನೆರೆ ಬಂದ ಸಮಾಚಾರ ತಿಳಿದು ಭಯಭೀತನಾಗಿ. ಅವಳಿಗೆ ಅನೇಕ ಸಾರೆ ಟೆಲಿಗ್ರಾಮ್ ಕೊಟ್ಟ. ಕಾಗದ ಬರೆದ. ಅಲ್ಲಿಂದ ಉತ್ತರವಿಲ್ಲ. ಕುಂವಾರಿ ನದಿಯ ದಡದಲ್ಲಿಯೇ ಇರುವ ರಮಾಳ ಅಣ್ಣನ ಊರಿಗಾದ ಅನಾಹುತವನ್ನೂ ನೆನೆದೇ ಅವನಿಗೆ ನಿದ್ದೆ ಬರಲಿಲ್ಲ. ಅದಾದ ಹದಿನೈದು ದಿನಗಳ ನಂತರ ರಮಾಳ ಅಣ್ಣನಿಂದ ಕಾಗದ ಬಂತು. 'ನೀರು ಊರೊಳಗೆ ನುಗ್ಗಿದಾಗ ರಮಾ ಯಾರೋ ಪರಿಚಯದವರ ಮನೆಯಲ್ಲಿ ಸಂಗೀತ ಕಾರ್ಯಕ್ರಮವಿದ್ದುದರಿಂದ ಅಲ್ಲಿಗೆ ಹೋಗಿದ್ದಳು. ರಾತ್ರಿಯ ಗಾಢಾಂಧಕಾರದಲ್ಲಿ ಅಕಸ್ಮಾತ್ತಾಗಿ ನದಿಯ ನೀರು ಹರಿದು ಊರವರೆಲ್ಲ ಹೆದರಿ ದಿಕ್ಕೆಟ್ಟು ಎಲ್ಲೆಂದರಲ್ಲಿ ಆಸರೆಯಾಗಿ ಓಡತೊಡಗಿದರು. ಮನೆಯಲ್ಲಿರುವ ವಸ್ತುಗಳನ್ನಾಗಲೀ ಹಣವನ್ನಾಗಲೀ ತೆಗೆದುಕೊಂಡು ಹೋಗ ಬೇಕೆನ್ನುವ ವ್ಯವಧಾನವೂ ಇರಲಿಲ್ಲ, ಜೀವ ಉಳಿದರೆ ಸಾಕೆನ್ನುವ ಪರಿಸ್ಥಿತಿ. ಹೀಗಿರುವಾಗ ರಮಾ ಎಲ್ಲಿರುವಳೆಂದು ಹುಡುಕಲು ಸಾಧ್ಯವಾಗಲಿಲ್ಲ. ಆದರೂ ಎರಡುದಿನ 'ಮುರೈನಾ' ಸ್ಟೇಶನ್ನಿನಲ್ಲೇ ಇದ್ದು ಅಲ್ಲಿಗೆ ಬಂದು ಹೋಗುವವರನ್ನೆಲ್ಲಾ ರಮಾಳ ಬಗ್ಗೆ ವಿಚಾರಿಸಿದೆವು. ಅವಳ ಸುಳಿವೇ ಸಿಕ್ಕಲಿಲ್ಲ. ಅಲ್ಲಿ ಹೆಚ್ಚು ದಿನಗಳವರೆಗೆ ಇರುವಂತಿರಲಿಲ್ಲ. ಆದ್ದರಿಂದ ನಾವು ನಮ್ಮ ಮಾವನ ಮನೆಗೆ ಬಂದಿದ್ದೇವೆ. ರಮಾ ಕೂಡ ಸುರಕ್ಷಿತವಾಗಿ ಅಲ್ಲಿಗೆ ಬಂದಿರಬಹುದು" ಎಂದು ಬರೆದಿದ್ದರು. ಕಾಗದ ಓದಿ ಅವರ ಜೇಜವಾಬ್ದಾರಿಗಾಗಿ ಸಂತೋಷನಿಗೆ ತಲೆ

ಚಚ್ಚಿಕೊಳ್ಳುವಂತಾಯಿತು. ಅವರನ್ನು ಶಪಿಸುತ್ತಲೇ ರಮಾಳನ್ನು ಹುಡುಕಲು ಹೊರಟ. ಮಿಲ್ಟ್ರಿಯವರಿಂದ ನೆರೆಯ ಭಯಂಕರ ವರ್ಣನೆ ಕೇಳಿ ಸಂತೋಷ ಕುಸಿದು ಕುಳಿತ. 'ಮುರ್ರೈನಾ' ಕ್ಕೆ ಹೋದಮೇಲೆ ಅವಳನ್ನೂ ಹುಡುಕುವ ಶಕ್ತಿಯೇ ಇಲ್ಲದಂತಾಗಿತ್ತು. ಏನು ಅನಿಷ್ಟ ಸಮಾಚಾರ ಕೇಳಬೇಕಾಗುವದೋ ಎಂದು ಹೆದರುತ್ತಲೇ 'ಕಲಾರಸ್'ವರೆಗೆ ಬಂದ. 'ಸಬಲಗಡ' ಹಾಗೂ 'ಕಲಾರಸ್' ಗಳ ಮಧ್ಯದ ಪೂಲು ಕುಸಿದು ಬಿದ್ದು ಹೋಗಿತ್ತು. ಬಸ್ ಹಾಗೂ ಟ್ರೇನುಗಳು 'ಕಲಾರಸ್'ವರೆಗೆ ಬಂದು ವಾಪಸ್ ಹೋಗುತ್ತಿದ್ದವು. ಸಂತೋಷ ಅಲ್ಲಿಯೇ ಬಹಳ ಸಮಯ ನದಿಯ ರೌದ್ರಾವತಾರ ನೋಡುತ್ತ ಕುಳಿತ. ನಂತರ ಸರಕಾರೀ ಕಾರ್ಯಾಲಯದಲ್ಲಿ ಹೆಚ್ಚಿನ ಸಮಾಚಾರ ತಿಳಿಯಬಹುದೆಂದು ಅಲ್ಲಿಗೆ ಹೋದ. ನೆರೆಯಲ್ಲಿ ಕೊಚ್ಚಿ ಹೋದ ಊರುಗಳಲ್ಲಿ ರಮಾಳ ಅಣ್ಣನ ಊರೂ ಒಂದೆಂದು ತಿಳಿದು ಭಾರವಾದ ಮನಸ್ಸಿನಿಂದ ಹಿಂತಿರುಗಿದ

* * *

ರಮಾಳ ಎರಡೇ ಸಾಲುಗಳ ಈ ಪತ್ರ ಅವನ ದೂರದಾಶೆಯನ್ನು ವಿಶ್ವಾಸದಲ್ಲಿ ಬದಲಿಸಿತ್ತು. ತನ್ನ ರಮಾಳನ್ನು ಮತ್ತೆ ನೋಡುತ್ತೇನೆ. ಅವಳ ಉಸಿರಿನ ಮಧುರ ಸ್ಪರ್ಶವನ್ನೂ ಮತ್ತೆ ಅನುಭವಿಸುತ್ತೇನೆ ಎಂದು ಎಷ್ಟು ಆತುರನಾಗಿದ್ದನೆಂದರೆ ದಕ್ಷಿಣ ಎಕ್ಸಪ್ರೆಸ್ಸನಂಥ ಫಾಸ್ಟ್ ಎಕ್ಸಪ್ರೆಸ್ ಕೂಡಾ ತೆವಳಿಕೊಂಡು ಹೋಗುತ್ತಿರುವಂತೆ ಅನಿಸಿತವನಿಗೆ.

ಗ್ವಾಲಿಯರ್ ತಲುಪುವಷ್ಟರಲ್ಲಿ ರಾತ್ರಿಯ ಹನ್ನೊಂದು ಗಂಟೆಯಾಗಿತ್ತು. ಸ್ಟೇಶನ್ನಿನಲ್ಲಿಯೇ ಪ್ರವಾಸೀ ಮಂದಿರದಲ್ಲಿ ಬೆಂಚಿನ ಮೇಲೆ ಮಲಗಿ ಬೆಳಗಾಗುವದನ್ನೇ ಕಾಯ ತೊಡಗಿದ. ನಿದ್ದೆ ಅವನಿಂದ ದೂರ ಹೋಗಿತ್ತು. ಇಷ್ಟು ದಿನಗಳವರೆಗೆ ಅವನಿಗೆ ನಿದ್ದೆ ಬಂದ ಕಾರಣವೇ ಬೇರೆಯಾಗಿತ್ತು. ಆದರೆ ಇವತ್ತೂ ಅತಿ ಆನಂದದಿಂದಾಗಿ ನಿದ್ದೆ ಹಾರಿ ಹೋಗಿತ್ತೂ.

ಬೆಳಗಿನ ಜಾವ ಅದು ಹೇಗೋ ನಿದ್ದೆ ಆವರಿಸಿ ಎಚ್ಚರವಾದಾಗ ಚೆನ್ನಾಗಿ ಬೆಳಗಾಗಿತ್ತು. ಹಿಂದಿನ ದಿನಗಳಂತೆ ಮಳೆಯೂ ಇರಲಿಲ್ಲ. ಆಕಾಶ ಶುಭ್ರವಾಗಿತ್ತು. ಪ್ರಾತರ್ ವಿಧಿಗಳನ್ನು ಮುಗಿಸಿ ಅಲ್ಲಿಂದ ಹೊರಡುವಷ್ಟರಲ್ಲಿ ಒಂಬತ್ತು ಗಂಟೆಯಾಗಿತ್ತು.

ಆಟೋದಿಂದ ಇಳಿದು ಆಸ್ಪತ್ರೆಯೊಳಗೆ ಕಾಲಿಡುವಾಗ ಅವನ ಎದೆ ಜೋರಾಗಿ ಹೊಡೆದುಕೊಳ್ಳುತ್ತಿತ್ತು. ರಮಾಳ ಪತ್ರವನ್ನು ಐಡೆಂಟಿಟಿ ಕಾರ್ಡಿನಂತೆ ಕೈಯ್ಯಲ್ಲಿಯೇ ಹಿಡಿದುಕೊಂಡು ಹತ್ತಾರು ಪ್ರಶ್ನೆಗಳಿಗೆ ಉತ್ತರ ಕೊಟ್ಟ ನಂತರ ಕೊನೆಗೊಮ್ಮೆ ಡಾಕ್ಟರರನ್ನೂ ನೋಡಲು ಅನುಮತಿ ಸಿಕ್ಕತು. ಅಲ್ಲಿ ಮತ್ತೆ ಕ್ರಾಸ್ ಎಕ್ಸಾಂ ಆಗಿ ರಮಾಳನ್ನು ನೋಡಲು ಒಬ್ಬ ನರ್ಸ್ ಅವರನ್ನು ಕರೆದುಕೊಂಡು ಹೊರಟಳು. ಆ ಭವ್ಯವಾದ ಕಟ್ಟಡದಲ್ಲಿ ಅನೇಕ ಕಾರಿಡಾರ್‌ಗಳನ್ನು ದಾಟಿ ಹೋಗುತ್ತಿರುವಾಗ ಅವನ ಮನಸ್ಸು ವಿಚಿತ್ರ ಕಲ್ಪನೆಗಳಿಂದ ತುಂಬಿ ಹೋಗಿತ್ತು.

* * *

ಆಸ್ಪತ್ರೆಯ ವರಾಂಡದಲ್ಲಿ ಸಂತೋಷ ಕಾತರದಿಂದ ಅತ್ತಿಂದಿತ್ತ ಇತ್ತಿಂದತ್ತ ಓಡಾಡುತ್ತಿದ್ದಾನೆ... ನರ್ಸ್ ಓಡುತ್ತಾ ಬಂದು 'ಅಭಿನಂದನೆಗಳು ಸರ್' ಎಂದು ಹೇಳುತ್ತಾಳೆ...

ಈ ತರಪದ ಕಲ್ಪನೆ ಅವನಿಗೆ ಹೊಸದೇನೂ ಅನಿಸಲಿಲ್ಲ. ಮದುವೆಯಾದ ಹೊಸತರಲ್ಲಿ ಈ ತರಹದ ಕಲ್ಪನಾ ಲೋಕದಲ್ಲಿ ಎಷ್ಟೋ ಸಾರೆ ವಿಹರಿಸಿದ್ದಾನೆ. ಆದರೆ ದಿನಗಳ ಮೇಲೆ ದಿನಗಳು, ವರ್ಷಗಳ ಮೇಲೆ ವರ್ಷಗಳು ಉರುಳಿ ಅವನ ಅರೆಉತ್ಕಂಠತೆಗಳು ನಿರಾಶೆಯಲ್ಲಿ ಬದಲಾದವು. ಸಂತೋಷನೇನೋ ತಮ್ಮ ಅದೃಷ್ಟದಲ್ಲಿ ಮಕ್ಕಳಿಲ್ಲವೆಂದು ಪರಿಸ್ಥಿತಿಯನ್ನು ಒಪ್ಪಿಕೊಂಡ. ಆದರೆ ರಮಾ! ಬಂಧು ಬಳಗದವರ ಅಕ್ಕ-ಪಕ್ಕದವರ ವ್ಯಂಗ್ಯವನ್ನು ಅವಳಿಂದ ಸಹಿಸಲಿಕ್ಕಾಗುತ್ತಿರಲಿಲ್ಲ. ಅವಳಿಗೆ ದಿನ ಕಳೆಯುವದೇ ಕಷ್ಟವಾಗಿ ಒಂದು ಅನಾಥ ಮಗುವನ್ನು ದತ್ತು ತೆಗೆದುಕೊಳ್ಳೋಣವೆಂದು ಅದೆಷ್ಟೋ ಹೇಳಿದಳು. ಆದರೆ ಯಾರದೋ ಗೊತ್ತು-ಗುರಿ ಇಲ್ಲದವರ ಮಗುವನ್ನು ತಂದು ತನ್ನದೆಂದು ಒಪ್ಪಿಕೊಳ್ಳಲು ಸಂತೋಷ ಇಷ್ಟ ಪಡಲಿಲ್ಲ.

* * *

ತನ್ನ ಯೋಚನೆಯ ಗುಂಗಿನಲ್ಲಿ ಸಂತೋಷ ಯಾರಿಗೋ ಡಿಕ್ಕಿ ಹೊಡೆಯುವವರಲ್ಲಿದ್ದ. ಸಿಸ್ಟರ್ ಅವನಿಗೋಸ್ಕರ ಕಾಯುತ್ತಿರುವದೂ ಗೊತ್ತಾಗಲಿಲ್ಲ. ಅವಳು ಎಚ್ಚರಿಸಿದ ಮೇಲೆ ಮೆಲ್ಲಗೆ ವಾರ್ಡಿನಲ್ಲಿಯ ಸಾಲು-ಸಾಲು ಹಾಸಿಗೆಗಳನ್ನು ದಾಟುತ್ತಾ ರಮಾಳ ಹತ್ತಿರ ಹೋಗಿ ತಲುಪಿದರು. ರಮಾ ನಿದ್ದೆಯಲ್ಲಿದ್ದಳು. ಅವಳ ಬಿಳಿಚಿ ಸೋತ ಮುಖ ನೋಡಿ ಸಂತೋಷನಿಗೆ ಕನಿಕರ, ಪ್ರೀತಿ ತುಂಬಿ ಬಂತು. ಸಿಸ್ಟರ್ ಎಚ್ಚರಿಸಲು ಹೋಗಲು ಕೈಸನ್ನೆಯಿಂದ ಬೇಡವೆಂದು ಸೂಚಿಸಿ, ಅಲ್ಲಿಯೇ ಹತ್ತಿರವಿದ್ದ ಕುರ್ಚಿ ಎಳೆದುಕೊಂಡು ಕುಳಿತ. ಆ ನಿಶ್ಶಬ್ದ ವಾತಾವರಣದಲ್ಲಿ ಸಣ್ಣ ಸದ್ದು ಕೂಡ ಜೋರಾಗಿ ಕೇಳಿಸಿ ರಮಾ ಕಣ್ಣು ತೆರೆದಳು. ಪತಿಯನ್ನು ನೋಡಿ ಅವಳ ಬಾಡಿದ ಮುಖದಲ್ಲಿ ನಗೆ ಅರಳಿತು. ಯಾವಾಗ ಬಂದಿರಿ?"

"ರಾತ್ರಿ ಟ್ರೇನಿಗೇ ಬಂದೆ" ಮತ್ತೆ ಇಬ್ಬರೂ ಮೌನ. ಹೇಳಿ ಕೇಳುವದಕ್ಕೆ ಎಷ್ಟೋ ವಿಷಯಗಳಿದ್ದರೂ ಅಲ್ಲಿಯ ಜನರ ಮುಂದೆ ಅಷ್ಟೊಂದು ಜೋಡಿ ಕಣ್ಣುಗಳು ತಮ್ಮೆಡೆಗೇ ಇರಲು ಏನು? ಹೇಗೆ? ಮಾತಾಡಲು ಸಾಧ್ಯ?
ಸಂತೋಷ ಮೌನವನ್ನು ಸಹಿಸಲಾರದೇ ರೇಗಿ 'ನಿನ್ನನ್ನು ಇನ್ನು ಯಾವತ್ತೂ ಡಿಸ್‌ಚಾರ್ಜ ಮಾಡುತ್ತಾರೆ?' ಎಂದ

"ನೀವು ಯಾವತ್ತು ಕರೆದುಕೊಂಡು ಹೋಗುವಿರೋ ಅವಾಗ. ಹಾಗೆ ನೋಡಿದರೆ ಅವರು ಹೋಗಲು ನನಗೆ ಎಂದೋ ಅನುಮತಿ ಕೊಟ್ಟಿದ್ದಾರೆ. ಒಬ್ಬಳೇ ಬರಲು ನನಗೇ ಧೈರ್ಯವಾಗಲಿಲ್ಲ."

"ಮತ್ತೆ? ನನಗೆ ಮೊದಲೇ ಏಕೆ ತಿಳಿಸಲಿಲ್ಲ ? ಇಷ್ಟು ದಿನಗಳನ್ನು ನಾನು ಹೇಗೆ ಕಳೆದೆನೆಂದು ಗೊತ್ತೇ?" ತಾನು ಕಳೆದ ವೇದನೆಯ ಆ ದಿನಗಳನ್ನು ನೆನೆದು

ಸಂತೋಷನಿಗೆ ಮುಂದೆ ಮಾತೇ ಹೊರಡಲಿಲ್ಲ.

ರಮಾ ಏನೂ ಹೇಳಲಿಲ್ಲ. ಕತ್ತಿನವರೆಗೆ ಹೊದಿಕೆ ಎಳೆದುಕೊಂಡು ಸುಮ್ಮನೆ ಮಲಗಿದಳು. ಸಂತೋಷ ಮೌನವಾಗಿ ಅವಳನ್ನೇ ನೋಡುತ್ತ ಕುಳಿತ. ಒಮ್ಮಿಂದೊಮ್ಮೆ ಅವಳ ಹೊದಿಕೆಯೊಳಗಿಂದ ಅವಳ ಪಕ್ಕದಲ್ಲಿಯೇ ರೇಶಿಮೆಯಂಥ ಕೂದಲಿನ ಕುಚ್ಚು ಅಲ್ಲಾಡಿದಂತೆನಿಸಿತು. ಅವನಿಗೆ ಅದು ತನ್ನ ಭ್ರಮೆ ಏನೋ ಎನಿಸಿತು. ಬರುವಾಗ ಯಾವ ಮಧುರ ಕಲ್ಪನೆಯಲ್ಲಿ ಮುಳುಗಿದ್ದನೋ ಅದರದೇ ಪರಿಣಾಮವಿರಬಹುದೆಂದುಕೊಂಡ. ಆದರೆ ಅದು ಅವನ ಕಲ್ಪನೆಯಾಗಿರಲಿಲ್ಲ. ಅಲ್ಲಾಡುತ್ತಿದ್ದ ಕೂದಲ ಕುಚ್ಚು ಒಂದು ಸುಂದರ ಗೊಂಬೆಯ ತಲೆಯಂಥ ಪುಟ್ಟ ತಲೆಯಾಗಿತ್ತು. ಅದು ಕಣ್ಣುಜ್ಜುತ್ತಾ ಎದ್ದು ಕುಳಿತಿತು. ತೊದಲುನುಡಿಯಲ್ಲಿ ರಮಾಳಿಗೆ ಏನೋ ಹೇಳಿತು. ರಮಾ ಎದ್ದು ಮಗುವಿಗೆ ನೀರು ಕುಡಿಸಿ ಮತ್ತೆ ಪಕ್ಕದಲ್ಲಿ ಮಲಗಿಸಿಕೊಂಡು ಮೆಲ್ಲನೆ ತಟ್ಟ ತೊಡಗಿದಳು.

"ಯಾರದು?" ಸಂತೋಷ ಆತುರದಿಂದ ಕೇಳಿದ.

"ಗೊತ್ತಿಲ್ಲ. ನಾನು ಹೇಗೋ ನೆರೆಯಿಂದ ತಪ್ಪಿಸಿಕೊಂಡು ಓಡುತ್ತಿರುವಾಗ ಇವಳ ಅಮ್ಮನೂ ನನ್ನ ಜೊತೆಗಿದ್ದಳು. ಅವಳ ಬಗಲಲ್ಲಿ ಹದಿನೈದು ದಿನಗಳ ಮಗುವಿತ್ತು. ನೋಡು ನೋಡುತ್ತಿರುವಂತೆ ಅವಳು ಮಗುವಿನೊಡನೆ ನೀರಿನಲ್ಲಿ ಕೊಚ್ಚಿ ಹೋದಳು. ಈ ಮಗು ಆಗ ನನ್ನ ಬಗಲಲ್ಲಿತ್ತು." ಸ್ವಲ್ಪ ಸಮಯದ ಮೌನದ ನಂತರ "ನನ್ನ ಮಾತನ್ನು ಸ್ವಲ್ಪ ಕೇಳುತ್ತೀರಾ?" ರಮಾಳ ಅನುನಯದ ಸ್ವರ. "ಏನು?"

"ನೀವು ಒಪ್ಪುವಿರಲ್ಲವೇ? ದೇವರೇ ಈ ಮಗುವನ್ನು ನನ್ನ ಮಡಿಲಲ್ಲಿ ಹಾಕಿದ್ದಾನೆ. ಈ ಪಾಪದ ಮಗುವಿಗೆ ತನ್ನವರೆನ್ನುವವರು ಯಾರೂ ಇಲ್ಲ. ನಾವು ಕರೆದುಕೊಂಡು ಹೋಗದಿದ್ದರೆ ಇಲ್ಲಿಯವರು ಇವಳನ್ನು ಅನಾಥಾಶ್ರಮಕ್ಕೆ ಕೊಟ್ಟು ಬಿಡುತ್ತಾರೆ."

ಫ್ಯಾನು ಅಷ್ಟು ಜೋರಾಗಿ ತಿರುಗುತ್ತಿದ್ದರೂ ಸಂತೋಷ ಬೆವತುಹೋದ. ಗ್ವಾಲಿಯರದ ಸೆಟೆಯನ್ನು ಸರಿಸುತ್ತ ಎದ್ದು "ನಾನು ಡಾಕ್ಟರರನ್ನು ನೋಡಿ ಬರುತ್ತೇನೆ. ಡಿಸ್‌ಚಾರ್ಜ ವಿಷಯ ಏನು ಹೇಳುತ್ತಾರೋ?" ವಾರ್ಡಿನಿಂದ ಹೊರಗೆ ಬಂದು ನಿರಾಳವಾಗಿ ಉಸಿರಾಡಿದ. ಒಳಗೆ ಅವನಿಗೆ ಉಸಿರು ಕಟ್ಟಿದಂತಾಗಿತ್ತು

ಅವನನ್ನು ಡಾಕ್ಟರ ಹತ್ತಿರ ಕರೆದುಕೊಂಡು ಹೋಗುವಾಗ ಸಿಸ್ಟರ್–

"ಮಗುವಿನ ವಿಷಯ ಏನು ಯೋಚಿಸಿದಿರಿ?" ಎಂದು ಕೇಳಿದಳು. ಸಂತೋಷನಿಗೆ ಉತ್ತರಿಸುವುದು ಅವಶ್ಯ ಎನಿಸಲಿಲ್ಲ, ಆದರೆ ಡಾಕ್ಟರ್ ಕೂಡ ಅದೇ ಪ್ರಶ್ನೆ ಕೇಳಿದಾಗ ರೇಗಿ "you can't force doctor" ಎಂದ. "Of course, not" ಡಾಕ್ಟರ್ ಶಾಂತವಾಗಿ ಹೇಳಿದರು. "ನಿಮ್ಮ ಪತ್ನಿಯ ಆರೋಗ್ಯದ ಸಲುವಾಗಿ ನಾನು ನಿಮಗೆ ಕೇವಲ ಸಲಹೆ ಮಾತ್ರ ಕೊಡುತ್ತಿದ್ದೇನೆ. ನೀವು ಬೇಡ ಎನ್ನುವದಾದರೆ ಬಲವಂತವಿಲ್ಲ, ನೀವು ಒಪ್ಪಲಿಕ್ಕಿಲ್ಲ ಎಂಬ ಭಯದಿಂದಲೇ ಅವರು ತಾವು ಬದುಕಿ ಉಳಿದ ಬಗ್ಗೆ ನಿಮಗೆ

ಸೂಚನೆ ಕೊಡಲು ಬಿಡಲಿಲ್ಲ. ಹಾಗೆ ನೋಡಿದರೆ ಇದೊಂದು ಪುಣ್ಯದ ಕೆಲಸವಾಗಿದೆ. ಇಷ್ಟರ ಮೇಲೆ ನಿಮ್ಮಿಷ್ಟ."

ಸಂತೋಷ ಪೇಚಿನಲ್ಲಿ ಸಿಲುಕಿದ. ಎಲ್ಲರೂ ನನ್ನನ್ನು ಯಾವದೋ ಷಡ್ಯಂತ್ರದಲ್ಲಿ ಸಿಲುಕಿಸುತ್ತಿದ್ದಾರೆಂದು ಅನಿಸಿತವನಿಗೆ ಎಲ್ಲದಕ್ಕಿಂತ ಹೆಚ್ಚು ಕೋಪ ರಮಾಳ ಯಾಚಕ ಕಣ್ಣುಗಳ ಮೇಲೆ ಬಂತು. ಅವುಗಳ ಯಾಚನೆಯನ್ನು ತಳ್ಳಿಹಾಕುವದು ಅವನಿಂದ ಸಾಧ್ಯವಿರಲಿಲ್ಲ. ಮರುದಿನವೇ ಅವರು ಮಗುವಿನೊಡನೇ ಭೋಪಾಲಕ್ಕೆ ಹೊರಟರು.

ಒಬ್ಬ ಸಿಸ್ಟರ ಮಗುವಿನ ಕೂದಲನ್ನು ಅಂದವಾಗಿ ಕತ್ತರಿಸಿದಳು. ಡಾಕ್ಟರ ಅದಕ್ಕಾಗಿ ಒಂದು ಸುಂದರವಾದ ಫ್ರಾಕ್ ತಂದರು. ಆ ಮಗು ಅಸ್ಪತ್ರೆಯಲ್ಲಿಯ ಎಲ್ಲರಿಗೂ ಎಷ್ಟು ಅಚ್ಚುಮೆಚ್ಚಿನದಾಗಿತ್ತೆಂದರೆ ಹೊರಡುವಾಗ ಆಟದ ಸಾಮಾನು. ಬಲುನು. ಟಾಫೀಡಬ್ಬಾಗಳ ರಾಶಿಯೇ ಅದರೊಡನಿತ್ತು.

ಸಂತೋಷ ಯಾವ ಭಾವವೂ ಇಲ್ಲದೇ ತಟಸ್ಥನಾಗಿದ್ದ. ರಮಾಳಿಗೆ ಅವನ ಉದಾಸೀನತೆಯ ಪರಿವೆಯೇ ಇರಲಿಲ್ಲ. ಸಂತೋಷದಲ್ಲಿ ತನ್ನ ಅನಾರೋಗ್ಯವನ್ನು ಮರೆತಿದ್ದಳು. ದಾರಿಯಲ್ಲಿ ಮಗುವಿನೊಡನೆ ಆಡುತ್ತ ಅದನ್ನು ಆಡಿಸುತ್ತಿರುವುದರಲ್ಲೇ ಮಗ್ನಳಾಗಿದ್ದಳು. ಒಂದೆರಡು ಸಾರೆ ಸಂತೋಷನನ್ನು ತಮ್ಮ ಖುಶಿಯಲ್ಲಿ ಪಾಲ್ಗೊಳ್ಳುವಂತೆ ಪ್ರಯತ್ನಿಸಿದಳು. ಅವನು ಮುಖ ಬಿಗಿದುಕೊಂಡು ಕಿಡಕಿಯ ಕಡೆಗೆ ನೋಡುತ್ತಾ ಕುಳಿತ.

ರಮಾ ಮಗುವನ್ನು 'ಪೂನಮ್' ಎಂದು ಕರೆಯುತ್ತಿದ್ದಳು. ಅದು ಅವಳು ಬಹುದಿನಗಳಿಂದ ಮನಸ್ಸಿನಲ್ಲಿಟ್ಟಿದ್ದ ಹೆಸರಾಗಿತ್ತು.

ಅರ್ಧರಾತ್ರಿಯಲ್ಲಿ ಟ್ರೇನು ಭೋಪಾಲ ತಲುಪಿತು. ಮನೆ ತಲುಪುವ ಹೊತ್ತಿಗೆ ಪೂರಾ ಕಾಲನಿ ನಿದ್ರಿಸುತ್ತಿತ್ತು. ಸಂತೋಷನಿಗೆ ಇದು ಒಳ್ಳೆಯದೇ ಆಯಿತೆನಿಸಿತು. ಬೆಳಗಿನವರೆಗಾದರೂ ಅಕ್ಕ-ಪಕ್ಕದವರ ಪ್ರಶ್ನೆಗಳಿಂದ ಬಿಡುಗಡೆ ಸಿಗುತ್ತದೆಂದುಕೊಂಡ.

ದಾರಿಯಲ್ಲಿ ಅವನು ರಮಾಳೊಡನೆ ಒಂದು ಮಾತನ್ನೂ ಆಡಿರಲಿಲ್ಲ. ಟ್ರೇನು. ಟ್ಯಾಕ್ಸಿ ಹತ್ತುವಾಗ ಇಳಿಯುವಾಗ ರಮಾ ಮಗುವನ್ನು ಅವನ ಕೈಗೆ ಕೊಡುತ್ತಿದ್ದಳು. ಆಗ ಅವನ ಸಹನೆಯ ಕಟ್ಟೆ ಒಡೆಯುತ್ತಿತ್ತು. ಆದರೆ ರಸ್ತೆಯಲ್ಲಿ ತಮಾಷೆಯಾಗುವುದು ಬೇಡವೆಂದು ಸಹಿಸಿಕೊಂಡು ಸುಮ್ಮನಿರುತ್ತಿದ್ದ. ಮನೆಗೆ ಬಂದೊಡನೆ ಒಂದು ಪುಸ್ತಕ ತೆಗೆದುಕೊಂಡು ಆರಾಮ ಕುರ್ಚಿಯಲ್ಲಿ ಕುಳಿತುಕೊಂಡ. ಬೇರೆ ದಿನಗಳಲ್ಲಾಗಿದ್ದರೆ ರಮಾ ತೌರಿನಿಂದ ಬಂದಾಗಿನ ರಾತ್ರಿಯ ಸ್ವರೂಪವೇ ಬೇರೆಯಾಗಿರುತ್ತಿತ್ತು. ರಮಾಳನ್ನು ಮನಸ್ಸಿನಲ್ಲಿಯೇ ಬೈಯುತ್ತ ಕುಳಿತ.

ರಮಾ ಹಾಸಿಗೆ ಸ್ವಚ್ಛಮಾಡಿ ಹಾಸನ್ನು ಬದಲಿಸಿದಳು. ಅದರ ಮೇಲೆ ಒಂದು ಹಳೆಯ ಸೀರೆಯನ್ನು ಮಡಿಚಿ ಹಾಸಿ ಮಗುವನ್ನು ಮಲಗಿಸಿದಳು. ಇದೆಲ್ಲವನ್ನು ಅವಳಿಗೆ ಅದೇನೂ ಹೊಸದಲ್ಲವೆನ್ನುವಂತೆ ಸಹಜವಾಗಿ ಮಾಡಿದಳು. ತಾನು ಮಲಗುವ

ಮೊದಲು ಸಂತೋಷನನ್ನು 'ಮಲಗುವುದಿಲ್ಲವೇ?' ಎಂದು ಕೇಳಿದಳು." ನಿದ್ದೆ ಬಂದಾಗ ಮಲಗುತ್ತೇನೆ." ಅವನು ಖಾರವಾಗಿ ಉತ್ತರಿಸಿದ. ಮತ್ತೇನು ಹೇಳುವನೋ ಎಂದು ಸುಮ್ಮನೆ ಮಲಗಿದಳು.

ದೂರದ ಗಡಿಯಾರದಲ್ಲಿ ನಾಲ್ಕು ಘಂಟೆ ಬಾರಿಸಿತು. ಸಂತೋಷನಿಗೆ ಇನ್ನು ತಡೆಯಲಾಗಲಿಲ್ಲ. ದಣಿದ ಶರೀರ ವಿಶ್ರಾಂತಿ ಬಯಸುತ್ತಿತ್ತು. ಬಂದು ಮಂಚದ ಮೇಲೆ ಮಲಗಿದ. ರಮಾ ಗಾಢ ನಿದ್ರೆಯಲ್ಲಿದ್ದಳು. ಇಷ್ಟುದಿನಗಳ ಮಾನಸಿಕ-ಶಾರೀರಿಕ ಘರ್ಷಣೆಗಳನ್ನು ಅವಳ ಬಾಡಿದ ಮುಖ ಸ್ಪಷ್ಟವಾಗಿ ಹೇಳುತ್ತಿತ್ತು. ಇಬ್ಬರ ನಡುವೆ ಮಗು ಮಲಗಿತ್ತು. ಬಂಗಾರದ ಬಣ್ಣದ ಸುಂದರವಾದ ಕುರುಳು ಅದರ ಹಣೆಯ ಮೇಲೆ ಲಾಸ್ಯವಾಡುತ್ತಿತ್ತು. ಹೂವಿನ ಪಕಳೆಯಂಥ ತುಟಿಗಳು ಅರೆ ಬಿರಿದ ಮೊಗ್ಗಿನಂತೆ ಸ್ವಲ್ಪ ತೆರೆದುಕೊಂಡು ಮಧ್ಯದಿಂದ ಪುಟ್ಟ ದಂತಪಂಕ್ತಿಗಳು ಕಾಣುತ್ತಿದ್ದವು. ಸಂತೋಷ ನೆಟ್ಟದೃಷ್ಟಿಯಿಂದ ಮಗುವನ್ನು ನೋಡುತ್ತಲಿದ್ದ. ಸ್ಕೂಲಿನಲ್ಲಿ ಓದಿದ ಸೂರದಾಸರ ಕೃಷ್ಣನ ರೂಪ ನೆನಪಾಯಿತು. ಚಳಿ ಹೆಚ್ಚುತ್ತಿತ್ತು. ರಮಾ ಮಗುವಿಗೆ ನೀಟಾಗಿ ಹೊದಿಸಿದ್ದ ಹೊದಿಕೆ ಒಂದು ಕಡೆ ಸರಿದು ಮುದ್ದೆಯಾಗಿ ಬಿದ್ದಿತ್ತು. ಸಂತೋಷ ಮೆಲ್ಲನೆ ಹೊದಿಕೆಯನ್ನು ಸರಿಯಾಗಿ ಹೊದೆಸಿದ. ಮಗು, ಸ್ವಲ್ಪ ಮಿಸುಕಾಡಿ ಅಳುಮುಖ ಮಾಡಿತು. ಅಳು ನೋಡಿ ಸಂತೋಷನಿಗೆ ತಡೆಯಲಾಗಲಿಲ್ಲ. ಮೆತ್ತಗೆ ತಟ್ಟತೊಡಗಿದ. ಮಗು ಮತ್ತೆ ನಿದ್ರಿಸಿತು. ಆದರೆ ಆ ರೇಶಿಮೆ ಸ್ಪರ್ಶದ ಸುಖಾನುಭವ, ವಿಚಿತ್ರವಾದ ಮಧುರ ಸ್ಪಂದನದಿಂದ ಸಂತೋಷ ಪುಳಕಿತನಾದ.

* * *

ಬೆಳಗ್ಗೆ ಹಾಲಿನವನ ಧ್ವನಿ ಕೇಳಿ ರಮಾಳಿಗೆ ಎಚ್ಚರವಾಯಿತು. ಎದ್ದು ನೋಡುತ್ತಾಳೆ ಮಗು ಸಂತೋಷನ ತೀರ ಹತ್ತಿರದಲ್ಲಿ ಮಲಗಿದೆ. ಅದರ ಪುಟ್ಟ ಕೈಗಳು ಅವನ ಕತ್ತನ್ನು ಬಳಸಿವೆ. ಅವನ ಕೈ ಪ್ರೀತಿಯಿಂದ ನೇವರಿಸುತ್ತಿದೆಯೋ ಎನ್ನುವಂತೆ ಅದರ ಬೆನ್ನ ಮೇಲಿದೆ!

ಕೆಲವು ಕ್ಷಣ ಈ ಸುಂದರ ದೃಶ್ಯವನ್ನು ನೋಡುತ್ತಿದ್ದು ಸಮಾಧಾನದಿಂದ ಮೆಲ್ಲನೆ ಕೆಳಗಿಳಿದು ಹೋದಳು

* * *

# ಪಂದ್ಯ

ಆ್ಯಂಟನ್ ಚೆಕಾವ್

ಅನು : ವಿ. ನಾಗೇಶ

ಅದು ಶರದೃತುವಿನ ಮಧ್ಯರಾತ್ರಿಯ ಸಮಯ. ಸುಮಾರು 50 ವರ್ಷದ ಬ್ಯಾಂಕರ್ ತನ್ನ ವ್ಯಾಸಂಗದ ಕೊಠಡಿಯಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಶತಪಥ ತಿರುಗುತ್ತಿದ್ದ. ತಾನು 15 ವರ್ಷಗಳ ಹಿಂದೆ ಇಂತಹುದೇ ಒಂದು ರಾತ್ರಿಯಲ್ಲಿ ಭೋಜನ ಕೂಟವೊಂದನ್ನು ಏರ್ಪಡಿಸಿದ್ದದನ್ನು ಜ್ಞಾಪಿಸಿಕೊಳ್ಳುತ್ತಿದ್ದ. ಸಾಕಷ್ಟು ಬುದ್ಧಿವಂತರಿಂದ ಕೂಡಿದ್ದ ಆ ಸಮಾರಂಭದಲ್ಲಿ ತುಂಬಾ ಸ್ವಾರಸ್ಯಕರವಾದ ಚರ್ಚೆ ನಡೆಯುತ್ತಿತ್ತು. ಜೀವಾವಧಿ ಶಿಕ್ಷೆ ಮತ್ತು ಮರಣದಂಡನೆ ಶಿಕ್ಷೆ. ಇವುಗಳಲ್ಲಿ ಯಾವುದು ಉತ್ತಮ ಎಂಬುದು ಮುಖ್ಯ ವಿಷಯವಾಗಿತ್ತು.

ಕಾರ್ಯಕ್ರಮಕ್ಕೆ ಆಗಮಿಸಿದ್ದ ಹೆಚ್ಚುಮಂದಿ ಕಲಾವಿದರು ಬುದ್ಧಿಜೀವಿಗಳು, ಪತ್ರಿಕೋದ್ಯಮಿಗಳು, ನ್ಯಾಯವಾದಿಗಳು ಮರಣದಂಡನೆ ಇಂದಿನ ಕಾಲಕ್ಕೆ ಪ್ರಸ್ತುತವಲ್ಲ ಎಂದು ವಾದಿಸಿದರು. ಇದು ಅತ್ಯಂತ ಅನೀತಿ ಮತ್ತು ಅಮಾನವೀಯ ಎಂದು ಅಭಿಪ್ರಾಯ ಪಟ್ಟರು. ಬಹಳಷ್ಟು ಮಂದಿ ಮರಣದಂಡನೆಯ ಶಿಕ್ಷೆಯನ್ನು ಶಾಶ್ವತವಾಗಿ ಬಹಿಷ್ಕರಿಸಬೇಕೆಂದು ವಾದಿಸಿದರು.

"ನಿಮ್ಮ ಮಾತನ್ನು ನಾನು ಖಂಡಿತ ಒಪ್ಪುವುದಿಲ್ಲ" ಎನ್ನುತ್ತಾ ಬ್ಯಾಂಕರ್ ಮಧ್ಯೆ ಬಾಯಿಹಾಕಿದರು. "ನನಗೆ ಜೀವಾವಧಿ ಶಿಕ್ಷೆ ಅಥವಾ ಮರಣದಂಡನೆ ಯಾವುದರ ಅನುಭವವೂ ಇಲ್ಲ. ಆದರೆ ಇವುಗಳಲ್ಲಿ ಯಾವುದನ್ನು ಆರಿಸಿಕೊಳ್ಳಬೇಕೆಂದರೆ ಜೀವಾವಧಿ ಶಿಕ್ಷೆಯು ಮರಣದಂಡನೆ ಶಿಕ್ಷೆಗಿಂತ ಉತ್ತಮವಲ್ಲ. ಏಕೆಂದರೆ ಮರಣದಂಡನೆಯು ವ್ಯಕ್ತಿಯನ್ನು ಒಂದು ಬಾರಿ ಸಾಯಿಸಿದರೆ ಜೀವಾವಧಿ ಶಿಕ್ಷೆಯು ವ್ಯಕ್ತಿಯನ್ನು ಸತತವಾಗಿ ಸಾಯಿಸುತ್ತಲೇ ಇರುತ್ತದೆ. "ಹಾಗೆ ನೋಡಿದರೆ ಎರಡೂ ಶಿಕ್ಷೆಗಳೂ ಅಮಾನವೀಯ ಶಿಕ್ಷೆಗಳೇ" ಅತಿಥಿಗಳಲ್ಲಿ ಒಬ್ಬರು ಮಧ್ಯೆ ಬಾಯಿ ಹಾಕುತ್ತಾ ನೋಡಿದರು : "ಏಕೆಂದರೆ ಎರಡರ ಉದ್ದೇಶಗಳೂ ಒಂದೇ. ಜೀವವನ್ನು ತೆಗೆಯುವುದರಿಂದ ಯಾರಿಗೂ ಲಾಭವಿಲ್ಲ. ನಮಗೆ ಜೀವವನ್ನು ಕೊಡುವ ಶಕ್ತಿ ಇಲ್ಲದಿದ್ದಾಗ ಜೀವವನ್ನು ತೆಗೆಯುವ ಅಧಿಕಾರ ಎಲ್ಲಿಂದ ಬರುತ್ತದೆ?"

"ನನಗೇನಾದರೂ ಮರಣದಂಡನೆ ಶಿಕ್ಷೆ ಮತ್ತು ಜೀವಾವಧಿ ಶಿಕ್ಷೆ ಇವುಗಳ ಮಧ್ಯೆ ಆರಿಸಿಕೊಳ್ಳಲು ಬಿಟ್ಟರೆ ನಾನು ಖಂಡಿತವಾಗಿಯೂ ಎರಡನೆಯದನ್ನು

ಅರಿಸಿಕೊಳ್ಳುತ್ತೇನೆ" ಹೊಸದಾಗಿ ವಕೀಲವೃತ್ತಿಯನ್ನು ಆರಂಭಿಸಿದ ಯುವಕ ಹೇಳಿದ. "ಏಕೆಂದರೆ ಮರಣದಂಡನೆಗೊಳಗಾಗಿ ಜೀವ ಕಳೆದುಕೊಳ್ಳುವುದಕ್ಕಿಂತ ಜೀವಾವಧಿ ಶಿಕ್ಷೆಗೊಳಗಾಗಿ ಬದುಕಿ ಉಳಿಯುವುದೇ ಲೇಸು" ಯುವಕನ ಮಾತನ್ನು ಒಪ್ಪದ ಬ್ಯಾಂಕರ್ ಮೇಜನ್ನು ಕುಟ್ಟುತ್ತಾ ಹುರುಪಿನಿಂದ "ನಿನ್ನ ಮಾತನ್ನು ನಾನು ಖಂಡಿತಾ ಒಪ್ಪುವುದಿಲ್ಲ. ಬೇಕಾದರೆ ನಾನು ಎರಡು ಲಕ್ಷ ರೂ.ಗಳ ಪಣವನ್ನು ಒಡ್ಡುವೆ. ಹದಿನೈದು ವರ್ಷಗಳಿರಲಿ, ನಿನಗೆ ಕೇವಲ ಐದು ವರ್ಷಗಳ ಕಾಲವೂ ಒಬ್ಬೊಂಟಿಗನಾಗಿ ಜೈಲಿನಲ್ಲಿ ಕಾಲ ಕಳೆಯಲು ಸಾಧ್ಯವಿಲ್ಲ."

"ಮನಸ್ಸಿದ್ದರೆ ಮಾರ್ಗ. ಮನುಷ್ಯನಿಗೆ ಅಸಾಧ್ಯವೆಂಬುದು ಯಾವುದೂ ಇಲ್ಲ. ನೀನೊಬ್ಬನೇ ಏನು? ಪಣಕಟ್ಟಲು ನಾನೂ ತಯಾರು. ಕೇವಲ ಐದು ವರ್ಷಗಳೇಕೆ? 15 ವರ್ಷಗಳ ಕಾಲ ನಾನು ಒಂಟಿಯಾಗಿ ಗೃಹ ಬಂಧನದಲ್ಲಿ ದೂಕಬಲ್ಲೆ. ನೀನು ಹೇಳುವ ಎಲ್ಲಾ ನಿಯಮಗಳಿಗೂ ನಾನು ಬದ್ಧನಾಗಿರುತ್ತೇನೆ" "ನಾನು ಈ ದಿನವೇ ನಿನಗಾಗಿ ಎರಡು ಲಕ್ಷ ಹಣವನ್ನು ತೆಗೆದಿಡುತ್ತೇನೆ ನೀನು ಪಣದಲ್ಲಿ ಗೆದ್ದ ಮಾರನೇ ದಿನ ಹಣ ನಿನ್ನದಾಗುತ್ತದೆ"

ಅಂತೂ ಈ ಹುಚ್ಚುತನದ ವಾದ ಅಂತಿಮವಾಗಿ ಈ ರೀತಿಯಲ್ಲಿ ಕೊನೆಗೊಂಡಿತು. ಬ್ಯಾಂಕರ್‌ಗೆ ಲಕ್ಷವೆಂದರೆ ಲಕ್ಷ್ಯವೇ ಇಲ್ಲ. ಹಾಗಾಗಿ ಅವನು ಈ ಪಣಕ್ಕೆ ತಕ್ಷಣವೇ ಒಪ್ಪಿಕೊಂಡ. ಆದರೂ ಭೋಜನ ಮಾಡುವಾಗ ಯುವಕನನ್ನು ಮತ್ತೊಮ್ಮೆ ಎಚ್ಚರಿಸಿದ. "ಈ ಪಣದ ಬಗ್ಗೆ ಇನ್ನೊಮ್ಮೆ ಯೋಚಿಸು. ನನಗೆ ಈ ಎರಡು ಲಕ್ಷ ಎಂಬುದು ಸಮಸ್ಯೆಯೇ ಅಲ್ಲ. ಆದರೆ ನೀನು ನಿನ್ನ ಬದುಕಿನ ಅತ್ಯಮೂಲ್ಯವಾದ ಮೂರು ಅಥವಾ ನಾಲ್ಕು ವರ್ಷಗಳನ್ನು ಕಳೆದುಕೊಳ್ಳಲಿದ್ದೀಯ. ಮೂರು ಅಥವಾ ನಾಲ್ಕು ವರ್ಷ ಎಂದು ನಾನು ಒತ್ತಿ ಹೇಳುತ್ತಿದ್ದೇನೆ. ಏಕೆಂದರೆ ಇನ್ನೂ ಹೆಚ್ಚು ಕಾಲ ನಿನಗೆ ಅಲ್ಲಿ ಕಳೆಯಲು ಸಾಧ್ಯವೇ ಇಲ್ಲ. ಖಂಡಿತವಾಗಿಯೂ ತಪ್ಪಿಸಿಕೊಂಡು ಹೊರಕ್ಕೆ ಬರುತ್ತೀಯ. ಒಂದು ವಿಷಯವನ್ನು ನೆನಪಿನಲ್ಲಿಟ್ಟುಕೊ ಸ್ವೇಚ್ಛೆಯಿಂದ ಗೃಹ ಬಂಧನದಲ್ಲಿರುವುದು ಕಾನೂನಿನ ಆದೇಶಕ್ಕೊಳಗಾಗಿ ಬಂಧನದಲ್ಲಿರುವುದಕ್ಕಿಂತ ಬಹಳ ಕಷ್ಟಕರವಾದ ಕೆಲಸ. ಏಕೆಂದರೆ ಸ್ವಇಚ್ಛೆಯಿಂದ ಗೃಹಬಂಧನದಿಂದ ಯಾವಾಗ ಬೇಕಾದರೂ ವಾಪಸ್ ಬರಬಹುದೆಂಬ ಸ್ವಾತಂತ್ರ್ಯ ಅಲ್ಲಿ ಬದುಕಿನ ನೆಮ್ಮದಿಯನ್ನು ಕೆಡಿಸುತ್ತದೆ. ಹಾಗಾಗಿ ನೀನು ಹೊರಕ್ಕೆ ಬರುವ ಸಾಧ್ಯತೆಯೇ ಹೆಚ್ಚು" ಆದರೆ ಬ್ಯಾಂಕರನ ಯಾವ ಬೆದರಿಕೆಗೂ ಯುವಕ ಬಗ್ಗಲೇ ಇಲ್ಲ.

ಈ ಎಲ್ಲ ಘಟನೆಗಳನ್ನೂ ಜ್ಞಾಪಿಸಿಕೊಳ್ಳುತ್ತಾ ಬ್ಯಾಂಕರ್ ತನ್ನ ಕೊಠಡಿಯಲ್ಲಿ ಅತ್ತಿಂದಿತ್ತ ಇತ್ತಿಂದತ್ತ ತಿರುಗಾಡ ತೊಡಗಿದ್ದ. "ಈ ಪಂದ್ಯವನ್ನು ನಾನು ಯಾಕಾಗಿ ಕಟ್ಟಿದೆ? ಒಬ್ಬ ವ್ಯಕ್ತಿ ತನ್ನ ಬದುಕಿನ ಅತ್ಯಮೂಲ್ಯವಾದ ಕಾಲವನ್ನು ಕೇವಲ ಎರಡು ಲಕ್ಷಗಳಿಗಾಗಿ ಕಳೆದುಕೊಳ್ಳುವುದರಲ್ಲಿ ಏನಾದರೂ ಅರ್ಥವಿದೆಯೇ? ಈ ಪಂದ್ಯವೇನಾದರೂ ಮರಣದಂಡನೆ ಅಥವಾ ಜೀವಾವಧಿ ಶಿಕ್ಷೆ ಇವುಗಳಲ್ಲಿ ಯಾವುದು

ದೊಡ್ಡದು ಎಂದು ಸಾಧಿಸುತ್ತದೆಯೇ? ಇಲ್ಲ. ಇಲ್ಲ. ಖಂಡಿತಾ ಇಲ್ಲ. ಇದು ಕೇವಲ ಅರ್ಥವಿಲ್ಲದ, ಚಂಚಲತೆಯ ಹುಚ್ಚುತನದ ಪರಾಕಾಷ್ಠೆ. ಯುವಕನ ದೃಷ್ಟಿಯಲ್ಲಿ ಹೇಳುವುದಾದರೆ ದುರಹಂಕಾರ ಮತ್ತು ದುರಾಸೆಯ ಪರಮಾವಧಿ."

ಮುಂದೆ ನಡೆದ ಘಟನೆಗಳನ್ನು ಒಂದೊಂದಾಗಿ ಜ್ಞಾಪಿಸಿಕೊಳ್ಳುತ್ತಾ ಹೋದ. ಬ್ಯಾಂಕರನ ತೋಟದ ಮನೆಯ ಒಂದು ಕೋಣೆಯಲ್ಲಿ ಆ ಯುವಕನು ಹದಿನೈದು ವರ್ಷಗಳ ಕಾಲ ಇರಬೇಕೆಂದು ತೀರ್ಮಾನಿಸಲಾಯಿತು. ಆ ಹದಿನೈದು ವರ್ಷಗಳ ಕಾಲ ಅವನು ಕೊಠಡಿಯಿಂದ ಹೊರಕ್ಕೆ ಬರುವಂತಿಲ್ಲ. ಯಾರನ್ನೂ ನೋಡುವಂತಿಲ್ಲ, ಯಾರೊಂದಿಗೂ ಮಾತನಾಡುವಂತಿಲ್ಲ. ಅಷ್ಟೇ ಏಕೆ? ಯಾರ ಮಾತನ್ನೂ ಕೇಳುವಂತಿಲ್ಲ. ಯಾವ ವಿಧವಾದ ಪತ್ರಿಕೆಗಳನ್ನಾಗಲೀ, ಪತ್ರವನ್ನಾಗಲೀ ಪಡೆಯುವಂತಿಲ್ಲ ಹಾಗೂ ಓದುವಂತಿಲ್ಲ. ಆದರೆ ಅವನು ಪತ್ರಗಳನ್ನು ಬರೆಯಬಹುದು, ಸಂಗೀತವನ್ನು ನುಡಿಸಬಹುದು, ಪುಸ್ತಕಗಳನ್ನು ಓದಬಹುದು, ಧೂಮಪಾನ ಮಾಡಬಹುದು, ಮದ್ಯಪಾನ ಮಾಡಬಹುದು. ಅವನು ಕೇಳುವ ಎಲ್ಲ ಪುಸ್ತಕಗಳನ್ನು, ಸಂಗೀತೋಪಕರಣಗಳನ್ನು, ಇತರ ಯಾವುದೇ ವಸ್ತುಗಳನ್ನು ಎಷ್ಟು ಸಂಖ್ಯೆಯಲ್ಲಿ ಬೇಕಾದರೂ ಒದಗಿಸಲಾಗುವುದು. ಬಾಹ್ಯ ಜಗತ್ತಿನೊಂದಿಗೆ ಸಂಪರ್ಕ ಹೊಂದಲು ಕೇವಲ ಒಂದು ಕಿಟಕಿಯ ವ್ಯವಸ್ಥೆಯನ್ನು ಮಾತ್ರಾ ಅವನಿಗಾಗಿ ವಿಶೇಷವಾಗಿ ಮಾಡಲಾಗುವುದು. ಅವನಿಗೆ ಬೇಕಾದ ವಸ್ತುಗಳನ್ನು, ಪುಸ್ತಕಗಳಿರಬಹುದು, ಸಂಗೀತೋಪಕರಣಗಳಿರಬಹುದು, ಯಾವುದೇ ವಸ್ತುವಿರಬಹುದು, ಅದನ್ನು ಒಂದು ಚೀಟಿಯಲ್ಲಿ ಬರೆದು ಕಿಟಕಿಯ ಬಳಿ ಇರಿಸಬೇಕು. ಆ ವಸ್ತುವನ್ನು ಕಿಟಕಿಯ ಮೂಲಕವೇ ಅವನಿಗೆ ಒದಗಿಸಲಾಗುವುದು. ಚೀಟಿ ಇಡುವಾಗ ಅಥವಾ ವಸ್ತುಗಳನ್ನು ಪಡೆಯುವಾಗ ಇವನು ಯಾರ ಮುಖವನ್ನೂ ನೋಡುವಂತಿಲ್ಲ.

ಅದರಂತೆ ಒಂದು ಕರಾರುಪತ್ರವನ್ನೂ ಬರೆಯಲಾಯಿತು. ಆ ಕರಾರು ಪತ್ರದಪ್ರಕಾರ ಯುವಕನು ಹದಿನೈದು ವರ್ಷಗಳ ಕಾಲ ಅಂದರೆ 1870ರ 12ಗಂಟೆಯಿಂದ 1885ರ 12 ಗಂಟೆಯವರೆಗೆ ಏಕಾಂಗಿಯಾಗಿ ಕಾರಾಗೃಹದಲ್ಲಿರತಕ್ಕದ್ದು. ಅಲ್ಲಿಂದ ತಪ್ಪಿಸಿಕೊಂಡರೆ ಅಥವಾ ತಪ್ಪಿಸಿಕೊಳ್ಳಲು ಪ್ರಯತ್ನಪಟ್ಟರೆ ಅಂದರೆ ಅವಧಿ ಮುಗಿಯುವುದಕ್ಕಿಂತ ಕೇವಲ ಎರಡು  ನಿಮಿಷಗಳ ಮೊದಲು ಹೊರಕ್ಕೆ ಬಂದದ್ದೇ ಆದರೂ ಬ್ಯಾಂಕರನು ಅವನಿಗೆ ಕೊಡಬೇಕಾದ ಎರಡು ಲಕ್ಷ ಮೊತ್ತದಿಂದ ವಿಮುಕ್ತನಾಗುತ್ತಾನೆ.

ಕಾರಾಗೃಹದ ಬದುಕಿನ ಅವನ ಬರಹಗಳನ್ನು ಪರೀಕ್ಷಿಸಿದಾಗ ಒಂಟಿತನದಲ್ಲಿ ಕಾಲ ಕಳೆಯಲು ಕೈದಿಯು ಮೊದಮೊದಲು ಬಹಳ ಕಷ್ಟಪಡುತ್ತಿದ್ದ. ಅವನು ಅನುಭವಿಸುತ್ತಿರುವ ವೇದನೆಯ ಸಪ್ಪಳ ಹಗಲಿರುಳೂ ಮನೆಯ ಹೊರಭಾಗಕ್ಕೆ ಕೇಳುತ್ತಿತ್ತು. ಅವನು ಮದ್ಯಪಾನ ಮತ್ತು ಧೂಮಪಾನವನ್ನು ತಿರಸ್ಕರಿಸುತ್ತಿದ್ದ. ಮಧ್ಯಪಾನ ಸೇವಿಸುವುದರಿಂದ ಮನಸ್ಸು ಸ್ಥಿಮಿತವನ್ನು ಕಳೆದುಕೊಳ್ಳುತ್ತದೆ. ಅಷ್ಟೇ ಅಲ್ಲದೆ "ಮದ್ಯಪಾನ ಮಾಡಬೇಕಾದರೆ ಜೊತೆಗಾರರಿರಬೇಕು. ಜೊತೆಗಾರರಿಲ್ಲದೇ ಇರುವ ಮದ್ಯಪಾನವನ್ನು

ಊಹಿಸಲೂ ಸಾಧ್ಯವಿಲ್ಲ. ಧೂಮಪಾನ ಮಾಡುವುದರಿಂದ ಕೊಠಡಿಯೆಲ್ಲಾ ಹೊಗೆಯಿಂದ ತುಂಬಿಕೊಳ್ಳುತ್ತದೆ.

ಮೊದಮೊದಲು ಅಂದರೆ ಮೊದಲನೇ ವರ್ಷದಲ್ಲಿ ಇವನು ಪ್ರೀತಿ, ಪ್ರೇಮಗಳಿಗೆ ಸಂಬಂಧಪಟ್ಟ ಕಥೆ, ಕವನಗಳನ್ನು ಓದುತ್ತಿದ್ದ. ಬರಬರುತ್ತಾ ಇವುಗಳಲ್ಲಿ ಆಸಕ್ತಿ ಕಡಿಮೆಯಾಯಿತು. ಎರಡನೇ ವರ್ಷದಲ್ಲಿ ಸೋಪಿನಿಂದ ನರಳುವ ಸಪ್ಪಳವೇ ಕೇಳಿಸುತ್ತಿರಲಿಲ್ಲ. ನಂತರ ಶ್ರೇಷ್ಠ ಬರಹಗಾರರ ಕೃತಿಗಳನ್ನು ಓದತೊಡಗಿದ. ಐದನೇ ವರ್ಷದಲ್ಲಿ ಇವನ ಕೊಠಡಿಯಿಂದ ಸಂಗೀತದ ನಾದ ಕೇಳಿಬರತೊಡಗಿತು. ಹಾಗೇ ಮದ್ಯಪಾನ ಮಾಡುವುದನ್ನೂ ಪ್ರಾರಂಭಿಸಿದ. ಬಂದೀಖಾನೆಯ ಹೊರಗಿನಿಂದ ಅವನನ್ನು ಕಿಟಕಿಯ ಮೂಲಕ ಪರೀಕ್ಷಿಸಿದಾಗ ಅವನೇನೂ ಮಾಡುತ್ತಿರಲಿಲ್ಲ. ಕೇವಲ ತಿನ್ನುವುದು, ಕುಡಿಯುವುದು. ಮತ್ತು ಮಲಗುವುದು. ಆಗಾಗ್ಗೆ ಆಕಳಿಸುತ್ತಾ ಕೋಪದಿಂದ ತನ್ನಷ್ಟಕ್ಕೆ ತಾನೇ ಮಾತನಾಡಿಕೊಳ್ಳುತ್ತಿದ್ದ. ಆಗ ಯಾವ ಪುಸ್ತಕಗಳನ್ನೂ ಓದುತ್ತಿರಲಿಲ್ಲ. ಕೆಲವೊಮ್ಮೆ ಎದ್ದು ಕುಳಿತುಕೊಂಡು ಬರೆಯುತ್ತಿದ್ದ. ಗಂಟೆಗಟ್ಟಲೆ ಬರೆಯುತ್ತಿದ್ದ. ಸ್ವಲ್ಪ ಹೊತ್ತಿನ ನಂತರ ಬರೆದುದೆಲ್ಲವನ್ನೂ ಹರಿದು ಚೂರು ಚೂರು ಎಸೆಯುತ್ತಿದ್ದ. ಒಂದೆರಡು ಬಾರಿ ಹೀಗೆ ಹರಿದು ಎಸೆದ ನಂತರ ಅಳುವ ಶಬ್ದ ಕೇಳುತ್ತಿತ್ತು.

ಆರನೇ ವರ್ಷದ ಉತ್ತರಾರ್ಧದಲ್ಲಿ ಈ ಕೈದಿಯು ಓದುವ ಹವ್ಯಾಸವನ್ನು ಬೆಳೆಸಿಕೊಂಡ ಭಾಷಾಶಾಸ್ತ್ರ, ತತ್ವಶಾಸ್ತ್ರ, ಚರಿತ್ರೆ ಮುಂತಾದ ವಿಷಯಗಳನ್ನು ಓದುವುದರಲ್ಲಿ ಮುಳುಗಿಹೋದ. ಅವನು ಕೇಳುತ್ತಿರುವ ಪುಸ್ತಕಗಳನ್ನು ಹೊಂದಿಸುವುದರಲ್ಲಿ ಬ್ಯಾಂಕರ್ ಹಣ್ಣುಗಾಯಿ ನೀರುಗಾಯಿಯಾಗಿ ಹೋದ. ಕೇವಲ ನಾಲ್ಕು ವರ್ಷಗಳಲ್ಲಿ ಅವನಿಗೆ ಆರು ನೂರಕ್ಕೂ ಹೆಚ್ಚು ಪುಸ್ತಕಗಳನ್ನು ಒದಗಿಸಬೇಕಾಯಿತು. ಈ ಸಂದರ್ಭದಲ್ಲಿ ಬ್ಯಾಂಕರ್‌ನಿಗೆ ಕೈದಿಯಿಂದ ಒಂದು ಸುದೀರ್ಘವಾದ ಪತ್ರ ಬಂತು.

"ನನ್ನ ಪ್ರೀತಿಯ ಜೈಲರ್‌ರವರೇ, ನಾನು ಈ ಪತ್ರವನ್ನು ತಮಗೆ ಆರು ಭಾಷೆಗಳಲ್ಲಿ ಬರೆಯುತ್ತಿದ್ದೇನೆ. ಈ ಪತ್ರವನ್ನು ಆಯಾಯ ಭಾಷಾ ಪಂಡಿತರಿಗೆ ತೋರಿಸಿ ಈ ಪತ್ರಗಳಲ್ಲಿ ಅವರು ಒಂದೇ ಒಂದು ತಪ್ಪನ್ನು ಕಾಣದಿದ್ದಲ್ಲಿ ನನ್ನ ಕೊಠಡಿಯ ಹೊರ ಭಾಗದಲ್ಲಿರುವ ತೋಟದಲ್ಲಿ ಒಂದು ಗುಂಡನ್ನು ಹಾರಿಸಿ. ಆ ಗುಂಡಿನ ಸಪ್ಪಳದಿಂದ ನನ್ನ ಪ್ರಯತ್ನ ಫಲಪ್ರದವಾಗಿದೆ ಎಂಬ ತೃಪ್ತಿ ನನಗೆ ಸಿಗುತ್ತದೆ. ಜಗತ್ತಿನಾದ್ಯಂತ ಬೇರೆ ಬೇರೆ ದೇಶದ ಜನರು ಬೇರೆ ಬೇರೆ ಭಾಷೆಗಳಲ್ಲಿ ಮಾತನಾಡುತ್ತಿರಬಹುದು. ಆದರೆ ಅವುಗಳಲ್ಲಿ ಉರಿಯುತ್ತಿರುವ ಜ್ಞಾನದ ಜ್ಯೋತಿಯು ಮಾತ್ರ ಒಂದೇ ಆಗಿರುತ್ತದೆ. ಆ ಪರಮ ಸತ್ಯವನ್ನು ಅರಿಯುತ್ತಿರುವುದರಿಂದ ನನ್ನ ಮನಸ್ಸಿಗಾಗುತ್ತಿರುವ ಆನಂದ ವರ್ಣಿಸಲಸದಳ." ಕೈದಿಯ ಅಪೇಕ್ಷೆಯನ್ನು ಪೂರ್ಣಗೊಳಿಸುವುದಕ್ಕೋಸ್ಕರ ಬ್ಯಾಂಕರ್ ಎರಡು ತುಪಾಕಿಗಳನ್ನು ತೋಟದಲ್ಲಿ ಹಾರಿಸಲು ಆದೇಶವಿತ್ತ.

ಹತ್ತು ವರ್ಷಗಳ ನಂತರ ಕೈದಿಯು ಸದಾ ಮೇಜಿನ ಬಳಿ ಕುಳಿತುಕೊಂಡು ಕ್ರೈಸ್ತದೇವನ ವೇದವಾಕ್ಯ ಪುಸ್ತಕವನ್ನು ಓದುವುದಕ್ಕೆ ಪ್ರಾರಂಭಿಸಿದ. ನಾಲ್ಕು ವರ್ಷಗಳ ಕಾಲ ಆರುನೂರಕ್ಕೂ ಹೆಚ್ಚು ಪುಸ್ತಕಗಳನ್ನು ಅಭ್ಯಾಸ ಮಾಡಿದ ಕೈದಿ ಈ ಒಂದು ವರ್ಷದಲ್ಲಿ ಕೇವಲ ಒಂದೇ ಒಂದು ಪುಸ್ತಕವನ್ನು ಓದುತ್ತಿರುವುದನ್ನು ನೋಡಿ ಬ್ಯಾಂಕರ್‌ನಿಗೆ ತುಂಬಾ ಆಶ್ಚರ್ಯವಾಯಿತು. ಕ್ರೈಸ್ತಧರ್ಮದ ಪೂರ್ಣ ತಿರುಳು ಈ ಪುಸ್ತಕದಲ್ಲಿ ಅಡಕವಾಗಿತ್ತು.

ಕೈದಿಯು ತನ್ನ ಕೊನೆಯ ಎರಡು ಮೂರು ವರ್ಷಗಳ ಅವಧಿಯಲ್ಲಂತೂ ಪುಸ್ತಕಗಳ ಮೇಲೆ ಪುಸ್ತಕಗಳನ್ನು ಓದಲು ಪ್ರಾರಂಭಿಸಿದ. ಒಮ್ಮೆ ವಿಜ್ಞಾನ ಪುಸ್ತಕಗಳನ್ನು ಓದಿದರೆ ಮತ್ತೊಮ್ಮೆ ಬೈರನ್ ಮತ್ತು ಶೇಕ್ಸಪಿಯರ್ ಮುಂತಾದ ಕವಿಗಳ ಪುಸ್ತಕಗಳನ್ನು ಕೇಳುತ್ತಿದ್ದ. ಕೆಮಿಸ್ಟ್ರಿ ವ್ಯಾಸಂಗ ಮಾಡುತ್ತಿದ್ದವನು ಇದ್ದಕ್ಕಿದ್ದಂತೆ ಔಷಧಿ ಪುಸ್ತಕಗಳನ್ನು ಓದಲು ಪ್ರಾರಂಭಿಸಿದ. ಮಧ್ಯೆ ಮಧ್ಯೆ ತತ್ವಶಾಸ್ತ್ರ ಪುಸ್ತಕಗಳನ್ನೂ ಅಭ್ಯಾಸ ಮಾಡುತ್ತಿದ್ದ. ಹೀಗೆ ಅವನ ಅಭಿರುಚಿ ಬೇರೆ ಬೇರೆಯಾಗಿರುತ್ತಿತ್ತು. ಅವನು ಓದುತ್ತಿದ್ದ ವೇಗವನ್ನು ಗಮನಿಸಿದಾಗ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಸಮುದ್ರದಲ್ಲಿ ಮುಳುಗುತ್ತಿರುವ ನಾವಿಕನೊಬ್ಬ, ತನ್ನ ಜೀವವನ್ನು ರಕ್ಷಿಸಿಕೊಳ್ಳಲು ತೇಲುತ್ತಿರುವ ಮರದ ದಿಮ್ಮಿಗಳನ್ನು ಹಿಡಿದುಕೊಳ್ಳಲು ಒಮ್ಮೆ ಅತ್ತ ಕಡೆಗೂ ಇನ್ನೊಮ್ಮೆ ಇತ್ತ ಕಡೆಗೂ ಕೈ ಚಾಚುವಂತೆ ಕಾಣುತ್ತಿತ್ತು.

ಈ ಎಲ್ಲ ಘಟನೆಗಳನ್ನೂ ಜ್ಞಾಪಿಸಿಕೊಳ್ಳುತ್ತಾ ಬ್ಯಾಂಕರ್ ಚಿಂತಾಕ್ರಾಂತನಾಗಿ ಯೋಚಿಸತೊಡಗಿದ. "ನಾಳೆ 12 ಗಂಟೆಗೆ ಬಿಡುಗಡೆಯಾಗಿ ಅವನು ಸ್ವಾತಂತ್ರ ಪಡೆಯುತ್ತಾನೆ. ನಮ್ಮ ಕರಾರಿನ ಪ್ರಕಾರ ನಾನು ಅವನಿಗೆ ಎರಡು ಲಕ್ಷಗಳನ್ನು ಕೊಡಬೇಕು. ನಾನು ಹಣ ಕೊಟ್ಟದ್ದೇ ಆದರೆ ಅವನು ಶ್ರೀಮಂತನಾಗಿ ಮೆರೆಯುತ್ತಾನೆ. ನಾನು ಮಾತ್ರ ಬೀದಿ ಭಿಕಾರಿಯಾಗುತ್ತೇನೆ."

ಹದಿನೈದು ವರ್ಷಗಳ ಹಿಂದೆ ಅವನ ಶ್ರೀಮಂತಿಕೆಯೆದುರು ಈ ಲಕ್ಷವೆಂಬುದು ಲೆಕ್ಕಕ್ಕೇ ಇರಲಿಲ್ಲ. ಆದರೆ ಈಗ ಕಾಲ ಬದಲಾಗಿದೆ. ಷೇರು ಮಾರುಕಟ್ಟೆಯ ಕುಸಿತದಿಂದಾಗಿ ಇವನ ಲೆಕ್ಕಾಚಾರವೆಲ್ಲ ತಲೆಕೆಳಗಾಗಿತ್ತು. ಷೇರಿನಲ್ಲಿ ತೊಡಗಿಸಿದ ಹಣವೆಲ್ಲಾ ಪಾತಾಳಕ್ಕೆ ಇಳಿದು ಹೋಗಿತ್ತು. ಹಾಗಾಗಿ ಆರ್ಥಿಕವಾಗಿ, ಮಾನಸಿಕವಾಗಿ ಬ್ಯಾಂಕರ್ ಬರಬರುತ್ತಾ ತೀರ ತೀರ ಕುಬ್ಜನಾಗುತ್ತಾ ಹೋಗಿದ್ದ. ಒಂದು ಕಾಲದ ಭಾರೀ ಶ್ರೀಮಂತನಾದ ಈ ಬ್ಯಾಂಕರ್ ಈಗ ಚೇತರಿಸಿಕೊಳ್ಳಲಾಗದ ಸ್ಥಿತಿಗೆ ಬಂದು ತಲುಪಿದ್ದ. ಈಗ ತನ್ನಷ್ಟಕ್ಕೆ ತಾನೇ ಗೊಣಗುಟ್ಟುತ್ತ ತಲೆಯ ಮೇಲೆ ಕೈ ಹೊತ್ತುಕೊಂಡು ಕುಳಿತಿದ್ದಾನೆ: "ಅಯ್ಯೋ. ಈ ವ್ಯಕ್ತಿ ಜೈಲಿನಲ್ಲಿ ಯಾಕೆ ಸಾಯಲಿಲ್ಲ? ಅವನಿನ್ನೂ 40ವರ್ಷಗಳ ಕಾಲ ಬದುಕುತ್ತಾನೆ. ನನ್ನಲ್ಲಿರುವ ಪೂರ್ತಿ ಹಣವನ್ನು ದೋಚಿಕೊಂಡು ಮದುವೆಯಾಗಿ ಸುಖವಾಗಿರುತ್ತಾನೆ. ನಾನು ಮಾತ್ರ ಪ್ರತಿದಿನ ಒಬ್ಬ ಬಡ ಭಿಕ್ಷುಕನಂತೆ

ಅವನ ಕಡೆ ದ್ವೇಷದಿಂದ ನೋಡುತ್ತಿರ ಬೇಕಾಗುತ್ತದೆ."

"ನಾನು ಇಂದು ಈ ಸ್ಥಿತಿಯಲ್ಲಿ ಬದುಕಲು ನೀನೇ ಕಾರಣ. ಅದಕ್ಕಾಗಿ ನಿನಗೆ ತುಂಬಾ ಧನ್ಯವಾದಗಳು. ನಿನಗೇನಾದರೂ ಸಹಾಯ ಬೇಕಿದ್ದರೆ ಕೇಳು. ಖಂಡಿತಾ ಮಾಡುತ್ತೇನೆ" ಎಂದು ಆ ಯುವಕನೇನಾದರೂ ಅಣಕಿಸುವಂತಾದರೆ ತಾನು ಇದ್ದೂ ಸತ್ತಂತಲ್ಲವೇ? ಇಂತಹ ಯೋಚನೆಯಲ್ಲೇ ಬ್ಯಾಂಕರ್ ಮುಳುಗಿರುವಾಗ ಗಡಿಯಾರ ಮೂರು ಗಂಟೆ ಬಾರಿಸುವುರೊಂದಿಗೆ ಸಮಯದ ಸೂಚನೆಯನ್ನು ಕೊಟ್ಟಿತ್ತು. ಎಲ್ಲರೂ ಗಾಢವಾದ ನಿದ್ರೆಯಲ್ಲಿ ಮುಳುಗಿದ್ದಾರೆ. ಹೊರಭಾಗದಲ್ಲಿ ಗಾಳಿ ಬೀಸುವ ರಭಸಕ್ಕೆ ತೋಟದಲ್ಲಿ ಎಲೆಗಳ ಸಪ್ಪಳ ಬಿಟ್ಟರೆ ಮತ್ತೇನೂ ಕೇಳಿಸುತ್ತಿರಲಿಲ್ಲ. ಬ್ಯಾಂಕರ್ ಮನಸ್ಸಿನಲ್ಲೇ ಒಂದು ತೀರ್ಮಾನವನ್ನು ತೆಗೆದುಕೊಂಡ. ಆ ನಿಶ್ಶಬ್ದವಾದ ವಾತಾವರಣದಲ್ಲಿ ಸ್ವಲ್ಪವೂ ಸದ್ದು ಮಾಡದೆ ಹದಿನೈದು ವರ್ಷಗಳಿಂದ ಸುರಕ್ಷಿತವಾದ ಸ್ಥಳದಲ್ಲಿರಿಸಿದ್ದ ಜೈಲಿನ ಬೀಗದ ಕೈಯನ್ನು ಹೊರತೆಗೆದ. ಮೂಲೆಯಲ್ಲಿ ಇರಿಸಿದ್ದ ತನ್ನ ಕೋಟನ್ನು ಧರಿಸಿಕೊಂಡು ಮನೆಯಿಂದ ಹೊರಹೊರಟ.

ತೋಟವನ್ನು ಪೂರ್ಣ ಕತ್ತಲೆ ಮತ್ತು ಚಳಿ ಆವರಿಸಿಕೊಂಡಿತ್ತು. ಮಳೆಯ ಹನಿಗಳು ತೊಟ್ಟಿಕ್ಕುತ್ತಿದ್ದವು. ಜೋರಾಗಿ ಬೀಸುತ್ತಿದ್ದ ಕೊರೆಯುವ ಗಾಳಿ ಮರ-ಗಿಡಗಳಿಗೆ ಸ್ವಲ್ಪವೂ ವಿಶ್ರಾಂತಿಯನ್ನು ಕೊಟ್ಟಿರಲಿಲ್ಲ. ಆ ಕತ್ತಲಿನಲ್ಲಿ ಅಲ್ಲಿಗೆ ಆಗಮಿಸಿದ ಬ್ಯಾಂಕರ್‌ಗೆ ಕತ್ತಲಿನಲ್ಲಿ ಹಾದಿಯೇ ಕಾಣಿಸಲಿಲ್ಲ. ಹಾಗೂ ಹೀಗೂ ಕಷ್ಟಪಟ್ಟು ತೆವಳಿಕೊಂಡು ಹೋಗಿ ಕೈದಿ ಇರುವ ತಾಣವನ್ನು ತಲುಪಿದ. ಎಷ್ಟು ಬಾರಿ ಕರೆದರೂ ಕಾವಲುಗಾರನಿಂದ ಯಾವ ಉತ್ತರವೂ ಬರಲಿಲ್ಲ. ಅವನು ಅಡಿಗೆ ಕೋಣೆಯಲ್ಲೋ ಅಥವಾ ಇನ್ನಾವುದೋ ಕೊಠಡಿಯಲ್ಲಿ ಮಲಗಿ ನಿದ್ರಿಸುತ್ತಿರಬೇಕು. ಅವನು ಯೋಚಿಸಿಕೊಂಡಂತೆ ಕಾರ್ಯ ನಿರ್ವಹಿಸಿದ್ದರೆ ಖಂಡಿತವಾಗಿಯೂ ಆರೋಪ ಕಾವಲುಗಾರನ ಮೇಲೆ ಬರುತ್ತಿತ್ತು.

ಬ್ಯಾಂಕರ್ ತೋಟದ ಮಧ್ಯೆ ಇರುವ ಕೈದಿಯ ಮನೆಯ ಕಡೆಗೆ ಆ ಕತ್ತಲಿನಲ್ಲಿಯೇ ತಡಕುತ್ತ ಹೊರಟ. ಅವನಲ್ಲಿರುವ ಬೆಂಕಿಕಡ್ಡಿಯ ಬೆಳಕೇ ಅವನಿಗೆ ಬೆಳಕಾಗಿತ್ತು ಬಾಗಿಲಿನ ಬಳಿ ಬಂದಾಗ ಅಲ್ಲಿ ಒಂದೇ ಒಂದು ಪ್ರಾಣಿಯ ಸುಳಿವು ಕೂಡಾ ಇರಲಿಲ್ಲ. ಕೈದಿಯ ಕೊಠಡಿಗೆ ಹಾಕಿದ ಬೀಗದ ಮೇಲಿನ ಸೀಲು ಭದ್ರವಾಗಿತ್ತು. ಕಿಟಕಿಯ ಮೂಲಕ ಒಳಗೆ ಇಣುಕಿ ನೋಡಿದಾಗ ಟೇಬಲ್ಲಿನ ಮೇಲೆ ಮೇಣದ ಬತ್ತಿ ಉರಿಯುತ್ತಿತ್ತು. ಕೈದಿ ಟೇಬಲ್ಲಿನ ಎದುರು ಕುಳಿತುಕೊಂಡಿದ್ದ. ಕೂದಲುಗಳ ರಾಶಿಯಲ್ಲಿ ಹುದುಗಿದ್ದ ಅವನ ಬೆನ್ನಿನ ಭಾಗ ಮಾತ್ರ ಕಾಣಿಸುತ್ತಿತ್ತು. ತೆರೆದಿರುವ ಪುಸ್ತಕಗಳು ಕೈದಿಯ ಪಕ್ಕದಲ್ಲಿರುವ ಕುರ್ಚಿಯ ಮೇಲೂ ಮತ್ತು ಮಂಚದ ಮೇಲೂ ಹರಡಿದ್ದವು.

ಕೈದಿಯು ಕೊಂಚವೂ ಮಿಸುಕಾಡುತ್ತಿರಲಿಲ್ಲ. ಹದಿನೈದು ವರ್ಷಗಳ ಜೈಲುವಾಸ ಅವನಿಗೆ ಹಾಗೆ ಕುಳಿತುಕೊಳ್ಳಲು ಕಲಿಸಿರಬೇಕು. ಬ್ಯಾಂಕರ್ ಕಿಟಕಿಯ ಬಾಗಿಲನ್ನು ನಿಧಾನವಾಗಿ ತಟ್ಟಿದ. ಆದರೆ ಕೊಠಡಿಯೊಳಗಿಂದ ಯಾವ ವಿಧವಾದ ಪ್ರತಿಕ್ರಿಯೆಯೂ

ಬರಲಿಲ್ಲ. ಆಗ ಬ್ಯಾಂಕರ್ ಬೀಗದ ಮೇಲಿರಿಸಿದ ಸೀಲನ್ನು ಒಡೆದು ತನ್ನಲ್ಲಿರುವ ಅದರ ಕೀಯ ಸಹಾಯದಿಂದ ಬೀಗವನ್ನು ತೆಗೆದ. ಬೀಗ ತೆರೆದುಕೊಂಡ ಸಪ್ಪಳಕ್ಕೆ ಒಮ್ಮೆಲೇ ಕಿರುಚಿಕೊಂಡು ಕೈದಿ ಹೊರಕ್ಕೆ ಬರುವನೆಂದು ಬ್ಯಾಂಕರ್ ಭಾವಿಸಿದ್ದ. ಆಶ್ಚರ್ಯವೆಂದರೆ ಆ ಸಪ್ಪಳಕ್ಕೆ ಕೈದಿ ತಿರುಗಿ ನೋಡಲೂ ಇಲ್ಲ, ಎದ್ದು ಬರಲೂ ಇಲ್ಲ. ಸುಮಾರು ಹತ್ತು ನಿಮಿಷಗಳ ಕಾಲ ಕಾದರೂ ಏನೂ ಪ್ರಯೋಜನವಾಗಲಿಲ್ಲ. ಏನಾದರೂ ಆಗಲಿ ಎಂದು ಬ್ಯಾಂಕರ್ ಒಳಕ್ಕೆ ಹೋಗಲು ತೀರ್ಮಾನಿಸಿದ.

ಮೇಜಿನ ಮುಂಭಾಗದಲ್ಲಿ ಕೈದಿಯು ನಿಶ್ಯಬ್ದನಾಗಿ ಕುಳಿತುಕೊಂಡಿದ್ದ. ಅವನ ದೇಹವು ಅಸ್ಥಿಪಂಜರದ ಮೇಲೆ ಚರ್ಮದ ಹೊದಿಕೆ ಮಾಡಿದಂತೆ ಕಾಣುತ್ತಿತ್ತು. ಹರಕಲು ಗಡ್ಡ ಮತ್ತು ಜಡೆಬಿದ್ದ ಗುಂಗುರು ಕೂದಲುಗಳ ಮಧ್ಯೆ ಅವನ ಮುಖ ಅದುಮಿಟ್ಟುಕೊಡಂತೆ ಕಾಣಿಸುತ್ತಿತ್ತು. ಹಳದಿಯಾದ ಕಂದು ಬಣ್ಣಕ್ಕೆ ತಿರುಗಿದ ಆ ಮುಖ. ಗುಳಿಬಿದ್ದ ಕೆನ್ನೆಗಳು. ಹರಕು ಹರಕಾಗಿ ಬೆಳೆದ ಗಡ್ಡವನ್ನು ನೋಡಿದಾಗ ನೋಡಿದವರಿಗೆ ನಡುಕ ಹುಟ್ಟಿಸುವಂತಿತ್ತು. ಅವನು ಕೇವಲ 40ವರ್ಷದ ಯುವಕನೆಂದರೆ ನಂಬುವಂತಿರಲಿಲ್ಲ. ಮೇಜಿನ ಮೇಲೆ ಅವನು ಮುದ್ದಾದ ಅಕ್ಷರಗಳಲ್ಲಿ ಬರೆದ ಪತ್ರವೊಂದು ರಾರಾಜಿಸುತ್ತಿತ್ತು.

"ಅಯ್ಯೋ ಪ್ರಾಣಿಯೇ" ಬ್ಯಾಂಕರ್ ತನ್ನಷ್ಟಕ್ಕೆ ತಾನೇ ವಟಗುಟ್ಟುತ್ತಿದ್ದ "ಪಾಪ ಲಕ್ಷದ ಕನಸನ್ನು ಕಾಣುತ್ತಾ ನಿದ್ರಿಸುತ್ತಿರಬೇಕು. ಆಗಲೇ ಅರ್ಧ ಸತ್ತಿರುವ ಈ ವ್ಯಕ್ತಿಯನ್ನು ಮುಗಿಸುವುದು ನನಗೆ ಎಷ್ಟು ಹೊತ್ತಿನ ಕೆಲಸ? ಹಾಸಿಗೆಯ ಮೇಲೆ ತಳ್ಳಿ ದಿಂಬಿನಿಂದ ಕುತ್ತಿಗೆಯನ್ನು ಅಮುಕಿದರೆ ಸಾಕು. ಎಂತಹ ಪರಿಣಿತನಿಗಾದರೂ ಕೊಲೆ ನಡೆದಿದೆಯೆಂದು ಊಹಿಸಲು ಸಾಧ್ಯವಿಲ್ಲ. ಏನೇ ಆಗಲಿ. ಮೊದಲು ಈ ಪತ್ರವನ್ನು ಓದೋಣ" ಎನ್ನುತ್ತಾ ಪತ್ರವನ್ನು ಕೈಗೆತ್ತಿಕೊಂಡ.

"ನಾಳೆ ದಿನ ಹನ್ನೆರಡು ಗಂಟೆಗೆ ಸರಿಯಾಗಿ ನಾನು ಬಿಡುಗಡೆಯಾಗುತ್ತೇನೆ. ಸಮಾಜದ ಬಂಧು ಬಾಂಧವರೊಡನೆ ಕೂಡಿ ಬದುಕಿ ಬಾಳುವ ಅವಕಾಶವನ್ನು ಪಡೆಯುತ್ತೇನೆ. ಅಷ್ಟರೊಳಗೆ ನಾನು ಹೊರಕ್ಕೆ ಹೋದರೆ ನಮ್ಮ ಕರಾರನ್ನು ಮುರಿದಂತಾಗುತ್ತದೆ. ಅದಕ್ಕೋಸ್ಕರವಾಗಿಯೇ ನಾನು ಈ ಕೊಠಡಿಯನ್ನು ಸೂರ್ಯೋದಯವಾಗುವದಕ್ಕಿಂತಲೂ ಕೆಲವು ತಾಸುಗಳ ಮುಂಚೆ ಬಿಡುತ್ತೇನೆ. ಹಾಗಾಗಿ ನಿನಗೆ ಈ ಸಂದರ್ಭದಲ್ಲಿ ಕೆಲವು ವಿಷಯಗಳನ್ನು ದೇವರ ಸಾಕ್ಷಿಯಾಗಿ ಹೇಳಲು ಬಯಸುತ್ತೇನೆ.

ಸದ್ಭಾವನೆ, ಸತ್ಕಾರ್ಯ. ಸನ್ಮಾರ್ಗದಲ್ಲಿ ನಮಗೆ ಬೇಕಾದ ಸ್ವಾತಂತ್ರ್ಯ, ಬದುಕು, ಎಲ್ಲವೂ ಅಡಗಿವೆ ಎಂಬುದನ್ನು ನಿನ್ನ ಪುಸ್ತಕಗಳಿಂದ ತಿಳಿದುಕೊಂಡೆ. ಈ ಜಗತ್ತಿನಲ್ಲಿರುವ ಜೀವಿಗಳ ಬಗ್ಗೆ ಕಳೆದ ಹದಿನೈದು ವರ್ಷಗಳಿಂದ ಓದುತ್ತಲೇ ಇದ್ದೇನೆ. ಬಾಹ್ಯವಾಗಿ ನಾನು ಈ ಅವಧಿಯಲ್ಲಿ ಜಗತ್ತಿನ ಜನರನ್ನು ನೋಡದೇ ಇರಬಹುದು. ಆದರೆ ನೀನು ಒದಗಿಸಿದ ಪುಸ್ತಕಗಳಲ್ಲಿ ಅವುಗಳ ಸೌಜನ್ಯತೆಯ ದ್ರಾಕ್ಷಾರಸದ ಸವಿಯನ್ನು

ಸವಿಯುತ್ತಲೇ ಬಂದಿದ್ದೇನೆ. ಹಕ್ಕಿಗಳೊಂದಿಗೆ ಜಿಗಿದಿದ್ದೇನೆ ಆಡಿದ್ದೇನೆ. ಕ್ರೂರ ಮೃಗಗಳನ್ನು ಬೇಟೆಯಾಡಿದ್ದೇನೆ ಹಾಗೂ ಪ್ರೇಯಸಿಯರೊಂದಿಗೆ ನಲಿದಾಡಿದ್ದೇನೆ. ನಿನ್ನ ಕವಿಗಳು, ಕಾದಂಬರಿಕಾರರು,ಮತ್ತು ವಿವಿಧ ರಂಗದ ಪ್ರತಿಭಾನ್ವಿತರು ನನ್ನಲ್ಲಿರುವ ಅಂಧಕಾರವನ್ನು ತೊಲಗಿಸಿ ಅಲ್ಲಿ ಜ್ಞಾನದ ಜ್ಯೋತಿಯನ್ನು ತುಂಬಿದ್ದಾರೆ. ನನ್ನ ಮನಸ್ಸನ್ನು, ಹೃದಯವನ್ನು ಸುಂದರವಾದ ಕತೆಗಳಿಂದ, ಕವನಗಳಿಂದ ತುಂಬಿ ತೇಲಾಡಿಸಿದ್ದಾರೆ. ನಿನ್ನ ಪುಸ್ತಕಗಳ ಮೂಲಕ ಜಗತ್ತಿನಾದ್ಯಂತ ದೊಡ್ಡ ದೊಡ್ಡ ಪರ್ವತಗಳನ್ನೇರಿ ಸೂರ್ಯಾಸ್ತ ಮತ್ತು ಸೂರ್ಯೋದಯದ ಸವಿಯನ್ನು ಸವಿದಿದ್ದೇನೆ. ಈ ಪರ್ವತಗಳ ತುದಿಯಿಂದ ಮೋಡಗಳ ಮಧ್ಯೆ ತೂರಾಡಿದ್ದೇನೆ. ಹಚ್ಚ ಹಸುರಾದ ಕಾನನವನ್ನು, ವಿಶಾಲವಾದ ಮೈದಾನವನ್ನು, ತುಂಬಿ ಹರಿಯುವ ನದಿಗಳನ್ನೂ, ಸರೋವರಗಳನ್ನೂ, ಸುಂದರವಾದ ಪಟ್ಟಣಗಳನ್ನೂ, ನೋಡಿ ಆನಂದಿಸಿದ್ದೇನೆ. ಅನೇಕ ಪವಾಡಗಳನ್ನು ಮಾಡಿದ್ದೇನೆ, ತಳವಿಲ್ಲದ ಕಂದಕಗಳಿಗೆ ಧುಮುಕಿದ್ದೇನೆ, ಹೊಸ ಹೊಸ ಧರ್ಮಗಳನ್ನು ಸ್ಥಾಪಿಸಿದ್ದೇನೆ. ರಾಜ್ಯಗಳನ್ನು ಗಳಿಸಿದ್ದೇನೆ. ಒಂದೇ, ಎರಡೇ.....

ನಿನ್ನ ಪುಸ್ತಕಗಳು ನನಗೆ ಜ್ಞಾನದ ಭಂಡಾರವನ್ನೇ ದಯಪಾಲಿಸಿವೆ. ಅನಾದಿ ಕಾಲದಿಂದಲೂ ಅವಿಶ್ರಾಂತವಾಗಿ ಮಾನವನು ಸಂಪಾದಿಸಿದ ಜ್ಞಾನವನ್ನೆಲ್ಲಾ ಸಂಗ್ರಹಿಸಿ ನನ್ನ ಈ ಚಿಕ್ಕ ಮೆದುಳಿನಲ್ಲಿ ತುಂಬಿಕೊಂಡಿದ್ದೇನೆ. ನಿಮ್ಮೆಲ್ಲರಿಗಿಂತ ನಾನು ಬಹಳ ಬಹಳ ತಿಳಿದುಕೊಂಡಿದ್ದೇನೆ. ನಿನ್ನ ಬಗ್ಗೆ ಒಂದೆರಡು ಮಾತು ಹೇಳುತ್ತೇನೆ, ಕೇಳು. ನಾನೇ ಬುದ್ಧಿವಂತ, ನಾನೇ ಶ್ರೀಮಂತ, ನಾನೇ ಶಕ್ತಿವಂತ ಎಂದು ದುರಹಂಕಾರ ಪಡಬೇಡ. ಸಾವು ಇವೆಲ್ಲವುಗಳನ್ನು ನಿನ್ನಿಂದ ಅಳಿಸಿ ಹಾಕುತ್ತದೆ. ನೀನು ತಪ್ಪು ದಾರಿಯಲ್ಲಿ ನಡೆಯುತ್ತಿದ್ದೀಯ.ಅಸತ್ಯವನ್ನು ಸತ್ಯವೆಂದು, ಕೊಳಕನ್ನು ಸೌಂದರ್ಯವೆಂದು ತಪ್ಪಾಗಿ ಭಾವಿಸುತ್ತಿದ್ದೀಯ. ಜಗತ್ತನ್ನೇ ಸ್ವರ್ಗವೆಂದು ಭಾವಿಸಿರುವೆ. ನಿನ್ನ ಮೂರ್ಖತನಕ್ಕೆ ಏನೆಂದು ಹೇಳಬೇಕೆಂದು ತಿಳಿಯುತ್ತಿಲ್ಲ. ನಿನ್ನನ್ನು ಅರ್ಥಮಾಡಿಕೊಳ್ಳುವ ಅವಶ್ಯಕತೆಯೂ ನನಗಿಲ್ಲ

ಈ ಜಗತ್ತಿನಲ್ಲಿರುವ ಎಲ್ಲಾ ವಸ್ತುಗಳನ್ನೂ ನಾನು ಸಾರಾಸಗಟಾಗಿ ತಿರಸ್ಕರಿಸುತ್ತೇನೆ ಒಂದು ಕಾಲದಲ್ಲಿ ನಾನು ಎರಡು ಲಕ್ಷ ಮಹಾ ದೊಡ್ಡ ಆಸ್ತಿಯೆಂದು ಭಾವಿಸಿದ್ದೆ. ಈಗ ಎಲ್ಲ ವಸ್ತುಗಳಂತೆ ಅದೂ ಕೂಡಾ ಕ್ಷುಲ್ಲಕ ಎಂಬುದನ್ನು ತೋರಿಸುವುದಕ್ಕಾಗಿ ನನ್ನ ಬಿಡುಗಡೆಯ ಅವಧಿಗಿಂತ ಐದು ಗಂಟೆಗಳು ಮುಂಚಿತವಾಗಿ ಈ ಜೈಲಿನಿಂದ ತಪ್ಪಿಸಿಕೊಂಡು ಹೋಗುತ್ತಿದ್ದೇನೆ."

ಪತ್ರವನ್ನು ಓದಿ ಮುಗಿಸಿದ ಬ್ಯಾಂಕರ್ ಅದನ್ನು ಹಾಗೇ ಮೇಜಿನ ಮೇಲೆ ಇಡುತ್ತಾ ನಿದ್ರಿಸುತ್ತಿದ್ದ ಕೈದಿಯ ತಲೆಗೆ ಒಂದು ಮುತ್ತಿಟ್ಟು ಅಳುತ್ತಾ ಹಾಗೇ ತನ್ನ ಮನೆಯ ಕಡೆಗೆ ಹೆಜ್ಜೆ ಹಾಕಿದ. ಷೇರು ಪೇಟೆಯ ಧಾರಣೆ ಪಾತಾಳಕ್ಕಿಳಿದಾಗಲಾಗಲೀ, ಆಸ್ತಿ ಕಳೆದುಕೊಂಡು ಬೀದಿಭಿಕಾರಿಯಾದಾಗಲಾಗಲೀ ಅಥವಾ ಇನ್ನಾವುದೇ ಸಂದರ್ಭದಲ್ಲಿ ಎದೆಗುಂದದ ಬ್ಯಾಂಕರ್ ಇಂದು ಸಂಪೂರ್ಣವಾಗಿ ಕುಸಿದುಹೋಗಿದ್ದ.

ಅಲ್ಲಿಂದ ಹೊರಟು ಮನೆಗೆ ಹೋಗಿ ಮಲಗುವಾಗ ಗಳಗಳ ಅಳುವುದಕ್ಕೆ ಪ್ರಾರಂಭಿಸಿದ್ದ. ಸುಮಾರು ಮೂರು ನಾಲ್ಕು ಗಂಟೆಗಳ ಕಾಲ ನಿದ್ರೆ ಅವನ ಬಳಿ ಸುಳಿಯಲಿಲ್ಲ. ಮಾರನೇ ದಿನ ಬೆಳಿಗ್ಗೆ ಕಾವಲುಗಾರ ಏದುಸಿರು ಬಿಡುತ್ತಾ ಬಂದು ಕಾರಾಗೃಹದಲ್ಲಿರುವ ಕೈದಿ ಬೆಳಗ್ಗೆ ಕಿಟಕಿ ಮುರಿದುಕೊಂಡು ಹೊರಕ್ಕೆ ಓಡುತ್ತಿರುವುದನ್ನು ತಾವೆಲ್ಲರೂ ನೋಡಿರುವುದಾಗಿ ತಿಳಿಸಿದ. ಬ್ಯಾಂಕರ್ ತಕ್ಷಣವೇ ಕಾವಲುಗಾರನ ಜೊತೆಯಲ್ಲಿ ಕಾರಾಗೃಹಕ್ಕೆ ಹೋಗಿ ವಿಷಯವನ್ನು ಖಚಿತಪಡಿಸಿಕೊಂಡ. ಈ ವಿಷಯಗಳನ್ನು ಅನವಶ್ಯಕವಾಗಿ ಮಾತನಾಡಲು ಇಚ್ಛಿಸದ ಬ್ಯಾಂಕರ್ ಮೇಜಿನ ಮೇಲಿದ್ದ ಪತ್ರವನ್ನು ತೆಗೆದುಕೊಂಡು ನಿಧಾನವಾಗಿ ತನ್ನ ಮನೆಯ ಕಡೆಗೆ ಹೆಜ್ಜೆ ಹಾಕಿದ.

* * *

# ಪರದೇಶದಲ್ಲಿ

ಮೂಲ : ಅರ್ನೆಸ್ಟ್ ಹೆಮಿಂಗ್ವೆ ಅನು : ನೀಳಾದೇವಿ

[ಅರ್ನೆಸ್ಟ್ ಹೆಮಿಂಗ್ವೆ ಅಮೆರಿಕದ ಇಲಿಲಾಯ್ ಪ್ರಾಂತದಲ್ಲಿ 1898ರಲ್ಲಿ ಜನಿಸಿದ. Fare well to Arms" ಈತನ ಪ್ರಸಿದ್ಧ ಕಾದಂಬರಿ ಇದಲ್ಲದೆ." Death in the Afternoon," winners take nothing" ಮೊದಲಾದ ಪ್ರಸಿದ್ಧ ಕಾದಂಬರಿಗಳ ರಚನಕಾರ ಇವನು. ಭಾವತೀಕ್ಷ್ಣತೆ ಮತ್ತು ಒತ್ತಡ ಸಂದರ್ಭಗಳನ್ನು ಮೊನಚಾಗಿ, ಅವರೆ ಸರಳ ಶೈಲಿಯಲ್ಲಿ ರಚಿಸುವುದರಲ್ಲಿ ಈತನ ಹೆಚ್ಚುಗಾರಿಕೆ ಇದೆ.

ಈ ಕಥೆಯನ್ನು" "The words greatest Short Stories" ಸಂಗ್ರಹದಿಂದ ಆಯ್ದುಕೊಳ್ಳಲಾಗಿದೆ. ಈ ಕಥೆ ಅವನ "In another country"ಯ ಅನುವಾದ.]

ಶರತ್ಕಾಲ ಬಂದರೂ ಮುಗಿಯದೇ ಹೋದ ಈ ಯುದ್ಧದಲ್ಲಿ ಸದ್ಯದ ಪರಿಸ್ಥಿತಿಯಲ್ಲಿ ನಾವು ಸಕ್ರಿಯವಾಗಿ ಭಾಗಿಗಳಾಗಲು ಸಾಧ್ಯವಾಗಿರಲಿಲ್ಲ. ಈ ಇಟಲಿ ದೇಶದ ಮಿಲನ್ ನಗರದಲ್ಲಿ ಚಳಿ ಪ್ರಾರಂಭವಾಗಿ, ಕತ್ತಲೆ ಬೇಗ ಕವಿಯುತ್ತಿತ್ತು. ಬೀದಿಯ ವಿದ್ಯುತ್ ಬೆಳಕು ಕತ್ತಲಲ್ಲಿ ಮಿಣುಕಿದ್ದಾಗ ಕಿಟಕಿಯಾಚೆ ನೋಡುವುದೇ ಒಂದು ವಿಶಿಷ್ಟವಾದ ಅನುಭವ. ಬೀದಿಯ, ಅಂಗಡಿಗಳ ಹೊರಗೆ ಬೇಟೆಯಾಡಿದ್ದ ಪ್ರಾಣಿಗಳ ದೇಹಗಳನ್ನು ನೇತು ಹಾಕಿರುತ್ತಿದ್ದರು. ಅಲ್ಲಿದ್ದ ನರಿಶರೀರದ ಮೇಲೆ ಒಣ ಹಿಮ ಧೂಳಿನಂತೆ ಬೀಳುತ್ತಿರುತ್ತಿತ್ತು. ಗಾಳಿ ಬೀಸಿದಾಗಲೆಲ್ಲಾ ಅವರ ಬಾಲ ತೂಗಾಡುತ್ತಿತ್ತು. ಜಿಂಕೆಯ ಒಡಲು 'ಬಿಡಕ್ಕಾಗಿ' ಭಾರವಾಗಿ ಅವರೆ ಖಾಲಿಯಾಗಿ ನೇತಾಡುತ್ತಿತ್ತು. ಇದರ ನಡುವೆಯೂ ಸಹ ಕೆಲವು ಸಣ್ಣ-ಪುಟ್ಟ ಪಕ್ಷಿಗಳು, ಗಾಳಿ ಹೊಡೆತದಲ್ಲೂ ರೆಕ್ಕೆ ಬಿಚ್ಚಿಕೊಂಡು ಪುರ್ರನೆ ಹಾರಿ ಬರುತ್ತಿದ್ದವು. ಪರ್ವತದಿಂದ ಬೀಳುವ ಹಿಮಗಾಳಿ ವಿಪರೀತ ಚಳಿ ತರುತ್ತಿದ್ದರೂ, ನಾವು, ಯುದ್ಧದ ಗಾಯಾಳುಗಳು ಪ್ರತಿನಿತ್ಯ ಮಧ್ಯಾಹ್ನದ ವೇಳೆ ಚಿಕಿತ್ಸೆಗಾಗಿ ಆಸ್ಪತ್ರೆಗೆ ಬರುತ್ತಿದ್ದೆವು. ಆ ಊರಿನ ಬೇರೆ ಬೇರೆ ಹಾದಿಗಳನ್ನು ಅನುಕ್ರಮಿಸುತ್ತಾ, ಮುಸ್ಸಂಜೆಯ ಮುಂದೆ ಆಸ್ಪತ್ರೆಯನ್ನು ತಲುಪಿ ಬಿಡುತ್ತಿದ್ದೆವು.

ನಾಲೆಯ ಬದಿಗೇ ಎರಡು ರಸ್ತೆಗಳಿದ್ದವು. ಅವು ಬಳಸು ದಾರಿಗಳಾಗಿದ್ದವು. ಎರಡು ಸೇತುವೆಗಳನ್ನು ದಾಟಿಯೇ ಸೈನಿಕ ಆಸ್ಪತ್ರೆ ತಲುಪಬೇಕಾಗುತ್ತಿತ್ತು. ಮೂರನೆಯ ಸೇತುವೆ ಒಂದಿತ್ತು. ಅಲ್ಲಿ ಮುದುಕಿಯೊಬ್ಬಳು 'ಚೆಸ್ಟ್‌ನಟ್' ಬೀಜಗಳನ್ನು ಬಿಸಿ ಬಿಸಿಯಾಗಿ

ಹುರಿದು ಮಾರುತ್ತಾ ಕುಳಿತಿರುತ್ತಿದ್ದಳು. ಅವಳ ಸಿಗಡಿ ಒಲೆ ಮುಂದೆ ನಿಂತರೆ ಚಳಿಗೆ ಹಿತವಾಗುತ್ತಿತ್ತು. ಬಿಸಿ ಬೀಜ ಜೇಬಿಗೆ ತುಂಬಿಕೊಂಡಾಗ ಬೆಚ್ಚಗಾಗುತ್ತಿತ್ತು. ಆಸ್ಪತ್ರೆ ಕಟ್ಟಡ ಬಹಳ ಹಳೆಯದಾದರೂ ನೋಡಲು ಅಂದವಾಗುತ್ತಿತ್ತು. ಒಂದು ಗೇಟಿನಿಂದ ಹೊರಕ್ಕೆ ಸುಂದರವಾದ ಅಂಗಳ. ಅದರಾಚೆ ಮತ್ತೊಂದು ಗೇಟು ಇತ್ತು. ಸಾಧಾರಣವಾಗಿ ಸತ್ತವರ ಶವಯಾತ್ರೆ ಅಲ್ಲಿದ್ದ ಅಂಗಳದಿಂದಲೇ ಹೊರಡುತ್ತಿತ್ತು.

ಈ ಹಳೇ ಆಸ್ಪತ್ರೆಯ ಆಚೆಗೆ ಹೊಸದಾಗಿ ನಿರ್ಮಿಸಿದ ದೊಡ್ಡ ಇಟ್ಟಿಗೆ ಗುಡಾರವಿತ್ತು. ಇಲ್ಲಿ ನಾನಾರೀತಿ ಚಿಕಿತ್ಸೆ ಮಾಡುವ ಉಪಕರಣ ಯಂತ್ರಗಳನ್ನು ಹೊರರೋಗಿಗಳಿಗಾಗಿ ಇಟ್ಟಿದ್ದರಿಂದ. ನಾವೆಲ್ಲಾ ಅಲ್ಲಿಗೇ ಹೋಗಿ ಕೂಡಿಕೊಳ್ಳುತ್ತಿದ್ದೆವು ಮತ್ತು ಸೌಹಾರ್ದಯುತವಾದ ಮಾತುಕತೆಯಾಡುತ್ತ ನೆಮ್ಮದಿ ಪಡೆದುಕೊಳ್ಳುತ್ತಿದ್ದೆವು.

ಕಾಲಿನ ಚಿಕಿತ್ಸೆಗಾಗಿ ನಾನು ಕುಳಿತಿದ್ದ ಯಂತ್ರದ ಬಳಿ ಒಬ್ಬ ಡಾಕ್ಟರು ಬಂದು ಪ್ರಶ್ನಿಸಿದ,

"ಯುದ್ಧದಲ್ಲಿ ಭಾಗಿಯಾಗುವ ಮುಂಚೆ ನೀನು ಏನಾಗಲು ಇಚ್ಛಿಸಿದ್ದೆ? .... ಯಾವುದಾದರೂ ಕ್ರೀಡಾಪಟುವಾಗ ಬಯಸಿದ್ದೆಯಾ?...."

ಕುಂಟನಾದ ನಾನೆಂದೆ, "ಹೌದು.... ಫುಟ್‌ಬಾಲ್ ನನ್ನ ಮೆಚ್ಚಿನ ಕ್ರೀಡೆಯಾಗಿತ್ತು..."

"ಒಳ್ಳೇದು!..." ಅವನೆಂದ. ಚಿಕಿತ್ಸೆ ಮುಗಿದ ಮೇಲೆ ನೀನು ಮುಂಚಗಿಂತ ಚೆನ್ನಾಗಿ ಫುಟ್‌ಬಾಲ್ ಆಡಬಹುದು!"

ನನ್ನ ಕಾಲಿನ ಮಂಡಿ ಮಡುಚುವುದಕ್ಕಾಗುತ್ತಿರಲಿಲ್ಲ. ಮೀನಖಂಡವಿರದ ನನ್ನ ಕಾಲು ಮಂಡಿಯಿಂದ ಹಿಮ್ಮಡಿತನಕ ನೆಟ್ಟಗೆ ಬಿಮ್ಮನೆ ಸೆಟೆದು ನಿಂತಿರುವುದನ್ನು ಈ ಟ್ರೈಸಿಕಲ್ ನಂತಹ ಯಂತ್ರ ಸರಿಪಡಿಸಿ, ಕಾಲಿಗೆ ಚಾಲನೆ ತರಲು ಹೆಣಗುತ್ತಿತ್ತು. ನನ್ನ ಕಾಲು ಮಾತ್ರ ಯಂತ್ರಕ್ಕೆ ಸಹಕರಿಸುತ್ತಿರಲಿಲ್ಲ. ಕಾಲು ಸರಿಪಡಿಸುವ ಬದಲಾಗಿ ಆ ಯಂತ್ರ ಸೋತು. ಸೋಲು ಒಪ್ಪಿಕೊಳ್ಳಲು ತಯಾರಾಗಿಯೇ ಇತ್ತು. ಡಾಕ್ಟರ್ ಮಾತ್ರ ಹೇಳುತ್ತಿದ್ದ,

"ಇದೆಲ್ಲಾ ಸರಿಯಾಗುತ್ತೆ ಬಿಡು... ನೀನು ಅದೃಷ್ಟಶಾಲಿ.... ಚಾಂಪಿಯನ್‌ನಂತೆ ಮತ್ತೆ ಫುಟ್‌ಬಾಲ್ ಆಡುತ್ತೀಯಾ.."

ನನ್ನ ಮುಂದಿದ್ದ ಮಷಿನ್ನಿನಲ್ಲಿ ಉಪಚಾರ ಪಡೆಯುತ್ತಿದ್ದ ಮೇಜರ್‌ನ ಕೈ ಊನಗೊಂಡು. ಮಗುವಿನ ಕೈನಷ್ಟು ಗಿಡ್ಡವಾಗಿ ಹೋಗಿತ್ತು. ಎರಡು ಚರ್ಮದ ಪಟ್ಟಿಯಲ್ಲಿ ಕಟ್ಟಿ ಹಾಕಿದ್ದ ಅವನ ಮೋಟುಕೈ ಡಾಕ್ಟರು ಪರೀಕ್ಷಿಸುತ್ತಿದ್ದಾಗ ಆ ಗಾಯಾಳುವೀರ ತನ್ನ ಚಲನರಹಿತ ಬೆರಳನ್ನು ಅಲುಗಾಡಿಸಲು ಪ್ರಯತ್ನಿಸುತ್ತಾ, ನನ್ನತ್ತ ತನ್ನ ಕುಂಟಕಣ್ಣು ಮಿಟುಕಿಸುತ್ತಾ ಡಾಕ್ಟರನ್ನು ಕೇಳಿದ,

"ನಾನೂ ಫುಟ್‌ಬಾಲ್ ಆಡಬಹುದೇ ಕ್ಯಾ ಡಾಕ್ಟರ್?..."

ಹಿಂದೆ, ಅದೇ ಕೈ ಕತ್ತಿ ಹಿಡಿದು. ಕತ್ತಿವರಸೆ ಪ್ರವೀಣ ಅವನಾಗಿದ್ದ. ಈಗ ಡಾಕ್ಟರ್ ತನ್ನ ಕೋಣೆಗೆ ಹೋಗಿ ಒಂದೆರಡು ಫೋಟೊ ತಂದು ತೋರಿಸಿದ. ಅವರಲ್ಲಿ ಈ

ಮೇಜರ್‌ನಂತೆಯೇ ದೊಡ್ಡದಾಗಿ ಬಿಟ್ಟ ಕೈನ ಒಂದು ಚಿತ್ರವಿತ್ತು. ಆ ಕೈಗೆ ಯಂತ್ರದ ಉಪಚಾರ ಮಾಡಿಯಾದ ಮೇಲೆ ಹೆಚ್ಚುಕಮ್ಮಿ ಸಹಜ ರೀತಿಯಲ್ಲಿ ಕೈ ಉತ್ತಮವಾದದ್ದರ ಮತ್ತೊಂದು ಫೋಟೋನೂ ಜೊತೆಗಿತ್ತು. ಮೇಜರ್ ಆ ಎರಡು ಫೋಟೋಗಳನ್ನು ಚೆನ್ನಾಗಿ ಗಮನಿಸಿ ನಂತರ ಡಾಕ್ಟರನ್ನು ಪ್ರಶ್ನಿಸಿದ.

"ಏಕೆ ಕೈಗೆ ಏಟು ಬಿದ್ದಿತ್ತು?...."

"ಫ್ಯಾಕ್ಟರಿಯಲ್ಲಿ ಆದ ಅಪಘಾತದಿಂದ..."

"ಓ!... ಹಾಗೇನು?!.... ಹಾಗೇನು!!..." ಕುತೂಹಲದಿಂದ ಉದ್ಗರಿಸಿಯಾದ ಮೇಲೆ, ಫೋಟೋಗಳಿಂದ ಕಣ್ಣು ಕಿತ್ತುಕೊಂಡ ಡಾಕ್ಟರ್ ಕೇಳಿದ "ಈಗ ನಿಮಗೂ ಧೈರ್ಯವಾಯಿತೆ?...."

"ಇಲ್ಲ." ಗಾಯಾಳು ಮೇಜರ್ ಉತ್ತರ ಕೊಟ್ಟ.

ನನ್ನ ಓರಗೆಯ ಮೂವರು ಯುವಕರು ಅಲ್ಲಿ ಬರುತ್ತಿದ್ದರು. ಅವರೆಲ್ಲಾ ಇದೇ ಮಿಲನ್ ಊರಿನವರು. ಆ ಪೈಕಿ ಒಬ್ಬ ಲಾಯರ್, ಮತ್ತೊಬ್ಬ ಸಿಪಾಯಿ ಆಗಲು ಇಚ್ಛಿಸಿದ್ದವರು. ನಮ್ಮ ಚಿಕಿತ್ಸಾ ವೇಳೆ ಮುಗಿದ ಮೇಲೆ ನಾವೆಲ್ಲಾ ಒಟ್ಟಾಗಿ ಕೂಡಿಕೊಂಡು 'ಕೆಫೆ ಕೋವಾ'ಗೆ ಹೋಗುತ್ತಿದ್ದೆವು. ನಾಲ್ವರೂ ಕೂಡ ಕಮ್ಯುನಿಸ್ಟರಿದ್ದ ವಸತಿ ಹಾದೇ ಹೋಗಬೇಕಾಗುತ್ತಿತ್ತು.

ನಾವು ಆಫೀಸರಾದ್ದರಿಂದ ಆ ವಸತಿಯವರು ನಮ್ಮನ್ನು ದ್ವೇಷಿಸುತ್ತಿದ್ದರು. ಹೀಗಿರುವಾಗ, ಕೆಲವೊಮ್ಮೆ ಮತ್ತೊಬ್ಬಾತ ಬಂದು ನಮ್ಮ ಜೊತೆಗೂಡಿಕೊಂಡು ನಮ್ಮನ್ನು ಪಂಚಮರ ಗುಂಪಾಗಿಸಿ ಬಿಡುತ್ತಿದ್ದ. ಈ ಯುವಕನ ಮೂಗು ಕತ್ತರಿಸಿ ಹೋಗಿದ್ದರಿಂದ ಸದಾ ಒಂದು ತುಂಡುಬಟ್ಟೆಯಿಂದ ಮುಖ ಮುಚ್ಚಿಕೊಳ್ಳುತ್ತಿದ್ದ. ಆತ ಯುದ್ಧದಲ್ಲಿ ಮುಂದಾಳಾಗಿದ್ದರಿಂದ ಮೊದಮೊದಲಿಗೇ ಗಾಯಾಳುವಾಗಿ ಬಿಟ್ಟಿದ್ದ. ಆತನ ಮುಖ ಪೂರ್ತಿ ಜಜ್ಜಿ ಹೋಗಿತ್ತು ಚಿಕಿತ್ಸೆಗೆ ಒಳಪಟ್ಟರೂ ಅವನ ಮೂಗು ಮಾತ್ರ ಹಿಂದಿನಂತೆ ಆಗಲೇ ಇಲ್ಲ. ತಕ್ಷಣ ಅಮೆರಿಕಾಗೆ ಹೋಗಿ ಅಲ್ಲಿ ಬ್ಯಾಂಕೊಂದರಲ್ಲಿ ನೌಕರಿಗೆ ಸೇರಿದ್ದ. ಇದೆಲ್ಲಾ ಬಹಳ ಹಿಂದಿನ ಮಾತು. ಆಗ, ಹೀಗೆ ಯುದ್ಧ ಮರುಕಳಿಸುವ ಬಗ್ಗೆ ಯಾರಿಗೂ ಏನೂ ತಿಳಿದಿರಲಿಲ್ಲ. ಈಗ, ಮತ್ತೊಂದು ಯುದ್ಧವಾದರೂ ನಾವು ಹೋಗಿ ಹೋರಾಡುವ ಪರಿಸ್ಥಿತಿಯಲ್ಲಿರಲಿಲ್ಲ. ಕಪ್ಪು ತುಂಡುಬಟ್ಟೆಯಲ್ಲಿ ಮುಖ ಮುಚ್ಚಿಕೊಂಡಿರುತ್ತಿದ್ದ ಅವನೊಬ್ಬನ ಹೊರತು, ಮಿಕ್ಕ ನಮಗೆಲ್ಲಾ 'ಶೌರ್ಯ ಪ್ರಶಸ್ತಿ'ಗಳು ದೊರೆತಿದ್ದವು. ಅವನು ಡ್ಯೂಟಿ ಸೇರಿದ ಕೆಲವೇ ನಿಮಿಷಗಳಲ್ಲಿ ಗಾಯಾಳುವಾಗಿ ಬಿಟ್ಟಿದ್ದರಿಂದ, ನಿಯಮದ ಪ್ರಕಾರ 'ಖಾಯಂ' ಆಗಿರದ ಆತನಿಗೆ ಪ್ರಶಸ್ತಿ ಸಿಗುವುದು ಅಸಾಧ್ಯವಾಗಿತ್ತು.

ನಮ್ಮೊಂದಿಗಿರುತ್ತಿದ್ದ ಆ ಸಪೂರವಾದ ಬಿಳಿಚಿಕೊಂಡಿದ್ದ ಲಾಯರ್ ಒಬ್ಬ ಲೆಫ್ಟಿನೆಂಟ್ ಆಗಿದ್ದ. ಅವನಿಗೆ ಮೂರು ಮೆಡಲುಗಳು ದೊರಕಿದ್ದವು. ನಮಗೆಲ್ಲಾ ದೊರೆತದ್ದು ತಲಾ ಒಂದೊಂದು ಮೆಡಲುಗಳು. ಆ ಲೆಫ್ಟಿನೆಂಟ್, ಯುದ್ಧಕಾಲದ

ಮಾರಣ ಹೋಮದ ನಡುವೆ ಬಹು ಕಾಲವಿದ್ದು, ನೋಡುತ್ತಾ ಹೋರಾಟ ನಡೆಸಿದ್ದರ ಪರಿಣಾಮವಾಗಿಯೋ ಏನೊ, ಈಗವನು ಒಂದು ರೀತಿ ಏಕಾಂತತೆ ಇಚ್ಛಿಸುತ್ತಿದ್ದ. ಮಧ್ಯಾಹ್ನ ಕಳೆದ ವೇಳೆಯಲ್ಲಿ ಆಸ್ಪತ್ರೆಯಲ್ಲಿ ಸೇರುವುದಷ್ಟೇ ನನಗೆ ಸದಾಕಾಲ ನಾಚಿಕೆ ತರುತ್ತಿರಲಿಲ್ಲವಾದರೂ, ಪೇಯ ಕುಡಿದ ವೇಳೆ ನನ್ನ ಶೌರ್ಯ ಕೊಚ್ಚಿಕೊಳ್ಳುತ್ತಿದ್ದರೂ, ಖಾಲಿರಸ್ತೇಲಿ ನಡೆವಾಗ, ಮುಚ್ಚಿದ ಸಾಲಂಗಡಿ ಬಳಿ ಬೀದಿದೀಪ ಬೆಳಕು ಚೆಲ್ಲಿದಾಗ, ಅಲ್ಲಿ ನಿಂತಾಗ ಮತ್ತು ಒಳ ಯೋಚನೆ ಮಾಡಿಕೊಳ್ಳುವಾಗ ಒಳಗುಟ್ಟು ತೆರೆದುಕೊಳ್ಳುತ್ತಿತ್ತು. ಆಗ ಮಿಕ್ಕ ಶೌರ್ಯ ಪದಕ ಪಡೆದವರ ನೆನಪು ಮಾಡಿಕೊಳ್ಳುತ್ತೇನೆ. ನಾನು ಅವರಂತೆ ಸಾವಿಗೆ ಎದುರು ನಿಂತು ಎಂದೂ ಹೋರಾಡದಿದ್ದರ ಸತ್ಯ ನೆನಪಾಗುತ್ತದೆ. ನನಗೆ ಸಾವೆಂದರೆ ಬಹಳ ಭಯ. ನಾನೊಬ್ಬನೇ ರಾತ್ರಿ ವೇಳೆ ಹಾಸಿಗೆ ಮೇಲೆ ಹೊರಳಾಡುತ್ತಾ ಇರುವಾಗ ಸಾವಿನ ಭಯಾನಕತೆ ಆವರಿಸಿ, ನಾನು ಮತ್ತೆ ರಣರಂಗದ ಮುಂಚೂಣಿಯಲ್ಲಿ ಹೋಗುವುದನ್ನು ನೆನೆಸಿಕೊಂಡೇ ನಡುಗುತ್ತೇನೆ. ಆ ನನ್ನ ಪರಿಚಯದ ಮೂವರೂ ಡೇಗೆಗಳಂತಿದ್ದರು. ಬೇಟೆ ಅರಿತಿಲ್ಲ ಅವರಿಗೆ. ಹೊರನೋಟಕ್ಕೆ ನಾನೂ ಡೇಗೆಯಂತೆ ಕಂಡರೂ, ನಾನು ನಿಜಕ್ಕೂ ಡೇಗೆ ಅಲ್ಲವೇ ಅಲ್ಲ. ಆ ಮೂವರು ಕಾದಾಡುವ ನಿಜ ಡೇಗೆಗಳೇ ಆಗಿದ್ದರಿಂದ, ಕ್ರಮೇಣ ನನ್ನ– ಅವರ ಸಂಪರ್ಕ ತಪ್ಪಿಹೋಯಿತು. ಆದರೆ ಮೊದಲನೇ ದಿನದ ಕಾದಾಟದಲ್ಲೇ ಗಾಯಾಳುವಾಗಿ ಹೋದ, ಆ ಶೌರ್ಯ ಪ್ರಶಸ್ತಿಪಡೆಯದೇ ಹೋದವನು ನನಗೆ ಸಮೀಪನಾಗಿ ಬಿಟ್ಟ.

ಕತ್ತಿ ವರಸೆಯ ಪಟು 'ಮೇಜರ್'ಗೂ ತನ್ನದೇ ಶೌರ್ಯದಲ್ಲಿ ನಂಬಿಕೆ ಇರಲಿಲ್ಲ. ಅವನು ನಿತ್ಯವೂ ಯಂತ್ರದ ಬಳಿ ಸಿಗುತ್ತಿದ್ದು, ಆಗೆಲ್ಲಾ ನನ್ನ ಇಟಾಲಿಯನ್ ಭಾಷೆಯ ವ್ಯಾಕರಣ ತಿದ್ದುವುದರಲ್ಲೇ ಆಸಕ್ತಿ ತೆಗೆದುಕೊಳ್ಳುತ್ತಿದ್ದ. ಪರದೇಶಿಯಾದ ನಾನು ಇಟಲಿ ಭಾಷೆಯಲ್ಲಿ ಮಾತಾಡಿದರೆ ಮೆಚ್ಚಿಗೆ ಸೂಸುತ್ತಿದ್ದ. ಈ ಭಾಷೆ ಕಲಿಯಲು ಬಹಳ ಸುಲಭ ಎಂದು ನಾನು ಕೊಚ್ಚಿಕೊಳ್ಳುತ್ತಿದ್ದೆ.

"ಹಾ... ಹೌದ್ಹೌದು!" ಮೇಜರ್ ಹೇಳಿದ," ಆದರೆ ನೀನ್ಯಾಕೆ ವ್ಯಾಕರಣದ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ!..." ಆವಾಗಿನಿಂದ ನಾನು ವ್ಯಾಕರಣಬದ್ಧವಾಗಿ ಇಟಾಲಿಯನ್ ಮಾತಾಡಲು ಯತ್ನಿಸಿದೆ. ಆಗಷ್ಟೇ ಅದೆಷ್ಟು ಕಷ್ಟವಾದ ಭಾಷೆ ಎಂಬುದನ್ನು ಅರಿತೆ, ವ್ಯಾಕರಣ ಕಲಿತುಕೊಳ್ಳುತ್ತಾ ಹೋದಾಗ, ಅವನೊಂದಿಗೆ ಮಾತಾಡಲು ಅಳುಕು ಬಂದು ಬಿಟ್ಟಿತು.

ಆಸ್ಪತ್ರೆಗೆ ಮೇಜರ್ ಬಹಳ ಕ್ಲ್ರಪ್ತವಾಗಿ ಬರುತ್ತಿದ್ದ. ಅವನಿಗೆ ಯಾಂತ್ರಿಕ ಚಿಕಿತ್ಸೆಯಲ್ಲಿ ತಾನು ಗುಣಮುಖನಾಗುತ್ತೇನೆಂಬ ಭರವಸೆ ಇರದಿದ್ದರ ಜೊತೆಗೆ ನಮಗೂ ನಂಬಿಕೆ ಮಾಯವಾಗಿಸಿ ಬಿಡುವಂತೆ ಮಾತಾಡುತ್ತಿದ್ದ. ಈ ಉಪಕರಣಗಳು ನವೀನ ರೀತಿಯದ್ದಾಗಿದ್ದು, ನಾವು ಬಲಿಪಶುಗಳಾಗಿ ಅದರ ಅದ್ಭುತತೆಯನ್ನು ಧೃಢಪಡಿಸಬೇಕಷ್ಟೇ ಎನ್ನುತ್ತಿರುತ್ತಿದ್ದ. ನಾನು ವ್ಯಾಕರಣಬದ್ಧ ಇಟಾಲಿಯನ್ ಮಾತಾಡಿ ನನ್ನ ಮೇಧಾವಿತನ ಪ್ರದರ್ಶಿಸಿದಷ್ಟೇ ಅನುಮಾನ ಆ ಯಂತ್ರದ ಮೇಲಿತ್ತು! ಚಿಕ್ಕ ಮೂರ್ತಿಯಾಗಿದ್ದ

ಮೇಜರ್ ತನ್ನ ಬಲಗೈಯನ್ನು ಯಂತ್ರದೊಳಗೆ ತುರುಕಿ ಅದರಚರ್ಮದ ಪಟ್ಟಿ ಬಿಗಿಗೊಳಿಸುತ್ತಾ ನೆಟ್ಟಗೆ ಕುರ್ಚಿ ಮೇಲೆ ಕುಳಿತಿದ್ದ. ಎದುರಿನ ಖಾಲಿ ಗೋಡೆ ನೋಡುತ್ತಾ ಅವನು ಹೇಳಿದ.

"ಒಂದು ವೇಳೆ ಯುದ್ಧ ಮುಗಿದು ಹೋದರೆ. ಮುಂದೆ ನೀನೇನು ಮಾಡಬೇಕೆಂದಿರುವೆ?..... ವ್ಯಾಕರಣಬದ್ಧವಾಗಿ ಉತ್ತರಿಸು.."

"ನಾನು 'ಸ್ಟೇಟ್ಸ್'ಗೆ ಹಿಂದಿರುಗುತ್ತೇನೆ."

"ನಿನಗೆ ಮದುವೆಯಾಗಿದೆಯೇ?..

"ಇಲ್ಲ.... ಆಗಬೇಕೆಂದಿದ್ದೇನೆ."

"ನೀನೊಬ್ಬ ದಡ್ಡ." ಅವನು ಸಿಟ್ಟಾಗಿ ಹೇಳಿದ ಮದುವೆ ಎಂದೂ ಆಗಬಾರದು."

"ಯಾಕೆ? ಮಿಸ್ಟರ್ ಮೇಜರ್!?.."

"ನನ್ನನ್ನ ಮೇಜರ್ ಎಂದು ಕರಿಯಬೇಡ."

"ಅಯ್ತು.... ಮದುವೆ ಯಾಕಾಗಬಾರದು ಹೇಳಿ....?"

ಅವನು ಕೆರಳಿ ಹೇಳಿದ. "ಮದುವೆಯಾದರೆ ಎಲ್ಲವನ್ನೂ ಕಳೆದುಕೊಳ್ಳುತ್ತೇವೆ. ಅಂತಹ ಕಳೆದುಕೊಳ್ಳುವ ಪರಿಸ್ಥಿತಿಗೆ ಒಳಪಡಲೇಬಾರದು... ಪಡೆದುಕೊಳ್ಳುವ ಬದಲು ಕಳೆದುಕೊಳ್ಳಬೇಕು!" ಎಂದು ಎದುರಿಗೆ ನೆಟ್ಟನೋಟಬಿಟ್ಟು, ಕಿಸಿಟ್ಟಿನಿಂದ ಕೂಗಿದ.

"ಮದುವೆಯಾದರೆ ಕಳೆದುಕೊಳ್ಳುವುದೇನಿದೆ?..."

"ಮದುವೆಯಾಗುವವನು ಎಲ್ಲವನ್ನೂ ಕಳೆದುಕೊಳ್ಳುತ್ತಾನೆ" ಎಂದು ಗೋಡೆ ಮೇಲೆ ಇಟ್ಟಿದ್ದ ದೃಷ್ಟಿಯನ್ನು ಚಿಕಿತ್ಸಕ ಯಂತ್ರದ ಮೇಲೆ ಇರಿಸಿ, ಕೈಯಪಟ್ಟಿ ಎಳೆಯಲು ಹೋದ. ಎಳೆದ ರಭಸಕ್ಕೆ ಕೂಡೆ ಮೇಲೆ ಹೊಡೆತ ಬಿತ್ತು.

"ನಾನು ಕಳೆದುಕೊಂಡಿದ್ದೀನಿ!" ಎಂದು ನೋವಿನೊಂದಿಗೇ ಚೀರಿಕೊಂಡ. "ಆ ಬಗ್ಗೆ ನನ್ನೊಡನೆ ವಾಗ್ವಾದ ಮಾಡಬೇಡ!" ಎಂದು ಆ ಯಂತ್ರದ ಸಹಾಯದಿಂದ ಉಪಚಾರ ಮಾಡುತ್ತಿದ್ದವನ ಮೇಲೂ ಕೂಗಿಬಿಟ್ಟ "ಈ ದರಿದ್ರ ಪಟ್ಟಿಯನ್ನು ಕಿತ್ತಾಕು" ಅತನನ್ನು ಪಕ್ಕದ ಕೋಣೆಗೆ ಒಯ್ದರು. ಅದು ಮಸಾಜ್ ಮಾಡುವ ಕೋಣೆ. ಅಲ್ಲಿಗವನು ಹೋದ ಕೂಡಲೇ ಅಲ್ಲಿ ನಿಂತಿದ್ದ ಡಾಕ್ಟರನ್ನು 'ಫೋನು ಮಾಡಲೇ?..." ಎಂದು ಕೇಳಿದ್ದು ನನಗೆ ಇಲ್ಲಿಗೂ ಕೇಳ ಬಂದಿತು.

ವೈದ್ಯರು ಸಮ್ಮತಿಸಿದ ಕೂಡಲೇ ಮೇಜರ್ ಬಾಗಿಲು ಹಾಕಿಕೊಂಡು ಬಿಟ್ಟ. ಅವನು ಮರಳಿ ಬಂದಾಗ ನಾನು ಬೇರೊಂದು ಯಂತ್ರದಲ್ಲಿ ಚಿಕಿತ್ಸೆ ಪಡೆದುಕೊಳ್ಳುತ್ತಿದ್ದೆ. ತಲೆಗೊಂದು ಟೋಪಿ. ಮೈಮೇಲೊಂದು ತೋಳಿಲ್ಲದ ಅಂಗಿ ಹಾಕಿಕೊಂಡಿದ್ದ ಮೇಜರ್ ನೇರವಾಗಿ ನನ್ನ ಬಳಿ ಬಂದು. ಭುಜದ ಮೇಲೆ ತೋಳು ಇರಿಸಿ ಹೇಳಿದ.

"ನನ್ನನ್ನು ಕ್ಷಮಿಸು"ಸರಿಯಾಗಿದ್ದ ಕೈಯಿಂದ ಭುಜ ಮೆಲ್ಲನೆ ತಟ್ಟಿದ. "ನಾನು ನಿನ್ನಲ್ಲಿ ಕಟುವಾಗಿ ವರ್ತಿಸಿಬಿಟ್ಟೆ... ಕ್ಷಮಿಸು .. ನನ್ನ ಪ್ರೀತಿಯ ಮಡದಿ ಸತ್ತ ಸುದ್ದಿ ಅದೇ ತಾನೇ ಬಂದಿತ್ತು......ತೀರಾ ಬೇಸರವಾಗಿತ್ತು... ಕ್ಷಮಿಸಿಬಿಡು...."

"ಓ!-"ಅನುಕಂಪದೊಡನೆ ನಾನು ಹೇಳಿದೆ. "ಈ ಸುದ್ದಿ ಕೇಳಿ ನನಗೆ ಖೇದವಾಗಿದೆ." ಅವನು ಜಾಡುಕಚ್ಚಿ, ನೆಟ್ಟಗೆ ನಿಂತ. "ಬಹಳ ಕಷ್ಟವಾಗಿದೆ... ನಾನು ಹೇಗೆ ಸಮಾಧಾನ ತೆಗೆದುಕೊಳ್ಳಲಿ? ಗೊತ್ತಿಲ್ಲ..." ಆತ ಕಿಟಕಿಯಾಚೆ ದೃಷ್ಟಿ ತೂರಿ, ಕ್ಷಣ ಮೌನವಿದ್ದು ನಂತರ ಅಳಲಾರಂಭಿಸಿದ...."ನಾನೆಷ್ಟು ಯತ್ನಿಸಿದರೂ ದುಃಖ ಸಹಿಸಿಕೊಳ್ಳಲಾಗುತ್ತಿಲ್ಲ...." ಗದ್ಗರಿತನಾದ. ಗಲ್ಲದ ಮೇಲೆ ಉರುಳಿ ಬೀಳುತ್ತಿದ್ದ ಕಣ್ಣೀರನ್ನು ಒತ್ತಿ, ಸಿಪಾಯಿಗಳ ನಡೆ ನಡೆಯುತ್ತಾ ನೆಟ್ಟಗೆ ಹೋಗಿ, ಆಚೆ ಮರೆಯಾಗಿಬಿಟ್ಟ.

ಆತ ಯುದ್ಧದಲ್ಲಿ ಅಂಗವಿಕಲನಾದ ಮೇಲೆ ಪ್ರೀತಿಸಿ ಮದುವೆಯಾದ ಸಣ್ಣವಯಸ್ಸಿನ ಸುಂದರ ಮಡದಿ ಇದೀಗ ನ್ಯೂಮೋನಿಯಾಗೆ ಬಲಿಯಾಗಿ ಬಿಟ್ಟಿದ್ದರ ಸಂಗತಿಯನ್ನು ಡಾಕ್ಟರು ನನಗೆ ನಂತರ ತಿಳಿಸಿದರು. ಇಷ್ಟು ಬೇಗ ಆ ಯುವತಿ ಆಯುಸ್ಸು ಮುಗಿಸಿಕೊಳ್ಳುವಳೆಂದು ಯಾರು ತಾನೇ ಅಂದುಕೊಂಡಿರುತ್ತಾರೆ?

ಮೇಜರ್ ಮೂರುದಿನಕಾಲ ಚಿಕಿತ್ಸೆಗಾಗಿ ಆಸ್ಪತ್ರೆಗೆ ಬರಲೇ ಇಲ್ಲ. ನಾಲ್ಕನೇ ದಿನ ತೋಳಿನ ಮೇಲೆ ಒಂದು ಕಪ್ಪುಪಟ್ಟಿ ಕಟ್ಟಿಕೊಂಡು, ಎಂದಿನ ವೇಳೆಗೇ ಬಂದ. ಆತ ಬರುವ ವೇಳೆಗೆ ಅದ್ಯಾರೊ ಗೋಡೆಯ ಮೇಲೆ, ಅಪಘಾತಕ್ಕೆ ಒಳಗಾದ ವಿಕಾರವಾದ ಕೈಗಳ ಚಿತ್ರವನ್ನೂ ಅಲ್ಲದೆ, ಯಂತ್ರದ ಚಿಕಿತ್ಸೆಗೆ ಒಳಗಾದ ಮೇಲೆ ಅದೇ ಕೈಗಳು ಸಹಜ ಸ್ಥಿತಿಗೆ ಮರಳಿರುವ ಚಿತ್ರಗಳನ್ನು ಫೋಟೋಸಹಿತ ಆಕರ್ಷಕವಾಗಿ ನೇತುಹಾಕಿದ್ದರು.

ಆ ಚಿತ್ರಗಳನ್ನು ಗೋಡೆ ಮೇಲೆ ಹಾಕಿದ್ದು ಬೇರಾರೂ ಅಲ್ಲದೆ, ಡಾಕ್ಟರ್ ಸಾಹೇಬರೇ ಹಾಕಿದ್ದರು. ಇದೆಲ್ಲಾ ಚಿತ್ರಗಳನ್ನು ಅದೆಲ್ಲಿಂದ ಸಂಗ್ರಹಿಸಿದ್ದರೊ, ಅದ್ಯಾರು ಬಲ್ಲರು? ಹೊಸರೀತಿ ಯಂತ್ರೋಪಕರಣದಲ್ಲಿ ಚಿಕಿತ್ಸೆಗೆ ಒಳಗಾಗುತ್ತಿರುವುದರಲ್ಲಿ ನಾವೇ ಮೊದಲಿಗರು ಎಂದು ಮೇಜರ್ ಅಂದುಕೊಂಡಿದ್ದು ಸುಳ್ಳೇ ಆಗಿತ್ತು!

ನಮಗೆಲ್ಲಾ ಉತ್ತೇಜನ ಕೊಡಲು ಶ್ರಮವಹಿಸಿ ಮಾಡಿದ್ದ ಚಿತ್ರಪ್ರದರ್ಶನ ಮೇಜರ್ ಮೇಲೆ ಯಾವ ಪ್ರಭಾವವನ್ನೂ ಬೀರಲೇ ಇಲ್ಲ. ಕಾರಣ, ಆತ ಶೂನ್ಯದೃಷ್ಟಿ ಚೆಲ್ಲಿ ಕಿಟಕಿಯಾಚೆ ಎಲ್ಲೋ ನೋಟ ಚೆಲ್ಲಿ ಕುಳಿತುಬಿಟ್ಟಿದ್ದ!

* * *

# ಸರಿದ ತೆರೆ

ಬಿ. ಪ್ರಭಾಕರ ವರ್ಣ

ರಾತ್ರಿ ಗಂಟೆ ಹನ್ನೊಂದಾದರೂ ಪ್ರಕಾಶ್ ರಾವ್‌ಗೆ ನಿದ್ರೆ ಬಾರದು. ಹಾಸಿಗೆಯಲ್ಲಿ ಮೈಚಾಚಿ ಕಣ್ಣು ಮುಚ್ಚಿ ಮಲಗಿ ಒಂದು ಗಂಟೆಯಾದರೂ ನಿದ್ರೆ ಸುಳಿಯದು. ಮನಸ್ಸು ಉದ್ವಿಗ್ನಗೊಂಡಿತ್ತು. ಅದಕ್ಕೆ ಕಾರಣವೂ ಇತ್ತು. ವಿಶ್ರಾಂತ ಜೀವನಕ್ಕೆ ಕಾಲಿರಿಸಲು ಪ್ರಕಾಶ್ ರಾವ್‌ಗೆ ಕೇವಲ ಒಂದು ದಿನ ಬಾಕಿಯಿತ್ತು. ಮರುದಿನ ಆಫೀನಲ್ಲಿ ಪ್ರಕಾಶ್ ರಾವ್‌ರ ಕೊನೆಯ ದಿನವಾಗಿತ್ತು.

ರಿಟೈರ್‌ಮೆಂಟ್‌ಗೆ ಕೆಲವು ತಿಂಗಳುಗಳಿರುವಾಗಲೇ, ತದನಂತರದ ಜೀವನ ಹೇಗಿರಬಹುದು ಎನ್ನುವ ಪ್ರಶ್ನೆ ಪ್ರಕಾಶ್ ರಾವ್‌ರನ್ನು ಕಾಡುತಿತ್ತು. ನಾಲ್ಕೈದು ತಿಂಗಳುಗಳಿರುವಾಗಲೇ, ರಿಟೈರಾಗಿ ಹೋಗುವವನೆಂದು ತನ್ನನ್ನು ಎಲ್ಲರೂ ಉದಾಸೀನ ಭಾವದಿಂದ ನೋಡುತ್ತಿದ್ದಾರೆ ಎಂದೂ ಅನಿಸುತ್ತಿತ್ತು. ಆಫೀಸ್‌ನಲ್ಲಿ  ಬೇರೆ ಸಹೋದ್ಯೋಗಿಗಳು ರಿಟೈರ್‌ರಾಗಿ ಹೋಗುವಾಗ ಏನೂ ಅನಿಸಿರಲಿಲ್ಲ. ಪ್ರಕಾಶ್ ರಾವ್‌ಗೆ  ತನ್ನ ಸರದಿ ಬಂದಾಗಲೇ, ರಿಟೈರ್‌ರಾಗಿ ಮನೆಯಲ್ಲಿ ಇರುವಾಗ, ದಿನ ಕಳೆಯುವುದು ಹೇಗೆ ಎನ್ನುವ ಪ್ರಶ್ನೆ ಮನಸ್ಸಿನಲ್ಲಿ ಮೂಡಿ, ಅದಕ್ಕೆ ಸಮಂಜಸ ಉತ್ತರ ಸಿಗದಿದ್ದಾಗಲೇ, ರಿಟೈರ್‌ಮೆಂಟ್ ಉಂಟು ಮಾಡುವ ಪರಿಣಾಮದ ಅರಿವಾಗತೊಡಗಿತ್ತು. ಎಲ್ಲರೂ ಒಂದಲ್ಲಾ ಒಂದು ದಿನ ವಿಶ್ರಾಂತ ಜೀವನಕ್ಕೆ ಕಾಲಿರಿಸಲೇ ಬೇಕಲ್ಲವೇ? ತದನಂತರದ ಜೀವನದ ಬಗ್ಗೆ ರಿಟೈರಾದ ಮೇಲೆ ನೋಡೋಣ ಎನ್ನುವ ನಿರ್ಧಾರಕ್ಕೆ ಬಂದಿದ್ದರು ಪ್ರಕಾಶ್ ರಾವ್.

ಪ್ರಕಾಶ್ ರಾವ್ ದೇಶದ ಪ್ರತಿಷ್ಠಿತ ಸಂಶೋಧನಾ ಸಂಸ್ಥೆಯಲ್ಲಿ ಇಂಜಿನಿಯರಾಗಿ ಸೇರಿ ಈಗ ಒಂದು ವಿಭಾಗದ ಮುಖ್ಯಸ್ಥರಾಗಿ ಬಂದಿದ್ದಾರೆ. ಮಕ್ಕಳಿಬ್ಬರಿಗೆ ಉನ್ನತವಿದ್ಯಾಭ್ಯಾಸ ನೀಡಿದ್ದಾರೆ. ಮಗಳು ಮದುವೆಯಾಗಿ ಒಳ್ಳೆಯ ಮನೆ  ಸೇರಿದ್ದಾಳೆ. ಮಗ  ಖಾಸಗಿ  ಸಂಸ್ಥೆಯಲ್ಲಿ  ಉನ್ನತ ಉದ್ಯೋಗದಲ್ಲಿದ್ದಾನೆ. ಇರಲೊಂದು ಮನೆ ಇದೆ. ಪ್ರಕಾಶ್ ರಾವ್ ಸಂಸಾರದ ವಿಷಯದಲ್ಲಿ ಸಂತೃಪ್ತರು. ಆದರೆ ಮೊದಲಿನಿಂದಲೂ ಮನಸ್ಸಿನ ಮೂಲೆಯಲ್ಲಿ, ತನ್ನ ಯೋತ್ರತೆಗೆ ತಕ್ಕ ಸ್ಥಾನ, ಮಾನ ಸಂಸ್ಥೆಯಲ್ಲಿ ಸಿಗಲಿಲ್ಲ ಎನ್ನುವ ಕೊರಗೊಂದಿದೆ. ಯೋಗ್ಯತೆಯಲ್ಲಿ ಕಡಿಮೆಯಿರುವ, ತನಗಿಂತ ನಾಲ್ಕೈದು  ವರ್ಷ ಜೂನಿಯರ್ ಆಗಿರುವ ನಾಗೇಂದ್ರ ಪ್ರಸಾದ್‌ಗೆ ತನಗಿಂತ  ಹೆಚ್ಚಿನ ಸ್ಥಾನ ಸಿಕ್ಕು, ಈಗ ಒಂದೆರಡು ವರ್ಷದ ಕೆಳಗೆ ತನಗೇ ಬಾಸ್

ಆಗಿ ಬಂದ ಮೇಲಿನಿಂದ, ಆತನನ್ನು ನೋಡಿದಾಗಲೆಲ್ಲಾ ಸಂಸ್ಥೆಯಲ್ಲಿ ತನಗೆ ಬಹಳ ಅನ್ಯಾಯವಾಗಿದೆಯೆಂದು ಅನಿಸುತ್ತಿತ್ತು ಪ್ರಕಾಶ್ ರಾವ್‌ಗೆ. ಚಮಚಾಗಿರಿಯೇ ಆತನನ್ನು ಆ ಮಟ್ಟಕ್ಕೆ ಏರಿಸಿದೆ ಎನ್ನುವುದು ಪ್ರಕಾಶ್ ರಾವ್ ತೀರ್ಮಾನ!

ಈಗ ಪ್ರಕಾಶ್ ರಾವ್‌ರ ರಿಟೈರ್‌ಮೆಂಟಿಗೆ ಕೇವಲ ಒಂದು ದಿನ ಬಾಕಿ! ನಾಳೆ ಆಫಿಸ್‌ನಲ್ಲಿ ಪ್ರಕಾಶ್ ರಾವರ ಕೊನೆಯ ದಿನ. ಆಫಿಸ್‌ನಲ್ಲಿ ಬೀಳ್ಕೊಡುಗೆ ಸಮಾರಂಭ ಏರ್ಪಡಿಸಲಾಗಿತ್ತು. ಬೀಳ್ಕೊಡುಗೆಗೆ ಉತ್ತರವಾಗಿ ಏನು ಹೇಳಬಹುದು ಎನ್ನುವುದರ ಬಗ್ಗೆ ದಿನಪಿಡೀ ಆಲೋಚಿಸಿದರು ಪ್ರಕಾಶ್ ರಾವ್. ಮಲಗಿದಾಗಲೂ ಅದೇ ಚಿಂತೆ. ಆಗ ತಾನು ಸಂಸ್ಥೆ ಸೇರಿದಾಗಿನ ದಿನಗಳ ನೆನಪಾಯಿತು.

ಹಳ್ಳಿಯ ಪರಿಸರದಿಂದ ಬಂದ, ಸಂಕೋಚ ಸ್ವಭಾವದ, ಕಡಿಮೆ ಮಾತಿನ ಹುಡುಗನಾಗಿ ಪ್ರಕಾಶ್ ರಾವ್ ಸಂಸ್ಥೆಯನ್ನು ಸೇರಿದಾಗ ಹಲವು ರೀತಿಯ ಜಾತಿ, ಭಾಷೆಯ ಜನರಿರುವ ಆ ಸಂಸ್ಥೆಯಲ್ಲಿನ ಪರಿಸರಕ್ಕೆ ಹೊಂದಿಕೊಳ್ಳಲು ಸಮಯ ಹಿಡಿಯಿತು. ಅವರಲ್ಲಿ ತನ್ನ ಹಿತ ಬಯಸುವವರನ್ನು ಗುರುತಿಸಲು ಸಮಯ ತಗಲಿತ್ತು. ತನಗೊಪ್ಪಿಸಿದ ಕೆಲಸವನ್ನು ಶ್ರದ್ಧೆಯಿಂದ ಮಾಡಿದ. ಆದರೆ ತನ್ನ ಮೇಲಧಿಕಾರಿಯನ್ನು ಮೆಚ್ಚಿಸುವಲ್ಲಿವಿಫಲನಾಗಿದ್ದನು! ಪ್ರಕಾಶ್ ರಾವ್‌ಗೆ ತನ್ನ ಮೊದಲ ಪ್ರಮೋಶನ್‌ಗಾಗಿ ಕರೆದ ನಂತರವೇ ತಾನು ಮೇಲಧಿಕಾರಿಯ ಗಮನ ಸೆಳೆಯುವಲ್ಲಿ ವಿಫಲವಾದ ವಿಷಯ ತಿಳಿದದ್ದು. ಪ್ರಕಾಶ್ ರಾವ್‌ಗೆ ಮೊದಲ ಪ್ರಮೋಶನ್ ಸಿಗುವುದು ತಡವಾಗಿತ್ತು. ಆದರೆ ಐದಾರು ವರ್ಷದ ನಂತರ ಸಂಸ್ಥೆ ಸೇರಿದ ನಾಗೇಂದ್ರ ಪ್ರಸಾದನ ಬೆಳವಣಿಗೆ ಅಚ್ಚರಿ ಮೂಡಿಸಿತ್ತು.

ನಾಗೇಂದ್ರ ಪ್ರಸಾದ್ ಸೇರಿದ ವಿಭಾಗದವರು ಮಾಡುವ ಕೆಲಸಕ್ಕೆ ಅಷ್ಟೊಂದು ಪ್ರಾಮುಖ್ಯ ಇರಲಿಲ್ಲ. ಆದರೆ ಸೇರಿದ ಹತ್ತಿಪ್ಪತ್ತು ದಿನಗಳಲ್ಲಿಯೇ ಬಾಸ್ ಜೊತೆ ಮಾತನಾಡಿ ಪ್ರಕಾಶ್ ರಾವ್ ಕೆಲಸ ಮಾಡುವ ವಿನ್ಯಾಸದ ವಿಭಾಗಕ್ಕೆ ವರ್ಗ ಮಾಡಿಸಿಕೊಂಡು ಬಂದಿದ್ದ. ಒಂದು ವಿಭಾಗದಿಂದ ಇನ್ನೊಂದು ವಿಭಾಗಕ್ಕೆ ವರ್ಗವಾಗಿ ಬರುವುದು ಅಷ್ಟೊಂದು ಸುಲಭವಾಗಿರಲಿಲ್ಲ. ಬಾಸ್‌ಗಳನ್ನು ಮಾತಿನಲ್ಲಿ ಒಪ್ಪಿಸುವುದೂ ಸುಲಭವಲ್ಲ. ಒಂದು ವೇಳೆ ಸಫಲವಾಗದಿದ್ದರೆ ಆ ವಿಭಾಗದ ಬಾಸ್ ಇದನ್ನೇ ಮನಸ್ಸಿನಲ್ಲಿ ಇಟ್ಟುಕೊಂಡು ಕಿರಿಕಿರಿ ಉಂಟು ಮಾಡುವ ಸಾಧ್ಯತೆಯೂ ಇತ್ತು. ಅವನ ಧೈರ್ಯ ಮೆಚ್ಚುಗೆಯಾಯಿತು.

ನಾಗೇಂದ್ರಪ್ರಸಾದ್‌ಗೆ ತಾಂತ್ರಿಕ ವಿಷಯದಲ್ಲಿ ಆಳವಾದ ಜ್ಞಾನವಿದ್ದಂತೆ ತೋರಲಿಲ್ಲ ಪ್ರಕಾಶ್ ರಾವ್‌ಗೆ. ಆದರೆ ಸಂಸ್ಥೆಯಲ್ಲಿ ಮೇಲೇರಲು ಏನು ಬೇಕೆನ್ನುವುದನ್ನು ಬಹಳ ಬೇಗ ತಿಳಿದುಕೊಂಡಿದ್ದ ಮತ್ತು ಅದನ್ನೇ ಮಾಡುತ್ತಿದ್ದ! ಬಾಸ್‌ಗೆ ಬೆಣ್ಣೆ ಹಚ್ಚುವುದರಲ್ಲಿ, ಚಮಚಾಗಿರಿಯಲ್ಲಿ ನಂಬರ್ ಒನ್ ಎನ್ನುವ ನಿರ್ಧಾರಕ್ಕೆ ಬಂದಿದ್ದರು ಪ್ರಕಾಶ್ ರಾವ್. ಅವನು ಹೇಗಿದ್ದರೂ ತನಗೇನು? ಎಂದು ತನ್ನ ಕೆಲಸದಲ್ಲಿ ತೊಡಗಿಕೊಂಡರು ಪ್ರಕಾಶ್‌ರಾವ್. ಉನ್ನತ ವಿದ್ಯಾಭ್ಯಾಸಕ್ಕೆ ಪ್ರಯತ್ನಿಸಿದ್ದಾಗಲೇ ಆತ ಸಾಮಾನ್ಯನಲ್ಲ ಎನ್ನುವ ವಿಚಾರ ಖಾತ್ರಿಯಾಯಿತು.

ಪ್ರಕಾಶ್ ರಾವ್ ಸಂಸ್ಥೆಯ ಮೂಲಕ ಉನ್ನತ ವಿದ್ಯಾಭ್ಯಾಸಕ್ಕೆ ಪ್ರಯತ್ನಿಸುವಾಗ ವಿಳಂಬವಾಗಿತ್ತು. ಮೊದಲೊಂದು ಪ್ರಮೋಶನ್ ಆಗಲೆಂದು ಕಾದರು. ತದನಂತರ ಮದುವೆಯೆಂದು ಮುಂದೂಡಿದರು. ಮದುವೆಯಾಗಿ ಒಂದೆರಡು ವರ್ಷ ಕಳೆದ ಮೇಲೆ ಉನ್ನತ ಶಿಕ್ಷಣಕ್ಕೆ ಪ್ರಯತ್ನಿಸಲೆಂದು ಮೇಲಧಿಕಾರಿಯ ಬಳಿಗೆ ಹೋದರೆ ಅದಾಗಲೇ ನಾಗೇಂದ್ರ ಪ್ರಸಾದ್ ಅರ್ಜಿ ಬಾಸ್ ಟೇಬಲ್ ಮೇಲಿತ್ತು! 'ನಾಗೇಂದ್ರ ಪ್ರಸಾದ್‌ನ್ನು ಕಳುಹಿಸಿಕೊಡುತ್ತೇನೆಂದು ಮಾತು ಕೊಟ್ಟಾಗಿದೆ. ನೀವು ಮುಂದಿನ ವರ್ಷ ಪ್ರಯತ್ನಿಸಿ' ಎಂದು ಬಾಸ್ ಹೇಳಿದಾಗ ಪ್ರಕಾಶ್ ರಾವ್ ಮೈ ಉರಿದು ಹೋಯಿತು. ಆದರೆ ಬಾಸ್‌ಗೆ ಎದುರುತ್ತರ ಕೊಡಲಾಗುತ್ತದೆಯಾ..? ಇವರೆಲ್ಲಾ ಒಂದೇ ಗ್ಯಾಂಗ್‌ನವರು ಎನ್ನುವ ನಿರ್ಧಾರಕ್ಕೆ ಬಂದಿದ್ದರು.

ನಾಗೇಂದ್ರ ಪ್ರಸಾದ್ ಉನ್ನತ ಶಿಕ್ಷಣಕ್ಕೆಂದು ಎರಡು ವರ್ಷ ರಜೆಯ ಮೇಲೆ ಹೋದಾಗ ಸಂಸ್ಥೆಯಲ್ಲಿ ತನ್ನದೇ ಆದ ಛಾಪು ಮೂಡಿಸುವಲ್ಲಿ ಸಫಲರಾಗಿದ್ದರು. ಪ್ರಕಾಶ್ ರಾವ್‌ಗೆ ತನ್ನ ವಿಭಾಗದಲ್ಲಿಯೂ ಪ್ರಾಮುಖ್ಯ ಸಿಕ್ಕಿತು. ಪ್ರಕಾಶ್ ರಾವ್ ಅಭಿಪ್ರಾಯಕ್ಕೆ ಮೇಲಧಿಕಾರಿಯಿಂದ ಮನ್ನಣೆ ಸಿಗತೊಡಗಿತ್ತು. ಪ್ರಕಾಶ್ ರಾವ್ ಸಂತೃಪ್ತರಾದರು. ಆದರೆ ಈ ತೃಪ್ತಿ ನಾಗೇಂದ್ರ ಪ್ರಸಾದ್ ಉನ್ನತ ವಿದ್ಯಾಭ್ಯಾಸ ಮುಗಿಸಿ ಬಂದ ಮೇಲೆ ಉಳಿಯಲಿಲ್ಲ!

ನಾಗೇಂದ್ರ ಪ್ರಸಾದ್ ಆಫೀಸ್ ಸಮಯದ ನಂತರವೂ ಸಂಸ್ಥೆಯಲ್ಲಿಯೇ ಉಳಿಯುತ್ತಿದ್ದ. ಆತನಿಗೆ ಆಫೀಸೇ ಮನೆಯಾಗಿತ್ತು. ಆತನಿಗೆ ಸಂಸಾರವಾದರೂ ಯಾಕೆ ಇದೆಯೋ ಎಂದು ಉದ್ಯೋಗಿಗಳು ಆಡಿಕೊಳ್ಳುತ್ತಿದ್ದರು. ಇಷ್ಟೆಲ್ಲಾ ಕೆಲಸ ಮಾಡಿ ಏನು ಸಾಧಿಸುತ್ತಾನೋ...? ಎಂದು ಪ್ರಕಾಶ್ ರಾವ್ ಆತನನ್ನು ಕಡೆಗಣಿಸಿದರು. ಆತ ತಾಂತ್ರಿಕ ವಿಷಯದ ಮೇಲೆ ಬರೆದ ಸಂಶೋಧನಾ ಲೇಖನಗಳು ಅಂತಾರಾಷ್ಟ್ರೀಯ ಪತ್ರಿಕೆಯಲ್ಲಿ ಪ್ರಕಟವಾಗ ತೊಡಗಿ. ಈತನು ಲೇಖನ ಬರೆಯುವದಕ್ಕೇ ಲಾಯಕ್ಕೆಂದು ಕಡೆಗಣಿಸಿದರು. ಆದರೆ ಪ್ರಕಾಶ್ ರಾವ್‌ಗೆ ಪ್ರಾಜೆಕ್ಟ್‌ನಲ್ಲಿ ಸಿಗುತ್ತಿದ್ದ ಪ್ರಮುಖ ಕೆಲಸಗಳು ಕೈ ತಪ್ಪಿ ನಾಗೇಂದ್ರ ಪ್ರಸಾದ್‌ಗೆ ಸಿಗತೊಡಗಿತು. ಆಗಲೇ ಪ್ರಕಾಶ್ ರಾವ್‌ಗೆ ಅದರ ಬಿಸಿ ಅರಿವಾಗತೊಡಗಿತು. ಆದರೆ ಆತನೊಬ್ಬ ಪ್ರತಿಸ್ಪರ್ಧಿಯಾಗುತ್ತಾನೆಂದು ಊಹಿಸಿರಲಿಲ್ಲ. ಪ್ರಕಾಶ್ ರಾವ್ ಎಚ್ಚೆತ್ತುಕೊಳ್ಳುವುದರಲ್ಲಿ ವಿಳಂಬವಾಗಿತ್ತು. ನಾಗೇಂದ್ರ ಪ್ರಸಾದ್ ವಿನ್ಯಾಸ ವಿಭಾಗದಲ್ಲಿ ಭದ್ರವಾಗಿ ತಳವೂರಿದ್ದ!

ತನ್ನ ಅವಕಾಶಗಳೆಲ್ಲಾ ತಪ್ಪಿ ನಾಗೇಂದ್ರ ಪ್ರಸಾದ್ ಕೈ ಸೇರಿದಾಗ ಸಿಟ್ಟು ನೆತ್ತಿಗೇರಿತ್ತು. ಸಂದರ್ಭ ಸಿಕ್ಕಾಗ ಎಲ್ಲರೆದುರೇ ಆತನ ಜಮಬಾಗಿರಿ ಬಗ್ಗೆ ಹೇಳಿ ಸಿಟ್ಟು ತೀರಿಸಿಕೊಳ್ಳಬೇಕೆಂದುಕೊಂಡರು. ಆದರೆ ಅದಾಗಲೇ ನಾಗೇಂದ್ರ ಪ್ರಸಾದ್ ವಿಭಾಗದಲ್ಲಿ ಭದ್ರವಾಗಿ ತಳವೂರಿದ್ದ ಆತನನ್ನು ಅಲುಗಾಡಿಸುವುದು ಸುಲಭವಲ್ಲವೆನ್ನುವುದು ಪ್ರಕಾಶ್ ರಾವ್‌ಗೂ ತಿಳಿದಿತ್ತು. ಸಂಸ್ಥೆಯಲ್ಲಿ ಒಬ್ಬ ವ್ಯಕ್ತಿಯನ್ನು ಮೂಲೆಗೆ ತಳ್ಳುವುದು ಎಷ್ಟು ಸುಲಭವೆನ್ನುವುದೂ ಪ್ರಕಾಶ್ ರವ್‌ಗೆ ತಿಳಿದಿತ್ತು.

ಒಬ್ಬ ವ್ಯಕ್ತಿಯನ್ನು ಕೆಳಗೆ ತಳ್ಳಬೇಕಾದರೆ ಸಂಸ್ಥೆಯಲ್ಲಿ ಮಾಡುವ ಮೊದಲ ಕೆಲಸವೆಂದರೆ ಆ ವ್ಯಕ್ತಿಯನ್ನು ತಳವೂರಿದ್ದ ಆತನ ವಿಭಾಗದಿಂದ ಪ್ರಾಮುಖ್ಯವಲ್ಲದ ಇನ್ನೊಂದು ವಿಭಾಗಕ್ಕೆ ವರ್ಗ ಮಾಡುವುದು. ಅಲ್ಲಿಗೇ ಅವನ ಬೆಳವಣಿಗೆ ಮುಗಿಯುತ್ತದೆ. ಇನ್ನೊಂದು ವಿಧಾನವೂ ಬಹಳ ಪರಿಣಾಮಕಾರಿ. ಓರ್ವ ವ್ಯಕ್ತಿಗೆ ಯಾವ ಕೆಲಸವನ್ನೂ ಕೊಡದೇ ಇದ್ದರಾಯಿತು. ಕೆಲಸವಿದ್ದರೆ ತಾನೆ ಪ್ರತಿಭೆ ತೋರಿಸಲು ಸಾಧ್ಯ. ಕೆಲಸವಿಲ್ಲದೆ ಆಫೀಸ್‌ನಲ್ಲಿ ಸಮಯ ತಳ್ಳುವ ಕಷ್ಟ ಯಾವ ಶತ್ರುವಿಗೂ ಬೇಡ. ಹೆಚ್ಚು ದಿನವಿದ್ದರೆ ಆರೋಗ್ಯ ಕೆಡುವುದಂತೂ ಗ್ಯಾರಂಟಿ. ಇದಕ್ಕಿರುವುದೊಂದೇ ದಾರಿ. ಕೆಲಸಕ್ಕೆ ರಾಜಿನಾಮೆ ಕೊಡಬೇಕು, ಇಲ್ಲಾ ಬಾಸ್ ಜೊತೆ ರಾಜಿ ಮಾಡಿಕೊಳ್ಳಬೇಕು. ಉದ್ಯೋಗಿಯ ಮನಃಶಾಂತಿ ಕೆಡಿಸಲು ಇರುವ ಇನ್ನೊಂದು ಉಪಾಯವೆಂದರೆ ಆ ವ್ಯಕ್ತಿಗೆ ಆತನ ಕೆಲಸಕ್ಕೆ ಸಂಬಂಧಪಟ್ಟ ವಿವರಗಳು ತಲುಪದಂತೆ ಮಾಡುವುದು. ವಿವರಗಳಿಲ್ಲದಿದ್ದರೆ ಮೀಟಿಂಗ್‌ನಲ್ಲಿ ಮಾತನಾಡಲೂ ಸಾಧ್ಯವಿಲ್ಲ. ವಿನ್ಯಾಸದ ವಿಶ್ಲೇಷಣೆ ಮಾಡಲೂ ಅಸಾಧ್ಯ. ಆಗ ತನ್ನಂತಾನಾಗಿಯೇ ಆತನ ವಿಭಾಗದಲ್ಲಿ ಪ್ರಾಮುಖ್ಯ ಕಳೆದುಕೊಳ್ಳುತ್ತಾನೆ. ಇವನ್ನೆಲ್ಲಾ ತಿಳಿದ್ದಿದ್ದ ಪ್ರಕಾಶ್ ರಾವ್ ತನ್ನ ಮೇಲೆ ತಾನೇ ಚಪ್ಪಡಿ ಎಳೆದು ಕೊಳ್ಳಬಾರದೆಂದು ಏನೂ ತಿಳಿಯದವರಂತೆ ಇರಲು ನಿರ್ಧರಿಸಿದರು. ಆದರೆ ನಾಗೇಂದ್ರ ಪ್ರಸಾದ್ ಮೇಲಿನ ಸಿಟ್ಟು ಕಡಿಮೆಯಾಗಲಿಲ್ಲ.

ಕಾಲ ಯಾರಿಗಾಗಿಯೂ ಕಾಯುವುದಿಲ್ಲ. ರಿಟೈರ್ ಆಗಲು ಒಂದೆರಡು ವರ್ಷ ಬಾಕಿ ಇರುವಾಗ ಪ್ರಕಾಶ್ ರಾವ್ ವಿಭಾಗದ ಮುಖ್ಯಸ್ಥರಾದರು. ಅದೇ ಸಮಯದಲ್ಲಿ ಪ್ರಕಾಶ್ ರಾವ್‌ರ ಮೇಲಧಿಕಾರಿಯ ಹುದ್ದೆಗೆ ನಾಗೇಂದ್ರ ಪ್ರಸಾದ್ ಏರಿದರು. ನಾಗೇಂದ್ರ ಪ್ರಸಾದ್ ತನ್ನ ಜೊತೆ ಕೆಟ್ಟ ರೀತಿಯಲ್ಲಿ ವರ್ತಿಸಿದ್ದರೂ ಆತನನ್ನು ನೋಡಿದಾಗಲೆಲ್ಲಾ, ಜೊತೆಯಲ್ಲಿ ಕೆಲಸ ಮಾಡುವಾಗಲೆಲ್ಲಾ ಪ್ರಕಾಶ್ ರಾವ್‌ಗೆ ಕಿರಿಕಿರಿಯಾಗುತ್ತಿತ್ತು. ತಾನಿರಬೇಕಾದ ಸ್ಥಾನದಲ್ಲಿ ನಾಗೇಂದ್ರ ಪ್ರಸಾದ್ ಇದ್ದಾನೆಂದು ಅನಿಸುತ್ತಿತ್ತು. ಚಮಚಾಗಿರಿ ಮಾಡಿ ಮೇಲೆ ಹೇಗೆ ಬಂದ ಎನ್ನುವುದನ್ನು ಒಮ್ಮೆ ಎಲ್ಲರ ಸಮ್ಮುಖದಲ್ಲಿ ಹೇಳಿ ಆತನ ಯಶಸ್ಸಿನ ಗುಟ್ಟನ್ನು ಬಯಲು ಮಾಡಬೇಕೆನಿಸುತ್ತಿತ್ತು. ಆದರೆ ಅದಕ್ಕೆ ಅವಕಾಶವೇ ಕೂಡಿ ಬಂದಿರಲಿಲ್ಲ. ನಾಗೇಂದ್ರ ಪ್ರಸಾದ್ ಭಾಗವಹಿಸುವ ಬೀಳ್ಕೊಡುಗೆ ಸಮಾರಂಭವೇ ಅದಕ್ಕೆ ಒಳ್ಳೆಯ ವೇದಿಕೆಯೆಂದೆನಿಸಿತು ಪ್ರಕಾಶ್ ರಾವ್‌ಗೆ. ನಾಗೇಂದ್ರ ಪ್ರಸಾದ್‌ನ ಚಮಚಾಗಿರಿಯನ್ನು ಎಲ್ಲಿಂದ ಪ್ರಾರಂಭಿಸಲಿ ಎಂದು ಆಲೋಚಿಸಿದಾಗ ಹಳೆಯ ಘಟನೆಗಳೆಲ್ಲಾ ನೆನಪಾದವು. ಆತನಿಂದಾಗಿ ಉನ್ನತ ಶಿಕ್ಷಣದ ಅವಕಾಶ ತಪ್ಪಿ ಹೋದ ಘಟನೆ, ಪ್ರಮುಖ ಪ್ರಾಜೆಕ್ಟ್‌ನಲ್ಲಿ ಕೆಲಸ ಮಾಡುವ ಅವಕಾಶ ತನ್ನ ಕೈ ಜಾರಿದ ದಿನಗಳು ನೆನಪಾದವು. ತಾನು ಹೇಳಬೇಕೆಂದಿರುವ ವಿಷಯದ ಬಗ್ಗೆ ದಿನವಿಡೀ ಆಲೋಚಿಸಿ ಸಿದ್ಧಪಡಿಸಿದ ಟಿಪ್ಪಣಿಯ ಪಟ್ಟಿ ಉದ್ದವಾಗಿತ್ತು. ಬೀಳ್ಕೊಡುಗೆಗೆ ಉತ್ತರವಾಗಿ ತಾನು ಮಾತನಾಡಲು ಅನುಕೂಲವಾಗಲೆಂದು ಕಾಗದದ ಮೇಲೆ ಟಿಪ್ಪಣಿ ಮಾಡಿದ ಮೇಲೆ ಇದೆಲ್ಲಾ ಘಟನೆಗಳಿಗೂ ನಾಗೇಂದ್ರ ಪ್ರಸಾದ್ ಒಬ್ಬನೇ ಹೊಣೆಯೇ..?

ಎನ್ನುವ ವಿಚಾರ ಕಾಡತೊಡಗಿತು.

ನಾಗೇಂದ್ರ ಪ್ರಸಾದ್ ತನ್ನ ಗುರಿಸಾಧನೆಗಾಗಿ ಸತತ ಪ್ರಯತ್ನಿಸುತ್ತಿದ್ದ ಮತ್ತು ಬಂದ ಅವಕಾಶಗಳನ್ನು ಸದುಪಯೋಗ ಪಡಿಸಿಕೊಂಡಿದ್ದ. ಎಲ್ಲಾ ಕೆಲಸದ ಮಧ್ಯೆ ತನ್ನ ವಿದ್ಯಾರ್ಹತೆ ಹೆಚ್ಚಿಸಿಕೊಂಡಿದ್ದ. ಬಹಳ ಮುಂದಾಲೋಚನೆ ಮಾಡಿ ಕಾರ್ಯ ನಿರ್ವಹಿಸುತ್ತಿದ್ದ. ಅವರಿವರಿಗೆ ಬೇಜಾರು ಆಗುತ್ತದೆ. ಮನಸ್ಸಿಗೆ ನೋವಾಗುತ್ತದೆ ಎಂದು ನೋಡುತ್ತಿದ್ದರೆ ಮೇಲೇರಲು ಸಾಧ್ಯವೆ? ಒಬ್ಬ ವ್ಯಕ್ತಿ ತನ್ನ ಏಳಿಗೆಗಾಗಿ ಸ್ವಾರ್ಥಿಯಾಗುವುದು ಅನಿವಾರ್ಯವೇನೋ.. ಮುನ್ನುಗ್ಗದಿದ್ದರೆ ಜೀವನದಲ್ಲಿ ಮುಂದೆ ಬರಲು ಸಾಧ್ಯವೆ? ಎಲ್ಲರನ್ನೂ ಎಲ್ಲಾ ಸಮಯದಲ್ಲೂ ಮೆಚ್ಚಿಸಲು ಸಾಧ್ಯವೆ? ಅದಕ್ಕಾಗಿಯೇ ಒಳ್ಳೆಯ ಮನುಷ್ಯ ಉತ್ತಮ ನಾಯಕನಾಗಲಾರ ಎಂದಿರಬೇಕು. ಬಾಸ್‌ನ ಮನದಾಳ ಅರಿತು ಅದರಂತೆ ನಡೆಯುವುದು ಎಲ್ಲರಿಂದಲೂ ಸಾಧ್ಯವೆ? ಆಡಳಿತ ಮಂಡಳಿಯ ಸೂಚನೆಯನ್ನು ಬಾಯಿ ಬಿಟ್ಟು ಹೇಳುವುದಕ್ಕಿಂತ ಮೊದಲೇ ಗ್ರಹಿಸಿ. ಅದನ್ನು ನಿರ್ವಹಿಸುವ ಕಲೆ ನಾಯಕನಿಗೆ ಬರಬೇಕಾದ ಗುಣವಲ್ಲವೇ? ಮುಂಬರುವ ದಿನಗಳಲ್ಲಿ ಸಂಸ್ಥೆಯನ್ನು ನಡೆಸಿಕೊಂಡು ಹೋಗುವುದಕ್ಕೆ ನಮ್ಮಿಬ್ಬರಲ್ಲಿ ಆತನೇ ಯೋಗ್ಯ ಎಂದು ನಮ್ಮ ಬಾಸ್‌ಗೆ ಅನಿಸಿ, ಆತನನ್ನು ಮೇಲೆತ್ತಿದ್ದರೆ ಅದರಲ್ಲಿ ನಾಗೇಂದ್ರ ಪ್ರಸಾದ್‌ನ ತಪ್ಪಾದರೂ ಏನು? ವಿಭಾಗದ ಮುಖ್ಯಸ್ಥರಾದ ಮೇಲೆ ನನ್ನ ಕೈ ಕೆಳಗೆ ಕೆಲಸ ಮಾಡುವವರನ್ನು ಪ್ರಮೋಶನ್‌ಗೆ ಶಿಫಾರಸ್ಸು ಮಾಡುವಾಗ ನಾನೂ ನಿರ್ದಯಿಯಾಗಿರಲಿಲ್ಲವೇ..? ಇಲ್ಲಿದ್ದರೆ ಯೋಗ್ಯರನ್ನು ಗುರುತಿಸಲು ಸಾಧ್ಯವೇ..? ಒಬ್ಬನ ಪ್ರತಿಭೆ ಬಾಸ್‌ಗೆ ತಿಳಿಸಬೇಕಾದರೂ ಆತ ಅದನ್ನು ಒಂದಲ್ಲ ಒಂದು ರೀತಿಯಲ್ಲಿ ವ್ಯಕ್ತಪಡಿಸಬೇಕಲ್ಲವೆ..? ಯಾರು ಎಷ್ಟು ಬೇಗ ಕಲಿಯುತ್ತಾರೋ ಅಷ್ಟು ಬೇಗ ಒಂದು ಸಂಸ್ಥೆಯಲ್ಲಿ ಮೇಲೇರುತ್ತಾರೆ. ನನ್ನ ಕೆಳಗೆ ಕೆಲಸ ಮಾಡುವವರಲ್ಲಿ ಕೆಲವರಿಗೆ ನನ್ನ ಬಗ್ಗೆಯೂ ಅಸಮಾಧಾನವಿರಬಹುದೆ..? ನಾನು ಮುಂದಾಲೋಚನೆ ಮಾಡದೆ, ಸಿಕ್ಕ ಅವಕಾಶದಲ್ಲಿಯೇ ತೃಪ್ತಿ ಪಟ್ಟುಕೊಂಡು ಜೀವನದಲ್ಲಿ ಬಂದಂತೆ ಬದುಕಿದೆ. ಆದರೆ ಜೀವನದಲ್ಲಿ ಯಾವುದಾದರೂ ಸುಲಭದಲ್ಲಿ ಸಿಗುವುದುಂಟೆ..? ಈಗ ನಡೆದ ಘಟನೆಗಳಿಗೆಲ್ಲಾ ನಾಗೇಂದ್ರ ಪ್ರಸಾದ್‌ರನ್ನು ದೂಷಿಸುವುದು ಸರಿಯಲ್ಲವೆನಿಸಿತು. ಆಫೀಸ್‌ನಲ್ಲಿ ತನ್ನ ಪ್ರಯತ್ನ, ಪರಿಶ್ರಮ ಕಡಿಮೆಯಾಯಿತೆಂದು ಅನಿಸಿತು ಪ್ರಕಾಶ್ ರಾವ್‌ಗೆ. ಕಹಿ ಘಟನೆಯನ್ನೆಲ್ಲಾ ಮರೆತು ಸಿಹಿ ನೆನಪುಗಳೊಂದಿಗೆ ವಿಶ್ರಾಂತ ಜೀವನಕ್ಕೆ ಕಾಲಿಡುವುದೇ ಸರಿ ಅನಿಸಿತು. ಒಂದೆರಡು ಮಾತಿನಲ್ಲಿ ಎಲ್ಲರಿಗೂ ಧನ್ಯವಾದ ತಿಳಿಸಿ ಮಾತು ಮುಗಿಸುವುದೇ ಸೂಕ್ತವೆನಿಸಿತು. ಬೀಳ್ಕೊಡುಗೆಗೆ ಉತ್ತರವಾಗಿ ಮಾತನಾಡಲು ಅನುಕೂಲವಾಗಲೆಂದು ಕಾಗದದ ಮೇಲಿನ ಟಿಪ್ಪಣಿಯನ್ನು ಹರಿದು ಹಾಕಿ, ಮಲಗಿದ ನಿಮಿಷದಲ್ಲಿಯೇ ನಿದ್ರೆಗೆ ಜಾರಿದರು ಪ್ರಕಾಶ್ ರಾವ್.

* * *

# ಅನುವಾದದ ತೊಡಕುಗಳು

ಪ್ರೊ. ಪರಿಮಳಾ ಎಸ್. ನಾಯಕ

ಭಾರತಕ್ಕೆ ಸ್ವಾತಂತ್ರ ಸಿಗುವುದಕ್ಕಿಂತ ಮುಂಚಿನಿಂದಲೂ ಇಂಗ್ಲೀಷಿನಲ್ಲಿ ಶಿಕ್ಷಣ ಪಡೆದಂಥ ಲೇಖಕರು ಭಾರತೀಯ ಸಾಹಿತ್ಯವನ್ನು ಇಂಗ್ಲಿಷ್ ಭಾಷೆಗೆ ಅನುವಾದ ಮಾಡುವ ಕಲೆಯನ್ನು ರೂಢಿಸಿಕೊಂಡಿದ್ದರು. ಈ ಆಂಗ್ಲ ಭಾಷೆಯಿಂದ ಪ್ರಭಾವಿತರಾದ ಭಾರತೀಯ ವಿದ್ವಾಂಸರು ಆಂಗ್ಲ ಸಾಹಿತ್ಯವನ್ನು ಅಂತರ್ಗತಮಾಡಿಕೊಂಡು ಅವರು ಪಾಶ್ಚಾತ್ಯ ದೃಷ್ಟಿಕೋನ ಅಳವಡಿಸಿಕೊಂಡಿದ್ದರು. ಆದ್ದರಿಂದ ತಮ್ಮ ಭಾರತೀಯತೆಯನ್ನು ಕಳೆದುಕೊಂಡಂತೆ ಅನುಭವವಾಗುತ್ತಿತ್ತು. ತಮ್ಮ ಭಾರತೀಯತೆಯನ್ನು ಹುಡುಕುವ ಸಂದರ್ಭದಲ್ಲಿ ಭಾರತೀಯ ಸಾಹಿತ್ಯವನ್ನು ಆಂಗ್ಲ ಭಾಷೆಗೆ ಅನುವಾದ ಮಾಡುವ ಮೂಲಕ ತಮ್ಮತನವನ್ನು ಗುರುತಿಸಿಕೊಳ್ಳಲು ಪ್ರಯತ್ನ ಮಾಡಿದರು. ಶ್ರೀ ಅರವಿಂದ ಘೋಷರಂತೆ ವಿದ್ವಾಂಸರು ಭಾರತೀಯ ಸಾಹಿತ್ಯವೆಂದರೆ ಅಖಂಡ ಭಾರತದ ಸಾಹಿತ್ಯವಾದ ಸಂಸ್ಕೃತದಲ್ಲಿದ್ದ ಸಾಹಿತ್ಯವನ್ನು ಭಾಷಾಂತರ ಮಾಡಿ ತಮ್ಮನ್ನು ತಾವು ಗುರುತಿಸಿಕೊಳ್ಳಲು ಪ್ರಯತ್ನ ಪಟ್ಟರು. ಆದರೆ A. K. ರಾಮಾನುಜರಂತಹ ಸ್ವಾತಂತ್ರ್ಯೋತ್ತರದ ವಿದ್ವಾಂಸರು ಕೇವಲ ಸಂಸ್ಕೃತ ಭಾಷೆ ಅಷ್ಟೆ ಅಲ್ಲದೆ, ಭಾರತದ ಪ್ರಾದೇಶಿಕ ಕೊಡುಗೆಗಳಾದ ವಚನ ಸಾಹಿತ್ಯ, ದಾಸ ಸಾಹಿತ್ಯ, ಜನಪದ ಸಾಹಿತ್ಯ ಇವೆಲ್ಲವುಗಳನ್ನು ಆಂಗ್ಲ ಭಾಷೆಗೆ ಅನುವಾದ ಮಾಡುವ ಮೂಲಕ ಭಾರತೀಯತೆಯನ್ನು ಗುರುತಿಸಿಕೊಳ್ಳಲು ತೊಡಗಿದರು. ಅವರು ಹೇಳುತ್ತಾರೆ: "ಭಾಷಾ ಸಾಹಿತ್ಯ, ಜನಪರ, ಮೌಖಿಕ ಹಾಗೂ ಆಂಗಿಕ ಅಭಿವ್ಯಕ್ತಿಯನ್ನು ಒಳಗೊಂಡಿರುವುದರಿಂದ ಅದನ್ನು Englishಗೆ ಭಾಷಾಂತರಿಸುವುದು ಕಠಿಣವಾಗಿದೆ. ಯಾಕೆಂದರೇ English ಸಾಹಿತ್ಯವು ಗ್ರಂಥಸ್ಥ, ವೈಚಾರಿಕ ಮತ್ತು ಪಾಶ್ಚಾತ್ಯ ಪ್ರಕಾರಗಳನ್ನೊಳಗೊಂಡಿದೆ. ಭಾರತದ ಪ್ರಾದೇಶಿಕ ಸಾಹಿತ್ಯವನ್ನು Englishಗೇ ಅನುವಾದ ಮಾಡುವಾಗ ಕೇವಲ ಕಥನವಲ್ಲದೇ ಎರಡು ಭಾಷೆಯ ಮುಖಾಮುಖಿಯಾಗುತ್ತದೆ ಹಾಗೂ ಎರಡು ಬೃಹತ್ ಸಂಸ್ಕೃತಿಗಳ ಮುಖಾಮುಖಿಯಾಗುತ್ತದೆ. ಇಂತಹ ಸಂದರ್ಭದಲ್ಲಿ ಪಾಶ್ಚಾತ್ಯ ಸಾಹಿತ್ಯವನ್ನು ಓದಿದ ಲೇಖಕ ಈ ತದ್ವಿರುದ್ಧವಾದ ಸಾಹಿತ್ಯದ ಓದುಗರ ಮುಂದೆ ಕೊಂಡೊಯ್ಯುವಾಗ ತಾನು ಕೂಡ ಭಾರತೀಯ ಸಂಸ್ಕೃತಿಯನ್ನು ಅಂತರ್ಗತಗೊಳಿಸಬೇಕಾಗುತ್ತದೆ. ಇಂತಹ ಪ್ರಕ್ರಿಯೆಯಲ್ಲಿ ಭಾಷಾಂತರಕಾರನಿಗೆ ಭಾರತೀಯತೆಯನ್ನು ಕಂಡುಕೊಳ್ಳುವ

ಸಹಾಯವಾಗುತ್ತದೆ. ಒಂದು ಭಾಷೆಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ಇದ್ದ ಅನುವಾದಕ ಭಾರತೀಯ ಸಂಸ್ಕೃತಿಯನ್ನು ವಿವರಿಸುವ ಮೂಲಕ ಮತ್ತೆ ತನ್ನ ಭಾರತೀಯ ಅಸ್ಮಿತೆ (Identity)ಯನ್ನು ಇನ್ನೊಂದು ಸಲ ಕಂಡುಕೊಳ್ಳುತ್ತಾನೆ.

ಮೌಖಿಕ ಮತ್ತು ಆಂಗಿಕ ಪ್ರಧಾನವಾದ ಭಾರತೀಯ ಸಾಹಿತ್ಯವನ್ನು ಗ್ರಂಥಸ್ಥ ಮತ್ತು ವೈಚಾರಿಕವಾದಂತಹ ಇಂಗ್ಲಿಷ್ ಭಾಷೆಗೆ ಅನುವಾದಿಸುವುದು ಹೇಗೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಉದಾಹರಣೆಗೆ ಮಿರ್ಜಿ ಅಣ್ಣಾರಾಯರ ನಿಸರ್ಗ ಕಾದಂಬರಿಯಲ್ಲಿ ಅಥಣಿ ತಾಲೂಕಿನ ಪ್ರಾದೇಶಿಕ ಭಾಷೆ ಇದೆ. ಅದರಲ್ಲಿ ಹೀಗೆ ಹೇಳುತ್ತಾರೆ. "ಈಕಿಗ್ಯಾನ ದೊಡ್ಡಕಿ ಆಗಿದಾಳ. ಬಂದದ್ದು ಮಾಲಿ ಹೇಳದರ ಆನಿಗೆ ಸೆಗಿಭಾರದಂತ ಮಾತ ಹೇಳತಾಳ, ಮತ್ತೆ ಮ್ಯಾಲಿಂದ ಮೇಲೆ ಹೂಹೋತು, ಹುಜುರ ಹೋತು ಅಂತ ಅಂದರೆ, ಯಾರ ಕಪಾಳಕ್ಕೆ ಹೂಡಿಲಾಯ ಇಲ್ಲಾ". Englishನಲ್ಲಿ ಇದನ್ನು ಹೇಗೆ ಭಾಷಾಂತರಿಸುವುದು? ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಆನೆಗಳು ಸರಕುಗಳನ್ನು ಹೊತ್ತುಕೊಂಡು ಹೋಗುವ ಸಾಧನ ಎಂಬ ಕಲ್ಪನೆಯೇ ಇಲ್ಲ. ಆದ್ದರಿಂದ ಇದಕ್ಕೆ ತೀರ ಹತ್ತಿರವಾದ ಅನುವಾದ ಮಾಡುವುದಾದರೆ."She utters words that are like the straw that broke the camels back." ಎಂದು ಹೇಳಬಹುದು. ಆದರೆ, ಈ ವಾಕ್ಯದಲ್ಲಿ ಆನೆಯ ಉದಾಹರಣೆಯೇ ಇಲ್ಲ. ಅದೇ ರೀತಿ 'ಹುದುರು' ಎನ್ನುವ ಶಬ್ದವನ್ನು "ear studs" ಎಂದು ಅನುವಾದಿಸಬಹುದು. ಆದರೆ "ಹೂವು ಹೋಯ್ತು" ಎನ್ನುವುದನ್ನು ಹೇಗೆ ಅನುವಾದಿಸುವುದು? ಯಾಕೆಂದರೆ ಹೂ ಎಂದರೆ "Flower" ಎಂದು ಅನುವಾದವಾಗುತ್ತದೆ. ಆದರೆ Flowerಗೆ ಕಿವಿಯಲ್ಲಿ ಹಾಕಿಕೊಳ್ಳುವ ಆಭರಣ ಅಂತ ಅರ್ಥವಾಗುವುದಿಲ್ಲ. ಅದಕ್ಕೆ ಹೂವು ಬಿದ್ದು ಹೋದರೆ ಕಪಾಳಕ್ಕೆ ಯಾಕೆ ಹೊಡಿಬೇಕು ಎನ್ನುವ ಪ್ರಶ್ನೆ ಬರುತ್ತದೆ. ಆದರೆ ಅನುವಾದದಲ್ಲಿ ನನಗೆ ಇಲ್ಲಿ Flower ಅಂದಾಗ ಬರೀ ಹೂವಲ್ಲ ನನಗೆ ನನ್ನ ತಂದೆ-ತಾಯಿ ಬೆವರು ಸುರಿಸಿ ಮಾಡಿಸಿಕೊಟ್ಟ ಬಂಗಾರದ ಹೂ ಎಂದು ತಿಳಿದಾಗ ನನ್ನ ಭಾರತೀಯ Identity relate ಆಗುತ್ತದೆ.

ಇದೇ ನಿಟ್ಟಿನಲ್ಲಿ ಬಂದಂಥ ಡಾ. ಶ್ರೀ ಲೋಕಾಪುರ ಅವರ ಕಥೆಗಳು ತೀರ ಹತ್ತಿರವಾಗಿ ನೆಲಕ್ಕೆ ಹೊಂದಿಕೊಂಡಿರುವಂಥವು (Iland Specific) ಇಲ್ಲಿ ಹಳ್ಳಿ, ನದಿ, ಹೊಲ, ಓಣಿ, ಕೇರಿ ಎಲ್ಲವೂ ಪಾತ್ರಗಳಾಗಿ ಅಭಿವ್ಯಕ್ತವಾಗುತ್ತವೆ. ಲೇಖಕರಿಗೆ ಮತ್ತು ಹಳ್ಳಿಯ ಜನರಿಗೆ ನದಿಯೊಡನೆ ಇರುವ ಸಂಬಂಧವನ್ನು ಬೇರೆ ಬೇರೆ ಸಂಸ್ಕೃತಿಯ ಹಿನ್ನೆಲೆಯಲ್ಲಿ ವಿವರಿಸಲು ಬರುವುದಿಲ್ಲ. ಉದಾ:- 'ಅವ್ವ' ಕಥೆಯಲ್ಲಿ ನದಿಯ ತೀರದ ಮೇಲೆ 'ಚಿತೆ' ಮಾಡಿರುತ್ತಾರೆ. ಇಡೀ ಊರಿನ ಜನ ನದಿಯವರೆಗೆ ಅವರನ್ನು ಬೀಳ್ಕೊಡಲು ಬಂದಿರುತ್ತಾರೆ. ಮತ್ತು ಅವ್ವ ಊರು ಬಿಟ್ಟು ಹೋಗುವಾಗ ಅವಳ ಕೊನೆಯ ನಮಸ್ಕಾರ ನದಿಗೆ ಆಗಿರುತ್ತದೆ. ಅದೇ ರೀತಿ "ಉಜಳ್ಯಾ ಮತ್ತು ಕೋಣ" ಈ ಕಥೆಯಲ್ಲಿ 'ಕೋಣ' ಇದನ್ನು English ನಲ್ಲಿ ಹೇಳುವುದೇ ಕಷ್ಟ.

English ನಲ್ಲಿ ಎಮ್ಮೆಗೆ buffalo ಎನ್ನುತ್ತಾರೆ. ಆದರೆ ಕೋಣಕ್ಕೆ ಶಬ್ದವಿಲ್ಲ. ದಾರಿಯಿಲ್ಲದೆ ನಾನು bullock ಎಂದು ಭಾಷಾಂತರ ಮಾಡಿದ್ದೇನೆ. ಆದರೆ ಕಥೆಯಲ್ಲಿ ಕೊನೆಗೆ ಆ ಕೋಣದ ಕರುವನ್ನು ದೇವಿಗೆ ಬಲಿ ಕೊಡುತ್ತಾರೆ. ನಮ್ಮ ದೇಶವಲ್ಲಿ ಯಾವ ಸಂದರ್ಭದಲ್ಲಿ 'ಹೋರಿ'ಯನ್ನು ಬಲಿ ಕೊಡುವುದಿಲ್ಲ, ಆದರೆ bullock ಎಂದು ಅನುವಾದ ಮಾಡಿದ್ದರಿಂದ ಈ ಕಥೆಯಲ್ಲಿ ಹೋರಿಯನ್ನು ಬಲಿಕೊಟ್ಟರು ಎಂದು ಅರ್ಥವಾಗಿ ಬಿಡುತ್ತದೆ. ಆದ್ದರಿಂದ ಇಂತಹ ಪ್ರಾದೇಶಿಕ ಸಂದರ್ಭಗಳಿಗೆ English ನಲ್ಲಿ ಸಮಾನಾರ್ಥಕ ಶಬ್ದಗಳು ಇಲ್ಲವೇ ಇಲ್ಲ. ಇದು ಪ್ರಾದೇಶಿಕಕ್ಕೆ ನಿಮಿತವಾಗಿರುವುದರಿಂದ ಒಂದೇ ಒಂದು ತೊಡಕು.

2) ಎರಡನೆಯ ತೊಡಕು ಎಂದರೆ ಭಾರತೀಯ ಕಾವ್ಯಮೀಮಾಂಸೆಯಲ್ಲಿ ರಸ.ಧ್ವನಿ. ಅಲಂಕಾರಗಳು ಅನುಭವಗಮ್ಯವಾದರೆ. ಪಾಶ್ಚಾತ್ಯ ಕಾವ್ಯಮೀಮಾಂಸೆ ನಿರ್ಣಾಯಕದ ತಳಹದಿಯ ಮೇಲೆ ನಿಂತಿದೆ. ಉದಾ:– 'ಗುಂಡಕಲ್ಲಿನಂಗ ಇದ್ದಾನೆ,' ಅಪ್ಪ ಕಥೆಯಲ್ಲಿ ಅಪ್ಪನನ್ನು ಹೋಲಿಸುವಾಗ, ನಾಯಕ ತಂದೆಗೆ ಈ ಮಾತಿನ ಹೊಲಿಕೆಯನ್ನು ವರ್ಣಿಸುತ್ತಾನೆ. ಇದನ್ನು ಅನುವಾದದಲ್ಲಿ "as hand as a rock" ಎಂದರೆ ಭಾಷಾಂತರ ಸರಿಯಾಗಿದೆ. ಆದರೆ ಅದು ಕಟುಸ್ಮೃದಯ ಎಂದಾಗುತ್ತದೆ. ಅಲ್ಲದೆ 'ಗುಂಡಕಲ್ಲು' ಅದರ ಸಮಿಪದ ಗ್ರಾಮೀಣ ಬದುಕಿನ ಚಿತ್ರಣಗಳು Rock ಎಂದಾಕ್ಷಣ ಮರೆಯಾಗುತ್ತವೆ. ಆದ್ದರಿಂದ ನಾವಿಲ್ಲಿ ಅನುಭವಗಮ್ಯವಾದ ಆನಂದವನ್ನು ಬಿಟ್ಟು ನಿರ್ಣಾಯಕ ಅರ್ಥದಲ್ಲಿಯೇ ಸಮಾದಾನ ಹೊಂದಬೇಕಾಗುತ್ತದೆ.

3) ಮತ್ತೊಂದು ತೊಡುಕೇನೆಂದರೆ 'ಶಬ್ದ'ಗಳ 'ಧ್ವನಿ'ಗಳ ಅನುವಾದ A Wolter jong ತನ್ನ ನಿಬಂಧ "A diatectic at Aural objective co-relative" (1972 499) ದಲ್ಲಿ ಹೇಳುತ್ತಾರೆ: "ಲಿಖಿತ ಶಬ್ದಗಳನ್ನು ನಾವು ನೋಡುವಾಗ ಅದರ ಅರ್ಥವನ್ನಷ್ಟೇ ಗಮನಿಸುತ್ತೇವೆ. ಅದರ ಧ್ವನಿಯನ್ನು ಗ್ರಹಿಸುವುದಿಲ್ಲ. ಆದ್ದರಿಂದ ಬಹುತೇಕ ಭಾರತೀಯ ಸಾಹಿತ್ಯವಾಗಿವೆ. ಉದಾ:– ಕೀರ್ತನ. ಹಾಡು. ಬಹುರೂಪಿಗಳು. ಇತ್ಯಾದಿ. ಆದ್ದರಿಂದ ಭಾರತೀಯ ಸಾಹಿತ್ಯದಲ್ಲಿ ಬರೀ ಅರ್ಥಾಲಂಕಾರಕ್ಕಷ್ಟೇ ಅಲ್ಲದೆ ಶಬ್ದಾಲಂಕಾರಕ್ಕೂ ಮಹತ್ವವಿದೆ. ಉದಾ:– ಯಮಕ ಇತ್ಯಾದಿಗಳು. ಆದರೆ ಇಂಗ್ಲೀಷ್‌ನಲ್ಲಿ ಈ ವ್ಯವಸ್ಥೆ ಇಲ್ಲ. ಅದಕ್ಕೆ ಇಂಗ್ಲಿಷ್ ಭಾಷೆ ಅರ್ಥಕ್ಕಷ್ಟೇ ನಿಯಮಿತವಾಗಿದೆ. It is Ideographic ಆದರೆ ಶಬ್ದಗಳಿಂದ ಉದ್ಭವವಾಗುವ ಧ್ವನಿಯ ತರಂಗಗಳು ಸಾಕಷ್ಟಿರುತ್ತವೆ. ಉದಾ:– ಅತೀ ಸಾಮಾನ್ಯವಾದ ಶಬ್ದಗಳು 'ಏನು'. ಇದನ್ನು ಲೋಕಾಪುರವರು ತಮ್ಮ ಒಂದು ಕಥೆಯಲ್ಲಿ 'ಯಾನು' ಎಂದು ಹೇಳಿದ್ದಾರೆ. ಇಂಗ್ಲೀಷ್‌ನಲ್ಲಿ ಇವನ್ನು 'what' ಎಂದು ಅನ್ನುವುದನ್ನು ಬಿಟ್ಟರೆ ಬೇರ್‍ಯಾವ ರೀತಿಯಲ್ಲೂ ಹೇಳಲು ಬರುವುದಿಲ್ಲ. ಆದರೆ 'ನೀರು ಓಡಿಯಲೇ ಚಾರ್ಮಿ' ಎಂಬ ಕಥೆಯಲ್ಲಿ 'ಯಾನು' ಎಂದು ಕೇಳಿದಾಗ ಅದರ ಅರ್ಥ "ಇಂಥ ಹೊತ್ತಿನ್ಯಾಗ ಹೀಂಗ್ಯಾಕ ಮಾಡತಿ' ಎಂದು ಅರ್ಥವಾಗುತ್ತದೆ. ಇದು ಬರೀ ಧ್ವನಿಯ ತರಂಗದ ಮೇಲಿಂದ ಈ

ಅರ್ಥ ಹೊರಹೊಮ್ಮುತ್ತದೆ. ಇಂಗ್ಲೀಷ್‌ನಲ್ಲಿ ಇದಕ್ಕೆ ಇಡೀ ವಾಕ್ಯವನ್ನೇ ಬರೆಯಬೇಕಾಗುತ್ತದೆ (oh! how could you do this to me now?)

ಇನ್ನೊಂದು ತೊಡಕೆಂದರೆ ಯಥಾವತ್ತಾಗಿ ಅನುವಾದ ಮಾಡಿದಾಗ ಆಗುವ ತೊಡಕುಗಳು Rifftar tere-(1992-204-217) "Literaryness-Inducing Devices" ಯಥಾವತ್ತಾಗಿ ಭಾಷಾಂತರ ಮಾಡುವುದಕ್ಕಿಂತ ಸಮಾನಾರ್ಥ ಬರುವಂಥ ಶಬ್ದಗಳು ಅಥವಾ ವಾಕ್ಯಗಳನ್ನು ಬಳಕೆ ಮಾಡಿದರೆ ಸೂಕ್ತವೆನ್ನುತ್ತಾರೆ. ಇದರಿಂದ ಅನುವಾದ ಮಾಡುವಾಗ ಅರ್ಥದ ಅನುವಾದವಾದರೆ ಸಾಕು. ಶಬ್ದಾರ್ಥವಾಗುವ ಕಾರಣವಿಲ್ಲ. ಏಕೆಂದರೆ ಕಾವ್ಯಗಳಲ್ಲಿ ಬರುವ ಅಲಂಕಾರಗಳೆಲ್ಲ ಧ್ವನಿತತ್ವದ ತಳಹದಿಯ ಮೇಲೆ ಇದೆ. ಆದ್ದರಿಂದ ಇನ್ನೊಂದು ಭಾಷೆಯಲ್ಲಿ ಅದನ್ನು ಅನುವಾದ ಮಾಡುವದು ಸಾಧ್ಯವಿಲ್ಲ. ಅದಕ್ಕೆ ಸಮಾನಾರ್ಥವನ್ನು ಹೇಳುವುದರ ಜೊತೆಗೆ ಸಮಾನವಾದ ಲೋಕೋಕ್ತಿಗಳಿದ್ದರೆ ಬಳಸಬಹುದು. ಈ ರೀತಿ ಬರುವ ಅನುವಾದಗಳನ್ನು ಶ್ರೀ ಯು. ಆರ್. ಅನಂತಮೂರ್ತಿ ಮತ್ತು ಶಾಂತಿನಾಥ ದೇಸಾಯಿಯರ ಸಾಹಿತ್ಯ ಗ್ರಂಥಸ್ಥ ಇರುವುದರಿಂದ ಭಾಷಾಂತರದಲ್ಲಿ ಶಬ್ದಗಳ ಅಲಂಕಾರಗಳು ದೊರೆಯುತ್ತವೆ.ಆದರೆ ಪ್ರಾದೇಶಿಕ ಸ್ಪಂದನಗೊಳ್ಳುವಾಗ ಶ್ರೀ ಮಿರ್ಜಿ ಅಣ್ಣಾರಾಯ ಅಥವಾ ಬಾಳಾಸಾಹೇಬ ಲೋಕಾಪುರ ಅವರ ಕಥೆಗಳನ್ನು ಸಮಾನಾರ್ಥದಲ್ಲಿ ಅನುವಾದ ಮಾಡುವುದು ಕಷ್ಟ. ಉದಾ:- 'ಬಾವಲ್ಯಾ ಮತ್ತು ಕೋಣ' ಕಥೆಯಲ್ಲಿ ಬರುವ ವಾಕ್ಯ 'ನಿನ್ನ ಹೊಟ್ಯಾಗ ಕರುಳು ಇದಾವ. ಏನ ಹುಲ್ಲಿನ ಬೇರ ಅದಾವ' ಇದರ ಸಮಾನವಾದ ಲೋಕೋಕ್ತಿ ಆಂಗ್ಲಭಾಷೆಯಲ್ಲಿ ಇಲ್ಲ. ಯಾಕೆಂದರೆ 'ಕರುಳು' ಇದು ಅಂತಃಕರಣದ ಸಂಕೇತವೆಂದು ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಅರ್ಥ ಮಾಡಿಕೊಂಡಿಲ್ಲ. ಅವರ ಸಂಸ್ಕೃತಿಯಲ್ಲಿ ಕರುಳು ಹುಲ್ಲಿನದಿದ್ದರೇನು ಮಾಂಸದ್ದಿದ್ದರೇನು ಕಡಿದು ತಿನ್ನುವುದೊಂದೇ ಗೊತ್ತು. ಇಂತಹ ಸಂದರ್ಭದಲ್ಲಿ ನಾನು ರೆಫರಾಟೆರಿ ಹೇಳಿದ ಮಾದರಿಯನ್ನು ಮುರಿದು ಯಥಾರ್ಥ ಭಾಷಾಂತರ ಮಾಡಿದ್ದೇನೆ. ಇದರಿಂದ ಇಂಗ್ಲಿಷ್ ವಾಕ್ಯ "Do you have grass roots for intestines?" ಇದು ಇಂಗ್ಲಿಷ್ ವಾಕ್ಯ ಅಭಾಸ ಎನ್ನಿಸಬಹುದು. ಆದರೆ ಸಾಂದರ್ಭಿಕವಾಗಿ ಇದರ ಅರ್ಥ ಹೊಳೆಯುತ್ತದೆ ಮತ್ತು ಸಾಂಸ್ಕೃತಿಕ ಹಿನ್ನೆಲೆಯ ಝಲಕ್ ತೋರಿಸಿದಂತೆ ಎನಿಸುತ್ತದೆ.

ಇದರಿಂದ ಹೊರ ಹೊಮ್ಮುವದೇನೆಂದರೆ, ಒಂದು ಸಂಸ್ಕೃತಿಯನ್ನು ಇನ್ನೊಂದು ಸಂಸ್ಕೃತಿಯೊಂದಿಗೆ ಹೊರಹೊಮ್ಮಿಸುವ ತೊಡಕು ಯಾಕೆಂದರೆ ಪ್ರತಿಯೊಂದು ಶಬ್ದಕ್ಕೂ ತನ್ನದೇ ಆದ ಭಾವಾರ್ಥ. ಅದಕ್ಕೆ ಅಂಟಿಕೊಂಡ ಮೌಲ್ಯಗಳು, ದೃಶ್ಯಗಳು, ಅನುಭವಗಳು ಸುತ್ತಿಕೊಂಡಿರುತ್ತವೆ. ಇವನ್ನು ಸಾಂಸ್ಕೃತಿಕ ಹಿನ್ನೆಲೆಯಾಗಿ ಸ್ವಂತ ಭಾಷೆಯಲ್ಲಿ ಸಹಜವಾಗಿ ಅಭಿವ್ಯಕ್ತಿಯಾಗಿ ಜಟ್ಟರಾಗುತ್ತದೆ. ಉದಾ:- 'ಆರತಿ', 'ಹಬ್ಬ' 'ಹುಣ್ಣಿಮೆ' 'ಹೋಳಿಗೆ' ಇತ್ಯಾದಿ. ಆದರೆ ಇವುಗಳನ್ನು ಭಾಷಾಂತರ ಮಾಡಿದಾಗ ಇವುಗಳಿಗೆ ಇರುವಂಥ ಸಾಂಸ್ಕೃತಿಕ ಹಿನ್ನೆಲೆಯಲ್ಲಿ Festival. Moonlight ಈ

ಶಬ್ದಗಳಿಗೆ ಇಲ್ಲ. ರಂಗೋಲಿ, ಆರತಿ, ಹೋಳಿಗೆ ಇವುಗಳಿಗೆ ಸಮಾರ್ಥ ಶಬ್ದಗಳೇ ಇಲ್ಲ. ಇದನ್ನು ನಾವು ಯಥಾರ್ಥವಾಗಿ ವಿವರಿಸಬಹುದು ಅಥವಾ 'footnote' ಕೊಟ್ಟು ವಿವರಿಸಬಹುದು. ಆದರೆ ಸಂಸ್ಕೃತಿಯನ್ನು ಹೇಗೆ ವರ್ಗೀಕರಿಸಬಹುದು? ಇಂತಹ ಸಂದರ್ಭದಲ್ಲಿ ಅನುವಾದಕ ಮೂಲ ಕಥೆಯನ್ನು ಪ್ರವೇಶಿಸಿ, ಅದನ್ನು ಅಂತರ್ಗತ ಮಾಡಿಕೊಂಡು ಇನ್ನೊಂದು ಭಾಷಾ ವ್ಯವಸ್ಥೆಯಲ್ಲಿ ಅಭಿವ್ಯಕ್ತಿಗೊಳಿಸಬೇಕಾಗುತ್ತದೆ. ಹೀಗೆ ಅನೇಕ ತೊಂದರೆಗಳು ಬಂದರೂ ಸಹಿತ ನಾವು ಭಾಷಾಂತರ ಮಾಡುತ್ತೇವೆ. ಯಾಕೆಂದರೆ "ಒಂದು ಸಾಹಿತ್ಯದ ಮೌಲ್ಯ ಭಾಷೆಯ ತೊಡಕಿನಿಂದ ಮೇಲಿರುತ್ತದೆ."

* * *

# ಭಾಷಾಂತರ ಮತ್ತು ಸಂವಹನದ ಸಾಧ್ಯತೆಗಳು

ಬಸವರಾಜ ಡೋಣೂರ

ಭಾಷಾಂತರ ಆಧುನಿಕ ಅಗತ್ಯಗಳಲ್ಲಿ ಒಂದಾಗಿದೆ. ಭಾಷಾಂತರ ನಾವು ಇತ್ತೀಚೆಗೆ ಕರಗತ ಮಾಡಿಕೊಂಡ ಮಹತ್ವದ ಕಲೆಗಳಲ್ಲಿ ತುಂಬಾ ಉಪಯುಕ್ತವೂ ಮೌಲಿಕವೂ ಆಗಿದೆ. ಭಾಷಾಂತರದ ಮೂಲಕ ಬಹಳಷ್ಟು ಸಾಧಿಸಿದ್ದರೂ ನಾವು ಕ್ರಮಿಸಬೇಕಾದ ದಾರಿ ಇನ್ನೂ ಸಾಕಷ್ಟಿದೆ. ಜಾಗತೀಕರಣದ ಸಂದರ್ಭದಲ್ಲಿ ಭಾಷಾಂತರಕ್ಕೆ ಹಿಂದೆಂದಿಗಿಂತಲೂ ಇನ್ನೂ ಹೆಚ್ಚಿನ ಪ್ರಾಶಸ್ತ್ಯ ಪ್ರಾಪ್ತವಾಗಿದೆ. ಭಾಷಾಂತರದ ಮೂಲಕವೇ ಜಾಗತೀಕರಣದ ಪರಿಭಾಷೆ ಇಂಗ್ಲಿಷ್ ಭಾಷೆಯ ತಿಳಿವಳಿಕೆ ಇರದ ಜನರಿಗೂ ತಿಳಿಯುತ್ತಿದೆ.

ಭಾಷಾಂತರ ಸಂವಹನ ಕ್ರಿಯೆಗೆ ಹೊಸ ಹೊಸ ಸಾಧ್ಯತೆಗಳ ಬಾಗಿಲುಗಳನ್ನು ತೆರೆಯುತ್ತಿರುವುದು ಎಷ್ಟು ದಿಟವೋ ಸಂವಹನ ಪ್ರಕ್ರಿಯೆ ಹೊಸ ಹೊಸ ಸಮಸ್ಯೆಗಳನ್ನು, ಸವಾಲುಗಳನ್ನು ಎದುರಿಸಲು ಭಾಷಾಂತರ ಕಾರಣವಾಗಿರುವುದೂ ಅಷ್ಟೇ ವಾಸ್ತವವಾಗಿದೆ.

ಸಂವಹನದ ಸಾಧ್ಯತೆಗಳನ್ನು ಹೆಚ್ಚಿಸುವಲ್ಲಿ ಭಾಷಾಂತರ ನಿರ್ವಹಿಸುತ್ತಿರುವ ಪಾತ್ರದ ಬಗ್ಗೆ ಒಂದು ಸ್ಥೂಲವಾದ ಚರ್ಚೆಯನ್ನು ಈ ಸಂದರ್ಭದಲ್ಲಿ ಕೈಕೊಳ್ಳಬಹುದು. ಹಲವು ಭಾಷೆ ಹಾಗೂ ಉಪಭಾಷೆಗಳನ್ನು ಮಾತನಾಡುವಂಥ ಭಾರತದಂಥ ದೇಶದಲ್ಲಿ ಭಾಷಾಂತರ ತುಂಬಾ ಸಹಾಯಕಾರಿಯಾಗಿದೆ. ಭಾಷಾಂತರದ ಮೂಲಕವೇ ಒಂದು ಪ್ರಾಂತದ ಜನರು ಇನ್ನೊಂದು ಪ್ರಾಂತದ ಜನರ ಸಾಹಿತ್ಯ, ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗಿದೆ. ಭಾರತೀಯರನ್ನು ಒಟ್ಟುಗೂಡಿಸುವ ನಿಟ್ಟಿನಲ್ಲಿ ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳು ನಿರ್ಣಾಯಕವಾದ ಪಾತ್ರ ಆಡುತ್ತಿವೆ ಎಂದರೆ ಉತ್ಪ್ರೇಕ್ಷೆಯಾಗದು. ಇಂಗ್ಲಿಷ್ ಹಾಗೂ ಹಿಂದಿ ಭಾಷೆಗಳಿಂದ ಭಾರತೀಯ ಪ್ರಾಂತೀಯ ಭಾಷೆಗಳಿಗೆ ಮತ್ತು ಪ್ರಾಂತೀಯ ಭಾಷೆಗಳಿಂದ ಇಂಗ್ಲಿಷ್ ಹಾಗೂ ಹಿಂದಿಗೆ ಭಾಷಾಂತರ ನಿರಂತರವಾಗಿ ನಡೆದೇ ಇದೆ. ಭಾಷಾಂತರ ಹೇಗೆ ಸಂವಹನದ ಸಾಧ್ಯತೆಗಳನ್ನು ಹಿಗ್ಗಿಸುತ್ತಿದೆಯೆಂಬುದಕ್ಕೆ ಕೆಲವು ಉದಾಹರಣೆಗಳನ್ನು ನೋಡಬಹುದು:

ಸಾಕಷ್ಟು ವಾದ-ವಿವಾದಗಳ, reservations ಗಳ ಮತ್ತು ದೂರುಗಳ ಮಧ್ಯೆಯೂ ಹಿಂದಿ ರಾಷ್ಟ್ರಭಾಷೆಯಾಗಿ ಹಾಗೂ  ಇಂಗ್ಲಿಷ್ ಲಿಂಕ್ ಭಾಷೆ ಅಥವಾ

ಅಂತಾರಾಷ್ಟ್ರೀಯ ಭಾಷೆಯಾಗಿ ರೂಪುಗೊಂಡಿವೆ. ಈ ಭಾಷೆಗಳು ಭಾರತೀಯ ಬಹುತೇಕ ಪ್ರಾಂತೀಯ ಭಾಷೆಗಳ ಮೇಲೆ ನೇರವಾದ ಹಾಗೂ ಗಾಢವಾದ ಪ್ರಭಾವ ಬೀರಿವೆ. ಇದರ ಫಲಶೃತಿಯಾಗಿ ಹಿಂದಿ ಹಾಗೂ ಇಂಗ್ಲಿಷ್ ಭಾಷೆಗಳ ಶಬ್ದಗಳು, ನುಡಿಗಟ್ಟುಗಳು, ವಾಕ್ಯರಚನಾ ಪದ್ಧತಿಗಳು ಪ್ರಾಂತೀಯ ಭಾಷೆಗಳ ಮೇಲೂ ಪ್ರಾಂತೀಯ ಭಾಷೆಗಳು ಈ ಭಾಷೆಗಳ ಮೇಲೂ ಪರಸ್ಪರ ಪ್ರಭಾವ ಬೀರುತ್ತಿವೆ. ಅಲ್ಲದೆ, ಈ ಭಾಷೆಗಳ ಪರಸ್ಪರ ಕೊಡುಕೊಳ್ಳುವಿಕೆಗೆ ಭಾಷಾಂತರ ಪೂರಕವಾಗಿ ಕೆಲಸ ಮಾಡುವುದರ ಮೂಲಕ ಸಂವಹನದ ಸಾಧ್ಯತೆಗಳನ್ನು ಹೆಚ್ಚಿಸುತ್ತದೆ. ಸಂಸ್ಕೃತ ಒಂದು ಭಾಷೆಯಾಗಿ ಜೀವಂತವಾಗಿರದಿದ್ದರೂ ಪ್ರಾಂತೀಯ ಭಾಷೆಗಳಲ್ಲಿ ಅದು ಜೀವಂತವಾಗಿದೆ. ಪ್ರತಿಯೊಂದು ಭಾಷೆಯಲ್ಲೂ ಸಂಸ್ಕೃತ ಶಬ್ದಗಳನ್ನು ನಾವು ಕಾಣುತ್ತೇವೆ. ನಮಗೆ ನಮ್ಮ ಪ್ರಾಂತೀಯ ಭಾಷೆಗಳ Script ಅರ್ಥವಾಗದಿದ್ದರೂ ಭಾಷಾಂತರಗೊಂಡ ಶಬ್ದಗಳ ಸಹಾಯದಿಂದ ತಕ್ಕ ಮಟ್ಟಿಗೆ ಆ ಭಾಷೆಯನ್ನು/ಗಳನ್ನು ಅರ್ಥ ಮಾಡಿಕೊಳ್ಳಬಹುದು.

ಉದಾಹರಣೆಗೆ, ಈ ಇಂಗ್ಲಿಷ್ ವಾಕ್ಯ ಗಮನಿಸಿ :

...... the press was fundamentally different from its 1980s avatar.

ಈ ವಾಕ್ಯಾಂಶವನ್ನು ನಾವು ಕೊಂಚ ವಿಶ್ಲೇಷಿಸಬಹುದು. ಇಂಗ್ಲಿಷ್ ಭಾಷೆಯ ಕನಿಷ್ಠ ತಿಳಿವಳಿಕೆ ಹೊಂದಿದ ವ್ಯಕ್ತಿ ಕೂಡ ಇದರ ಅರ್ಥವನ್ನು ಗ್ರಹಿಸಬಹುದು. Avatar ಸಂಸ್ಕೃತ ಪದ. ಈ ಪದ ಎಲ್ಲಾ ಪ್ರಾಂತೀಯ ಭಾಷೆಗಳಲ್ಲೂ ಉಪಲಬ್ಧ ವಿದೆ. ಅಲ್ಲದೆ, ಈ ಶಬ್ದಕ್ಕೆ ಎಲ್ಲಾ ಭಾಷೆಗಳಲ್ಲೂ ಒಂದೇ ಅರ್ಥ ಇದೆ. ಹೀಗಾಗಿ ಈ ಪದ ಇಂಗ್ಲಿಷ್‌ನಲ್ಲಿ ಲಿಪಿಕರಣಗೊಂಡಾಗ ಸಂವಹನ ಸುಲಭವಾಗುತ್ತದೆ.

ಭಾಷಾಂತರ ಯಾಂತ್ರಿಕವಾದರೆ ಸಂವಹನದ ತೊಂದರೆಗಳು ಕಾಣಿಸಿಕೊಳ್ಳುತ್ತವೆ. ಭಾಷಾಂತರ ಅಂದರೆ ಒಂದು ಭಾಷೆಯಲ್ಲಿನ ಪದಗಳಿಗೆ ಇನ್ನೊಂದು ಭಾಷೆಯಲ್ಲಿನ ಸಮಾನಾರ್ಥವುಳ್ಳ ಪದಗಳನ್ನು ತಂದಿಡುವುದಲ್ಲ. ಪ್ರತಿಯೊಂದು ಭಾಷೆಗೆ ತನ್ನದೆ ಆದ ಸಂಸ್ಕೃತಿ ಇರುತ್ತದೆ. ಅನುವಾದಕ Source language ದ ಸಂಸ್ಕೃತಿಯನ್ನು ಕೂಡ Target language ನಲ್ಲಿ ಭಾಷಾಂತರ ಮಾಡಬೇಕಾಗುತ್ತದೆ. ಈ ಸಂಸ್ಕೃತಿಯನ್ನು ಭಾಷಾಂತರಿಸುವಾಗ ತುಂಬಾ ಎಚ್ಚರ ವಹಿಸಬೇಕಾಗುತ್ತದೆ. ಸೂಕ್ತ ಎಚ್ಚರ ವಹಿಸದಿದ್ದರೆ ಅದು ಇನ್ನೊಂದು ರೀತಿಯ ಸಂವಹನದ ಸಮಸ್ಯೆಗೆ ದಾರಿ ಮಾಡಿಕೊಡುತ್ತದೆ. ಸಂಸ್ಕೃತಿಯನ್ನು ಇನ್ನೊಂದು ಭಾಷೆಯಲ್ಲಿ ಯಥಾವತ್ತಾಗಿ ತಂದರೆ ಸಾಲದು. ಇಂಥ ಸಂದರ್ಭದಲ್ಲಿ ಅವನು cultural equivalents ಗಳನ್ನು ತರಬೇಕಾಗುತ್ತದೆ. ಉದಾಹರಣೆಗೆ, ಕರ್ನಾಟಕದ ಒಂದು ಹಳ್ಳಿಯಲ್ಲಿ ನಡೆಯುವ ಮದುವೆಯ ಸಮಾರಂಭದ ವರ್ಣನೆಯನ್ನು ಇಂಗ್ಲೀಷಿಗೆ ಭಾಷಾಂತರ ಮಾಡುವಾಗ ಆ ಭಾಷೆಯಲ್ಲಿನ cultural equivalents ಗಳನ್ನು ಬಳಸಲೇಬೇಕಾಗುತ್ತದೆ. ಅಂದರೆ ಭಾಷಾಂತರದ ಕೆಲಸ ಒಂದು ಕಲಾಕೃತಿಯನ್ನು ಅನುವಾದ ಮಾಡುವುದರ ಜೊತೆಗೆ ಒಂದು

ಸಂಸ್ಕೃತಿಯನ್ನು ಅನುವಾದ ಮಾಡುವುದಾಗಿದೆ. ಈ ಕುರಿತು Vladimir Ivir ಹೀಗೆ ಹೇಳುತ್ತಾನೆ :

Defining the elements of culture that are to be transmitted is a procedure that relies on what members of the target culture know in an attempt to make them aware of what they do not know. Put differently, defining means reducing the unknown to the known and the unshared to the shared.

ಭಾಷಾಂತರ ಕೆಲಸ ನಾವು ತಿಳಿದಷ್ಟು ಸರಳವೂ ಅಲ್ಲ, ಸುಲಭವೂ ಅಲ್ಲ. ಅದು ಭಾಷಾಂತರಕಾರನಿಂದ ಸಾಕಷ್ಟು ತಾಳ್ಮೆ, ಪರಿಶ್ರಮ ಹಾಗೂ ಎಚ್ಚರಿಕೆಯನ್ನು ನಿರೀಕ್ಷಿಸುತ್ತದೆ. ಅಲ್ಲದೆ, ಭಾಷಾಂತರಕಾರನಿಗೆ Source language ಮತ್ತು Target language ಗಳ ಮೇಲೆ ಪ್ರಭುತ್ವ ಇರಬೇಕಾಗಿರುತ್ತದಲ್ಲದೆ. ಆಯಾ ಸಂಸ್ಕೃತಿಗಳ ಸೂಕ್ಷ್ಮ ತಿಳಿವಳಿಕೆ ಕೂಡ ಅವನು ಹೊಂದಿರಬೇಕಾಗುತ್ತದೆ. ಇಲ್ಲದೆ ಹೋದಲ್ಲಿ ಸಂವಹನಕ್ಕೆ ಸಂಬಂಧಿಸಿದ ಹಲವು ತೊಂದರೆಗಳು ಹುಟ್ಟಿಕೊಳ್ಳುತ್ತವೆ. ಇಲ್ಲಿ ಕೆಲವು ಉದಾಹರಣೆಗಳನ್ನು ಕೊಡಬಹುದು:

ಇಂಗ್ಲಿಷಿಗೆ ಅನುವಾದಗೊಂಡ ಕನ್ನಡ ಕಥೆಯೊಂದರಲ್ಲಿ ಕಾಣಿಸಿಕೊಂಡ ಕೆಲವು expressions ಗಳನ್ನು ಚರ್ಚೆಗೆ ಎತ್ತಿಕೊಳ್ಳಬಹುದು.

1. Rajappa left informing Malakavva that he was going to submit a coconut to God Siddharmeshwara (offer a pooja at the temple of Lord Siddharameshwar)
2. He went and came back drinking wine upto his troat (drank heavily)
3. She beat the door (She knocked at the door)
4. Sister, parents house can for how many days? (Sister, how long can a girl stay at her parents' house?)
5. If you shed tears like this, something may happen. Remember, tomorrow rice will fall upon you (you are getting married tomorrow)

ಸಂವಹನದ ಕೆಲಸವನ್ನು ಸುಲಭಗೊಳಿಸುವುದೇ ಭಾಷಾಂತರದ ಪ್ರಮುಖ ಉದ್ದೇಶ. ಮೂಲಭಾಷೆಯಲ್ಲಿ ರಚನೆಗೊಂಡ ಕೃತಿಯನ್ನು ಓದಿ ಅರ್ಥವನ್ನು ಗ್ರಹಿಸುವುದು ಕಠಿಣವಾದಾಗ ನಾವು ಅನುವಾದದ ಮೊರೆ ಹೋಗುತ್ತೇವೆ. ಆದರೆ ಭಾಷಾಂತರ ಮಾಡುವ ಕ್ರಮದ ಬಗ್ಗೆ ಗೊಂದಲಗಳಿವೆ. "ಭಾಷಾಂತರ ಮೂಲಕ್ಕೆ ನಿಷ್ಠವಾಗಿ ನಡೆದುಕೊಳ್ಳಬೇಕು. ಭಾಷಾಂತರದ ಕೆಲಸವೆಂದರೆ ಮೂಲಕೃತಿಯನ್ನು ಆ ಭಾಷೆ ಗೊತ್ತಿಲ್ಲದವರಿಗೆ ಪರಿಚಯಿಸುವುದು. ಭಾಷಾಂತರ ಮೂಲಕೃತಿಗೆ ನಿಷ್ಠವಾಗಿದ್ದರೆ

ಅದು ಒಳ್ಳೆಯ ಭಾಷಾಂತರ ನಿಜ" ಎಂಬುದು ಕೆಲವರ ವಾದವಾದರೆ, ಭಾಷಾಂತರ ಮೂಲ ಕೃತಿಗೆ ನಿಷ್ಠವಾಗಿ ನಡೆದುಕೊಳ್ಳಲೇಬೇಕೆಂದೇನೂ ಇಲ್ಲ. ಒಂದು ಸಾಹಿತ್ಯ ಕೃತಿಯನ್ನು ಮೂಲವಾಗಿಟ್ಟುಕೊಂಡು ಅನುವಾದಕ ಇನ್ನೊಂದು ಹೊಸ ಕೃತಿಯನ್ನು ಸೃಷ್ಟಿಸಬಹುದು. ಅಲ್ಲದೆ, "ಮೂಲಕೃತಿಯಲ್ಲಿ ಕೊರತೆಗಳಿದ್ದರೆ ಭಾಷಾಂತರ ಅವುಗಳನ್ನು ತುಂಬಿಕೊಳ್ಳಬಹುದು." ಇಲ್ಲಿ ಗಮನಿಸಬೇಕಾದ ಇನ್ನೊಂದು ಪ್ರಮುಖ ಸಂಗತಿಯೇನೆಂದರೆ ಅನುವಾದಕ ಮೂಲಕೃತಿಗೆ ನಿಷ್ಠವಾಗಿದ್ದುಕೊಂಡೇ ಸಂವಹನಕ್ಕೆ ತೊಂದರೆಯಾಗದಂತೆ, ಭಾಷಾಂತರದ ಉದ್ದೇಶಕ್ಕೆ ಚ್ಯುತಿ ಬರದಂತೆ ಭಾಷಾಂತರ ಮಾಡಬಹುದು. ಶ್ರೇಷ್ಠ ಅನುವಾದಕ ಒಂದು ಕೃತಿಯನ್ನು ಅನುವಾದ ಮಾಡುವಾಗ ಮೂಲ ಕೃತಿಗೆ ಹೆಚ್ಚಿನ ಅರ್ಥಪೂರ್ಣತೆಯನ್ನು ತಂದು ಕೊಡುತ್ತಾನೆ.

ಭಾಷಾಂತರದ ಪ್ರಮುಖ ಕೆಲಸ ಸಂವಹನವನ್ನು ಸಾಧಿಸುವುದೇ ಆಗಿದೆ ಎಂಬುದನ್ನು ನಾವು ಈಗಾಗಲೆ ಗುರುತಿಸಿದ್ದೇವೆ. ಹೀಗಾಗಿ ಭಾಷಾಂತರ ಸಂವಹನ ನೆರವೇರಲು ಸಹಕರಿಸುವಂತಿರಬೇಕು. ಈ ರೀತಿಯ ಭಾಷಾಂತರ ಮಾಡಲು ಅನುವಾದಕ ಸಾಕಷ್ಟು ಎಚ್ಚರಿಕೆ ವಹಿಸಬೇಕಾಗುತ್ತದೆ. ಅದಕ್ಕಾಗಿ ಆತ cultural equivalent ಗಳನ್ನು ವಿಪುಲವಾಗಿ ಬಳಸಬೇಕಾಗುತ್ತದೆ.

* * *

# ಯಶೋಧರೆಯ ನೆಪದಲ್ಲಿ..............

ವಿಜಯಕುಮಾರಿ ಎಸ್. ಕರಿಕಲ್

ಶಾಸ್ತ್ರಿಯವರ ಸಣ್ಣಕತೆಗಾರರೆಂದೇ ಹೆಸರುವಾಸಿಯಾಗಿದ್ದರೂ ಸಾಹಿತ್ಯದ ಇತರ ಪ್ರಕಾರಗಳಲ್ಲೂ ಕೃಷಿ ಮಾಡಿದ್ದಾರೆ. ಅವರ ಸಣ್ಣಕತೆಗಳ ಬಗೆಗೆ ನಡೆದಷ್ಟು ಚರ್ಚೆ ಬೇರೆ ಪ್ರಕಾರಗಳ ಬಗೆಗೆ ನಡೆದಿಲ್ಲ. ಕವಿತೆ, ಕಾದಂಬರಿ, ವಿಮರ್ಶೆ ಹಾಗೂ ನಾಟಕ ಪ್ರಕಾರಗಳಿಗೂ ಅವರು ಕಾಣಿಕೆಯನ್ನು ನೀಡಿದ್ದಾರೆ. ಶಾಸ್ತ್ರಿಯವರು ಅನೇಕ ನಾಟಕಗಳನ್ನು ರಚಿಸಿದ್ದಾರೆ. ಕೆಲವು ಬಾನುಲಿ ರೂಪಕಗಳನ್ನು ಬರೆದಿದ್ದಾರೆ. ತಮ್ಮ ನಾಟಕಗಳಿಗೆ ಐತಿಹಾಸಿಕ ಪೌರಾಣಿಕ ಮತ್ತು ಸಮಕಾಲೀನ ಸಾಮಾಜಿಕ ಸಂಗತಿಗಳನ್ನು ವಸ್ತುವಾಗಿಸಿಕೊಂಡಿದ್ದಾರೆ. ಸ್ತ್ರೀಯರನ್ನು ಮುಖ್ಯವಾಗಿಟ್ಟುಕೊಂಡು ಶಾಸ್ತ್ರಿ, ಅನಾರ್ಕಲಿ, ಮಂಜುಳೆ ಮತ್ತು ಯಶೋಧರಾ ಮುಂತಾದ ನಾಟಕಗಳನ್ನು ರಚಿಸಿದ್ದಾರೆ. ಇವುಗಳಲ್ಲಿ 'ಯಶೋಧರಾ' ನಾಟಕವೂ ಹೆಚ್ಚು ಚರ್ಚೆಗೆ ಒಳಗಾದ ನಾಟಕ. ಬುದ್ಧನ ಚರಿತ್ರೆಗೆ ಸಂಬಂಧಿಸಿದ ನಾಟಕ ಇದರಲ್ಲಿ ಕೆಲಮಟ್ಟಿಗೆ ಐತಿಹಾಸಿಕ ಅಂಶಗಳಿದ್ದು ಬಹುಮಟ್ಟಿಗೆ ಕಲ್ಪನೆಯನ್ನಾಧರಿಸಿದೆ.

ಈ ನಾಟಕವನ್ನು ಎಚ್.ತಿಪ್ಪೇರುದ್ರಸ್ವಾಮಿಯವರು ಆಧ್ಯಾತ್ಮಿಕ ನಾಟಕ ಎಂಬ ಗುಂಪಿಗೆ ಸೇರಿಸಿದ್ದಾರೆ. ಈ ನಾಟಕದಲ್ಲಿ ಧರ್ಮಕ್ಕೆ ಸಂಬಂಧಿಸಿದಂತೆ ಚರ್ಚೆ ಮತ್ತು ಯಶೋಧರೆ ಧರ್ಮದೀಕ್ಷೆ ಪಡೆದು ಭಿಕ್ಷುಣಿಯಾಗುವುದು ಇವುಗಳು ಎಚ್.ತಿಪ್ಪೇರುದ್ರಸ್ವಾಮಿಯವರು ಇದನ್ನು ಆಧ್ಯಾತ್ಮಿಕ ನಾಟಕದ ಗುಂಪಿಗೆ ಸೇರಿಸಲು ಕಾರಣವಾಗಿರಬಹುದು. ಈ ನಾಟಕದ ಕೇಂದ್ರ ಪಾತ್ರ 'ಯಶೋಧರಾ' ಸಿದ್ಧಾರ್ಥನ ಪತ್ನಿ. ಸಿದ್ಧಾರ್ಥನು ನಡುರಾತ್ರಿಯಲ್ಲಿ ತನ್ನವರೆಲ್ಲರನ್ನು ತೊರೆದು ತಪಸ್ಸಿಗೆ ಹೋದ ಮೇಲೆ ಅವನ ಪತ್ನಿಯು ಅನುಭವಿಸಿದ ಪಾಡೇನು ಎಂಬುದನ್ನು ಚಿತ್ರಿಸುತ್ತದೆ. ಸಿದ್ಧಾರ್ಥ ಮನೆಬಿಟ್ಟು ಹೋಗಿ ಹತ್ತು ವರ್ಷಗಳಾಗಿವೆ. ಯಶೋಧರೆಗೆ ಸಿದ್ಧಾರ್ಥ ಮನೆ ತೊರೆದು ಹೋಗುವ ಮೊದಲು ಬಿದ್ದಂತಹ ಒಂದು ಕನಸು ಮತ್ತೆ ಕಾಣಿಸಿದ ಸಂದರ್ಭದೊಂದಿಗೆ ನಾಟಕ ಮೊದಲಾಗುತ್ತದೆ. ಈ ಕನಸು ಮಗ ರಾಹುಲನೂ ತನ್ನಿಂದ ದೂರವಾಗುವುದರ ಸೂಚಕವೇ ಎಂಬ ತಲ್ಲಣ ಯಶೋಧರಾಳದು. ಪತಿಯಿಂದ ದೂರವಾಗಿದ್ದು ಸಾಲದೆ ವಿಧಿ ತನ್ನಿಂದ ಮಗನನ್ನೂ ಕಿತ್ತುಕೊಳ್ಳುತ್ತದೆಯೇನೋ ಎಂಬ ಆತಂಕ ಮತ್ತು ದುಃಖದಲ್ಲಿ ಆಕೆ ಬಸವಳಿದಿದ್ದಾಳೆ. ಆದ ಗಾಯ ಮಾಯುತ್ತಿದೆ ಎನ್ನುವಾಗಲೇ ಅಲ್ಲಿ ಹೊಸ

ಗಾಯವೆದ್ದು ಜೀವ ಹಿಂಡುತ್ತಿದೆಯೆಂಬಂತಹ ಅನುಭವ ಆಕೆಯದು. ಹೀಗೆ ಆರಂಭವಾದ ನಾಟಕ ಆ ಹತ್ತು ವರ್ಷಗಳಲ್ಲಿ ಯಶೋಧರೆ ಪಟ್ಟ ಪಾಡು ಅವಳು ಅನುದಿನವೂ ಪತಿಯ ನೆನಪಿನಲ್ಲಿ ಉಂಡ ನೋವುಗಳನ್ನು ಚಿತ್ರಿಸುತ್ತದೆ. ಹತ್ತು ವರ್ಷದ ಮಗ ರಾಹುಲನಿಗೂ ತಾಯಿಯ ದುಃಖದ ಬೇಗೆ ಅರಿವಾಗಿದೆ. ತಂದೆಯನ್ನು ಮರಳಿ ಮನೆಗೆ ಕರೆತರುವುದರಿಂದ ತಾಯಿಯ ದುಃಖವನ್ನು ಉಪಶಮನಗೊಳಿಸುವುದು ಸಾಧ್ಯವೆಂದು ಆ ಎಳೆಯ ಬಾಲಕ ತಂದೆಯನ್ನು ಕರೆತರಲು ಹೊರಡುವುದಾಗಿ ಹೇಳಿದಾಗ ಯಶೋಧರೆ ಭಯದಿಂದ ನಡುಗುತ್ತಾಳೆ. ತಾನು ಕಂಡ ಕನಸು ನಿಜವಾಗುತ್ತದೆಯೇ, ತಂದೆಯನ್ನು ಕರೆತರುವ ನೆವದಲ್ಲಿ ಮಗ ತನ್ನನ್ನು ಬಿಟ್ಟು ಹೋಗಿ ಬಿಡುತ್ತಾನೇನೋ ಎಂದು ಹೆದರುತ್ತಾಳೆ. ಆದರೆ ಮಗ ರಾಹುಲ, ಅಂತಹುದೇನೂ ಆಗದೆಂಡು ಭರವಸೆ ನೀಡಿ ತಂದೆಯನ್ನು ತಾನು ಕರೆದು ತಂದೇ ತರುತ್ತೇನೆ ಎಂದು ಹೊರಡುತ್ತಾನೆ. ಅವನೊಂದಿಗೆ ಯಶೋಧರೆಯ ಆಪ್ತಸಹಾಯಕಿ ಅಂಜಿಕೆ ಕೂಡ ಹೊರಡುತ್ತಾಳೆ. ಅವರಿಬ್ಬರೂ ಬುದ್ಧನಿರುವಲ್ಲಿಗೆ ಹೋಗಿ ಕೋಸಲದೇಶಕ್ಕೆ ಬರುವಂತೆ ಭಿನ್ನಯಿಸುತ್ತಾರೆ. ಬುದ್ಧನು ತನ್ನ ಕೆಲವು ಅನುಯಾಯಿಗಳೊಂದಿಗೆ ಮುಖ್ಯವಾಗಿ ಆನಂದ ಮತ್ತು ಆಮ್ರಪಾಲಿ ಮುಂತಾದವರನ್ನು ಕೂಡಿಕೊಂಡು ಕೋಸಲಕ್ಕೆ ಬಂದು. ಅಲ್ಲಿಯ ಜನರಿಗೂ ಉಪದೇಶ ನೀಡುತ್ತಾನೆ. ಕೋಸಲಕ್ಕೆ ಬಂದ ಬುದ್ಧನನ್ನು ಅರಮನೆಗೆ ಕರೆತರಲಾಗುತ್ತದೆ. ಅಲ್ಲಿ ಯಶೋಧರೆ ಮತ್ತು ಬುದ್ಧ ಪರಸ್ಪರ ಮುಖಾಮುಖಿಯಾಗುತ್ತಾರೆ. ಈ ಹತ್ತು ವರ್ಷಗಳಿಂದ ತನ್ನ ಮನಸ್ಸನ್ನು ಕೊರೆಯುತ್ತಿದ್ದ ಅನೇಕ ಪ್ರಶ್ನೆಗಳನ್ನು ಬುದ್ಧನ ಮುಂದಿಟ್ಟು ಉತ್ತರಕ್ಕಾಗಿ ಕಾಯುತ್ತಾಳೆ. ಬುದ್ಧ ನೀಡಿದ ಉತ್ತರಗಳಿಂದ ಸ್ವಲ್ಪ ಮಟ್ಟಿಗೆ ಸಮಾಧಾನ ಕಂಡರೂ ಇನ್ನೂ ಕೆಲವು ಉತ್ತರಗಳು ಮನಸ್ಸಿಗೆ ಹಿಡಿಸಲಿಲ್ಲವೆಂದು ಹೇಳುತ್ತಾಳೆ. ಕೊನೆಗೆ ಬುದ್ಧನಿಂದ ಧರ್ಮದೀಕ್ಷೆ ಬಯಸುತ್ತಾಳೆ. ಆದರೆ ಬುದ್ಧ ಹೆಂಗಸರಿಗೆ ದೀಕ್ಷೆ ಕೊಡುವುದರಿಂದ ತಾನು ಹುಟ್ಟು ಹಾಕಿದ ಧರ್ಮದಾಯುಷ್ಯ ಅರ್ಧವಾಗುತ್ತದೆ. ಆದ್ದರಿಂದ ಸ್ತ್ರೀಯರಿಗೆ ದೀಕ್ಷೆಯಿಲ್ಲ ಎನ್ನುತ್ತಾನೆ. ಆದರೆ ಯಶೋಧರೆ ಧರ್ಮದಾಯುಷ್ಯ ಅರೆಯಾದರೂ ಚಿಂತೆಯಿಲ್ಲ ಎಲ್ಲರನ್ನೂ ಸಮಾನ ದೃಷ್ಟಿಯಿಂದ ಕಾಣುವ ಧರ್ಮವೇ ನಿಜವಾದ ಧರ್ಮ ಆದ್ದರಿಂದ ತನಗೆ ದೀಕ್ಷೆಯಾಗಲೇಬೇಕು ಎಂದು ಹಟ ಹಿಡಿಯುತ್ತಾಳೆ. ಅವಳ ಈ ಹಂಬಲಕ್ಕೆ ಆನಂದ ಹಾಗೂ ಆಮ್ರಪಾಲಿಯರು ಒತ್ತಾಸೆಯಾಗಿ ನಿಲ್ಲುತ್ತಾರೆ. ಅನಂತರ ಬುದ್ಧ ಯಶೋಧರೆಗೆ ದೀಕ್ಷೆ ಕೊಡುತ್ತಾನೆ. ಕೊನೆಯಲ್ಲಿ ರಾಹುಲನಿಗೂ ದೀಕ್ಷೆ ಕೊಡುವಂತೆ ಹೇಳುತ್ತಾಳೆ. ಹೀಗೆ ನಾಟಕವು ತನ್ನ ಮಗನೂ ತಂದೆಯ ದಾರಿಯನ್ನೇ ಹಿಡಿಯುವನೇನೋ ಎಂದು ಯಶೋಧರೆ ತಳಮಳಿಸುವುದರೊಂದಿಗೆ ಆರಂಭವಾಗಿ ತಾನೇ ತನ್ನ ಮನಸಾರೆ ಮಗನಿಗೆ ಧರ್ಮದೀಕ್ಷೆ ಕೊಡಿಸಲು ಸಿದ್ಧಳಾಗುವುದರೊಂದಿಗೆ ಮುಕ್ತಾಯವಾಗುತ್ತದೆ. ಇದು ಒಟ್ಟು ನಾಟಕದ ಸ್ಥೂಲ ಪರಿಚಯ.

ಈ ನಾಟಕವನ್ನು ಕುರಿತು ಆರ್.ಜಿ. ಕುಲಕರ್ಣಿಯವರು ಬರೆದ ಲೇಖನವು 1961ರಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಬೆಳಕು ಕಂಡಿದೆ. ನಾಟಕ ಪ್ರಕಟವಾಗಿ 28 ವರ್ಷಗಳಾದ ಮೇಲೆ ಈ ಲೇಖನ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಲೇಖನದಲ್ಲಿ ನಾಟಕದ ಸಮಗ್ರ ವಿವೇಚನೆಯಿದೆ. ನಾಟಕದ ಹಲವು ಮಗ್ಗಲುಗಳನ್ನು ಬಹುಸೂಕ್ಷ್ಮವಾಗಿ ಪರಿಶೀಲಿಸಿದ ಒಂದು ಉತ್ತಮ ಲೇಖನವಿದು. 'ಯಶೋಧರಾ : ಒಂದು ವ್ಯಾಖ್ಯಾನ' ಎಂಬ ಶೀರ್ಷಿಕೆಯ ಈ ಲೇಖನದಲ್ಲಿ ಯಶೋಧರೆಯ ಪಾತ್ರ ಚಿತ್ರಣ ಈ ನಾಟಕದಲ್ಲಿ ಮೂಡಿಬಂದಿರುವ ಬಗೆಯನ್ನು ಮತ್ತು ಒಟ್ಟು ನಾಟಕದ ಆಶಯವನ್ನು ವಿವರಿಸಲಾಗಿದೆ.

"............ ಪತಿಯೊಡನೆ ಒಂದಾಗಿ, ಪತಿಯ ಬಾಳಿನ ಬೆಳಕಾಗಿ ನಿಲ್ಲುವ ಹೆಣ್ಣು ಹೃದಯದ ಅಪಾರ ಕರುಣೆ ಅನಂತ ವಾತ್ಸಲ್ಯ, ತುಂಬು ಹೃದಯದ ಸೌಂದರ್ಯ ವೈಭವಗಳೆಲ್ಲ ಪುರುಷನ ಮುಕ್ತಿ ಸಾಧನೆಗೆ ಬಾಧಕ ಮಾತ್ರವೇನು? ಪುರುಷನು ಪ್ರಕೃತಿಯೊಡಗೂಡಿ ಅರಳಿಸುವ ಬಾಳಸಂಭ್ರಮ ಶಾಂತಿ ಸೌರಭಗಳನ್ನು ಧಿಕ್ಕರಿಸುವುದರಲ್ಲಿಯೇ ಆತನ ಸ್ವಾತಂತ್ರ್ಯ ಉಂಟೆ? ಆ ಸ್ವಾತಂತ್ರ್ಯ ಸಾಧನೆಯಲ್ಲಿ ಸ್ತ್ರೀ ಹೃದಯದ ಆಕ್ರಂದನಕ್ಕೇನೂ ಅರ್ಥವಿಲ್ಲವೇನು? ಅವಳೊಂದು ಜೀವವೆಂಬ ಕಲ್ಪನೆಯಿಲ್ಲವೇನು? ಬಾಳು ಬೇಕಾದಾಗ ಬಾಳ ರಾಣಿಯಾಗಿ ಬಂದ ಸ್ತ್ರೀ, ಬಾಳು ನೀಡಬಂದ ತಾಯಿ, ಬಾಳು ಬೆಳಗಬಂದ ಚೆಲುವಿನ ಮೂರ್ತಿ, ಪ್ರೇಮದ ನಿಧಿ ಮುಕ್ತಿಯ ಹಂಬಲ ಹುಟ್ಟಿದಾಗ ಒಮ್ಮೆಲೇ ದೂಡಿಬಿಡಲು ಅವಳೇನು ಅಚೇತನ ವಸ್ತುವೆ? ಈ ಸಮಸ್ಯೆಗಳು ಯಶೋಧರೆಯ ಬೆಂದ ಹೃದಯದಲ್ಲಿ ನಿರಂತರ ಕಾದ ಸಲಾಕೆಗಳಂತೆ ತುಂಬಿ ನಿಂತಿವೆ. ಅವಳ ಪತಿಯಾದ ಸಿದ್ಧಾರ್ಥನು ಬುದ್ಧನಾಗಿ ಬಂದಾಗ ಯಶೋಧರೆಯ ಬಾಳ ಈ ಸಮಸ್ಯೆಯನ್ನು ಬಿಡಿಸಿದನೆ ಹಾಗೆ ಅವಳ ಸಮಸ್ಯೆಯ ಪರಿಹಾರವಾದಾಗ ಯಶೋಧರೆಯ ಮನಃಸ್ಥಿತಿ ಯಾವ ಬಗೆಯಲ್ಲಿ ಅಂತಃಪರಿವರ್ತನೆ ಹೊಂದಿತು? ಆ ಸ್ತ್ರೀ ಹೃದಯದ ಪರಿವರ್ತನದಲ್ಲಿ ಯಾವ ಸೂತ್ರವಿದೆ ಎಂಬ ಮಾತುಗಳನ್ನರಿಯುವುದರಲ್ಲಿ ಶ್ರೀ ಮಾಸ್ತಿಯವರ ಯಶೋಧರಾ ಪಾತ್ರ ಸೃಷ್ಟಿಯ ಅರ್ಥವಾಗುತ್ತದೆ."

ಹೀಗೆಂದು ಲೇಖನದ ಆರಂಭದಲ್ಲಿಯೇ ನಾಟಕದ ಮುಖ್ಯ ಆಶಯಗಳನ್ನು ಬಿಡಿಸಿಟ್ಟಿದ್ದಾರೆ. ಅನಂತರ ಯಶೋಧರೆಯ ಪಾತ್ರದ ಚಿತ್ರಣವು ಬಂದಿರುವ ಬಗೆಯನ್ನು ಸೂತ್ರಪ್ರಾಯವಾಗಿ ಹೇಳಿದ್ದಾರೆ.

"ಎಲ್ಲಾ ಸುಖದಿ ಜೊತೆಗೆ ಕರೆದವರು ಮುಕ್ತಿಯ ಸುಖಕೆ ಒಬ್ಬರೇ ನಡೆದರಮ್ಮಾ; ನನ್ನ ಬಿಟ್ಟು ಮರೆಯಾದರು" ಎಂಬುದು ಯಶೋಧರೆಯ ಕೊರಗು. ಈ ಒಂದು ಮಾತಿನ ಹಿನ್ನೆಲೆಯಲ್ಲಿಯೇ ಯಶೋಧರೆಯ ಮನಸ್ಥಿತಿಯ ಚಿತ್ರಣ ಹಲವು ಚಿತ್ತವೃತ್ತಿಗಳಲ್ಲಿ ಹೇಗೆ ಹಾದು ಬಂದಿದೆಯೆಂಬುದನ್ನು ಆರ್. ಜಿ. ಕುಲಕರ್ಣಿ ಅವರು ಹೀಗೆ ಹೇಳಿದ್ದಾರೆ : "ಯಶೋಧರೆಯ ಅಂತರಾಳದಲ್ಲಿ ನೆಲಸಿದ ಈ ಒಂದು ವ್ಯಥೆಯೇ ನಾನಾ ಮುಖವಾಗಿ ಅವಳ ನಡೆನುಡಿಯಲ್ಲಿ ವ್ಯಕ್ತವಾಗುತ್ತದೆ. ಒಮ್ಮೆ ಸ್ವಾಭಿಮಾನವಾಗಿ ಮತ್ತೊಮ್ಮೆ

ಕೊಂಕನುಡಿಯಾಗಿ ಮಗುದೊಮ್ಮೆ ಅಣಕವಾಗಿ ಕೊನೆಯಲ್ಲಿ ಎದೆ ಕೊರೆವ ನಿಟ್ಟುಸಿರಾಗಿ ಹೊರಬರುತ್ತಿದೆ. ಈ ಪಾತ್ರ ಸೃಷ್ಟಿಯಲ್ಲಿ ಕಂಡುಬರುವ ಉದ್ದೀಪನ ವಿಭಾವಗಳ ಸೂಕ್ಷ್ಮತೆಯನ್ನೂ ಅನುಭಾವಗಳ ವರ್ಣಮಯ ಸೌಕುಮಾರ್ಯವನ್ನು ನಾಟಕದುದ್ದಕ್ಕೂ ನಾವು ಕಾಣುತ್ತೇವೆ."

ಯಶೋಧರೆಯ ಮನಸ್ಥಿತಿಯ ಒಳಸುಳಿಗಳ ಚಿತ್ರಣವನ್ನು ನಾಟಕ ಸಮರ್ಥವಾಗಿ ಕಟ್ಟಿಕೊಡುತ್ತಿರುವ ಪರಿಯನ್ನು ನಾಟ್ಯಶಾಸ್ತ್ರದ ಪರಿಭಾಷೆಯ ಮೂಲಕವೇ ವಿವರಿಸಿದ್ದಾರೆ. ಯಶೋಧರೆಯ ಮಾತುಗಳ ಮೂಲಕವೇ ಈ ಎಲ್ಲಾ ಭಾವಗಳೂ ಕೃತಿಯಲ್ಲಿ ವ್ಯಕ್ತವಾಗುತ್ತವೆ. ಈ ಪಾತ್ರ ಸೃಷ್ಟಿಯಲ್ಲಿ ಮಾಸ್ತಿಯವರ ಪರಿಪಕ್ವತೆಯನ್ನು ಕುಲಕರ್ಣಿಯವರು ಗುರುತಿಸುತ್ತಾರೆ.

ಈ ನಾಟಕವನ್ನು ಕುರಿತು ಇನ್ನೊಂದು ಲೇಖನ ನಾ. ಡಿಸೋಜಾ ಬರೆದಿದ್ದಾರೆ. ನಾ ಡಿಸೋಜಾ ಅವರೂ ನಾಟಕವನ್ನು ಸವಿಸ್ತಾರವಾಗಿ ವಿಶ್ಲೇಷಿಸಿದ್ದಾರೆ. "ಬುದ್ಧನ ಜೀವನದ ಮೇಲೆ ಬೆಳಕು ಚೆಲ್ಲುವ ಈ ಕೃತಿ ಯಶೋಧರೆಯ ಬದುಕಿನಲ್ಲಿ ಕಳೆದು ಹೋದ ದುರಂತವನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ಹೆಣ್ಣಿನ ಜೀವಿತಕ್ಕೆ ಶಾಪವಾಗಿ ಪರಿಣಮಿಸಬಹುದಾದ ಕೆಲವೊಂದು ಸಮಸ್ಯೆಗಳತ್ತ ಬೆರಳು ತೋರಿಸುತ್ತಿದೆ. ಹೆಣ್ಣಿಗೆ ಧರ್ಮದೀಕ್ಷೆ ಇಲ್ಲವೆಂದು, ಹೆಣ್ಣಿಗೆ ದೀಕ್ಷೆ ನೀಡುವುದರಿಂದ ತನ್ನ ಧರ್ಮದ ಆಯಸ್ಸು ಕಡಿಮೆಯಾಗುತ್ತದೆಂದು ಬುದ್ಧ ಹೇಳಿದಾಗ ಯಶೋಧರೆ ಕೊಡುವ ಉತ್ತರ ಅವಳು ಸ್ತ್ರೀ ಕುಲಕ್ಕೆ ಮಾಡಿದ ಮಹೋಪಕಾರದಂತಿದೆ" ಎಂದು ಮಾಸ್ತಿಯವರ ಸ್ತ್ರೀಪರವಾದ ದೃಷ್ಟಿಕೋನವು ಇಲ್ಲಿ ವ್ಯಕ್ತವಾಗಿರುವ ಬಗೆಯನ್ನು ನಾ ಡಿಸೋಜಾ ಗುರುತಿಸುತ್ತಾರೆ.

'ಯಶೋಧರಾ ನಾಟಕದ ಕಾವ್ಯಗುಣ' ಎಂಬ ಲೇಖನ ಬರೆದ ಎಲ್.ಆರ್. ಹೆಗಡೆ ಅವರು ಈ ನಾಟಕದ ಸಾಹಿತ್ಯಿಕ ಸೌಂದರ್ಯವನ್ನು ವಿವೇಚಿಸಿದ್ದಾರೆ. "ಸರ್ ಎಡ್ವಿನ್ ಅರ್ನಾಲ್ಡ್‌ರ ಲೈಟ್ ಆಫ್ ಏಶ್ಯಾ ಎಂಬ ಕಾವ್ಯದಿಂದ ಶ್ರೀನಿವಾಸರಿಗೆ ಒಂದೆರಡು ಪ್ರೇರಣೆ ಬಂದಿದ್ದರೂ ಅದು ಮಹತ್ವದ ವಿಷಯವಲ್ಲ. ------ ಈ ಸನ್ನಿವೇಶಗಳು ಶ್ರೀನಿವಾಸರ ಕಲ್ಪನೆಯಿಂದ ನೂತನವಾಗಿ ಸೃಷ್ಟವಾದವುಗಳೂ. ಯಶೋಧರೆಗೆ ತನ್ನ ಮಗನೂ ಕೈತಪ್ಪಿ ಹೋಗುವನೇನೋ ಎಂಬ ಹೆದರಿಕೆ ಸ್ವಾಭಾವಿಕವಾದರೂ ಬೇರೆ ಕಡೆ ಚಿತ್ರಿತವಾಗದಿರುವ ವಿಷಯ ಇವೆಲ್ಲ ಈ ನಾಟಕಕ್ಕೆ ಸ್ವಾಂತಿಕೆಯ ಗೌರವವನ್ನು ತಂದಿವೆ" ಎಂದು ನಾಟಕದಲ್ಲಿ ಮೂಡಿಬಂದಿರುವ ಮಾಸ್ತಿಯವರ ಸ್ವೋಪಜ್ಞತೆಯನ್ನು ಗುರುತಿಸುತ್ತಾರೆ. ಈ ನಾಟಕದ ವಸ್ತು ಒಂದು ರೀತಿಯಲ್ಲಿ ವಾಸ್ತವದ ನೆಲೆಯಲ್ಲಿದ್ದೂ ಕೆಲವು ಸಂಗತಿಗಳನ್ನು ಸೃಷ್ಟಿಸಿಕೊಂಡಿರುವುದನ್ನೂ ಅದರ ಪರಿಣಾಮವನ್ನು ವಿಶದಪಡಿಸಿದ್ದಾರೆ.

ಎಡ್ವಿನ್ ಅರ್ನಾಲ್ಡ್ ಅವರ 'ಲೈಟ್ ಆಫ್ ಏಶ್ಯಾ' ಕಾವ್ಯದೊಂದಿಗೆ ಯಶೋಧರಾ ಕಾವ್ಯ ನಾಟಕವನ್ನು ಹೋಲಿಸಿ ಇದರ ಕಲಾತ್ಮಕತೆಯನ್ನು ಎತ್ತಿ ಹಿಡಿದಿದ್ದಾರೆ. "ಲೈಟ್ ಆಫ್ ಏಶ್ಯಾ ಬುದ್ಧನ ಸಂಪೂರ್ಣ ಜೀವನ ಚರಿತ್ರೆಯ ಆಧಾರದಿಂದ ಬರೆದದ್ದು.

ಇದು ಬಹುಸ್ವಲ್ಪ ಕಥಾಭಾಗವನ್ನು ಬೆಳೆಸಿದ್ದು ...................... ಈ ಕಾವ್ಯದಲ್ಲಿ ಬುದ್ಧ ಬಂದನೆಂಬ ವಾರ್ತೆ ಕೇಳಿ ಯಶೋಧರೆ ಆನಂದೋದ್ರೇಕವನ್ನು ಅನುಭವಿಸುವ ವರ್ಣನೆ ಅಷ್ಟು ಸೊಗಸ್ಸಿಂದ ನಂತರ ಸಹಜವಾಗಿ ಕಾಣುವುದಿಲ್ಲ. ಅದೇ ಸನ್ನಿವೇಶದಲ್ಲಿ ಆನಂದವನ್ನು ತೋರಿಸುವಲ್ಲಿ ಪರಿಣತ ವಯಸ್ಸಿನ ಸೊಗಸಿನಿಂದ ಮಾಗಿದ ಭಾವನೆಯ ವರ್ಣನೆ.

ಎಂಥ ಸಂತಸದ ವಾರ್ತೆಯ ತಂದು ಸಲಹಿದಿರಿ
ಈ ಹಾರವನು ಕೊಳಿರಿ

ಎಂಬ ಶಾಂತ ಗಂಭೀರ ಆನಂದ ಪ್ರದರ್ಶನ 'ಯಶೋಧರಾ' ದಲ್ಲಿ ಹೆಚ್ಚು ಸಹಜವಾಗಿ ಬಂದಿದೆ. 'ಲೈಟ್ ಆಫ್ ಏಷ್ಯಾ'ಕ್ಕಿಂತ ಯಶೋಧರಾ ನಾಟಕದ ಗಾತ್ರ ಕಿರಿದಾದರೂ ತೂಕ ಹಿರಿದು' ಎಂದು ಹೆಗಡೆಯವರು 'ಯಶೋಧರಾ' ಪಾತ್ರ ನಿರ್ಮಾಣದಲ್ಲಿಯ ಸಮತೂಕವನ್ನು ಮೆಚ್ಚಿಕೊಳ್ಳುತ್ತಾರೆ. ಯಶೋಧರೆಯ ಪಾತ್ರ ನಿರ್ಮಾಣದಲ್ಲಿ ಮಾಸ್ತಿಯವರ ಕೌಶಲ ಮತ್ತು ಪರಿಪಕ್ವತೆ ಎದ್ದು ಕಾಣುತ್ತದೆ ಎಂಬುದು ಎಲ್ಲರ ಅಭಿಪ್ರಾಯವಾಗಿದ್ದು ಅದು ಸತ್ಯವೂ ಹೌದು. ಯಶೋಧರೆಯ ಮನಸ್ಸಿನ ಒಳತೋಟ ತಾಕಲಾಟಗಳು ನಾಟಕದಲ್ಲಿ ತುಂಬ ಚೆನ್ನಾಗಿ ಮೂಡಿ ಬಂದಿವೆಯೆಂಬುದರಲ್ಲಿ ಎರಡು ಮಾತಿಲ್ಲ. ಎಲ್.ಆರ್.ಹೆಗಡೆಯವರು ಈ ಪ್ರೇರಣೆ ಲೈಟ್ ಆಫ್ ಏಷ್ಯಾ ಕಾವ್ಯದಿಂದ ಬಂದಿದ್ದರೂ, ಆ ಪಾತ್ರವನ್ನು ಇನ್ನು ಹೆಚ್ಚು ಕಲಾತ್ಮಕವಾಗಿ ಸಂವೇದನಾಶೀಲವಾಗಿ ಮಾಡಿರುವುದು ಮಾಸ್ತಿಯವರ ಹಿರಿಮೆ ಎಂದಿರುವ ಮಾತು ಸರಿಯಾಗಿಯೇ ಇದೆ. ಹೇಮಾ ಪಟ್ಟಣಶೆಟ್ಟಿಯವರು ಕೂಡ ಈ ನಾಟಕದ ಬಗ್ಗೆ ವಿವೇಚಿಸುತ್ತ ಮಾಸ್ತಿಯವರು ಆದರ್ಶ ಆಶಯವೆಂದು ಗುರುತಿಸುತ್ತಾರೆ.

ಈ ಎಲ್ಲ ಲೇಖನಗಳು ಗುರುತಿಸುವಂತೆ ಯಶೋಧರೆಯು ಇಡೀ ಸ್ತ್ರೀ ಸಮುದಾಯದ ನೋವುಗಳಿಗೆ ಧ್ವನಿಯಾಗುತ್ತಾಳೆಂಬುದಕ್ಕೆ ನಾಟಕದಲ್ಲಿನ ಸನ್ನಿವೇಶಗಳು ಸಾಕ್ಷಿಯಾಗಿವೆ. ಅದಕ್ಕೆ ಒಂದು ಅತ್ಯುತ್ತಮ ಉದಾಹರಣೆಯೆಂದರೆ ಬುದ್ಧನ ಶಿಷ್ಯ ಆನಂದದೊಂದಿಗೆ ನಡೆದ ಸಂವಾದ. ಆನಂದನು ಬುದ್ಧನ ವ್ಯಕ್ತಿತ್ವದ ಹಿರಿಮೆ ಮಹಿಮೆಗಳನ್ನು ಬಣ್ಣಿಸುತ್ತ "ಈ ಆರು ವರ್ಷದಲ್ಲಿ ಇವರ ಉಪದೇಶದಲ್ಲಿ ಹತ್ತು ಸಾವಿರ ಮಂದಿ ತ್ಯಾಗವನು ವಿವರಿಸಿದರು" ಎಂದು ಹೇಳಿದಾಗ ಯಶೋಧರೆ ಅದಕ್ಕೆ ಪ್ರತಿಕ್ರಿಯಿಸುವ ಬಗೆಯಲ್ಲಿ ಸ್ತ್ರೀ ಸಮುದಾಯದ ಪರವಾಗಿ ಅವಳ ಹೃದಯ ಮಿಡಿಯುವುದನ್ನು ಕಾಣುತ್ತೇವೆ.

"ಹತ್ತು ಸಾವಿರ ಮನೆಯ ಬೆಳಕುಗಳು ನಂದಿದವು : ಇಲ್ಲವೇ ಮಸುಕಾದುವು ಅಯ್ಯೋ ನನ್ನಂತೆ ಎಷ್ಟು ಸಾವಿರ ಮಂದಿ ನೊಂದರೋ ಇದವೊಂದು ಹೆಮ್ಮೆಯೆಂದು ಗುರುತಿಪೆಯೇ ನೀನು ! ಹೆಣ್ಣುಸುರಿಗಲ್ಲದಿದರುಮ್ಮಳದ ಅರಿವಹುದೇ?.......... ಇದಕೆ ಮಿಗಿಲಿನ ಎನಿತು ಬೇಗುದಿಯೊಳೆನಿತು ಹೆಂಡಿರು ನೊಂದು ಬೆಂದರೋ ನಿಮ್ಮ

ಉಪದೇಶದಲಿ............. ನೋವ ಬೀಜವ ಬಿತ್ತಿ ಹುಲುಸಾದ ಬೆಳೆ ತೆಗೆದು ಜೇನೆಯುಸ್ಸವ ಬಡಿಸಿ ಕಣ್ಣೀರುಗಳ ಕುಡಿಸಿ ಹೆಮ್ಮೆ ಪಡುತಿರುವಿರೇ ತಪಸಿಗಳು? ಮನಸಿನಲಿ ಕಲ್ಮಷಗಳಿಹವೆಂದು ಮನೆಗಳನು ಬಿಟ್ಟೋಡಿ ಹೆಂಡಿರನು ಮಕ್ಕಳನು ಬೇಯಿಸಲು ತ್ಯಾಗವೆ?" ಎಂದು ಯಶೋಧರೆ ಪ್ರಶ್ನಿಸುತ್ತಾಳೆ. ಹತ್ತು ಸಾವಿರ ಜನರ ಹೆಂಡತಿಯರು ಪಟ್ಟಿರಬಹುದಾದ ಯಾತನೆಯ ಕಡೆಗೆ ಅವಳ ಗಮನ. ತನ್ನ ಹಾಗೆಯೇ ಅವರು ಕೂಡ ನೊಂದು ಬೆಂದಿರಬಹುದು. ಗಂಡನನ್ನೇ ನಂಬಿ ನೆಚ್ಚಿ ತನ್ನವರೆಲ್ಲರನ್ನು ಬಿಟ್ಟು ಬಂದಿರುವ ಹೆಣ್ಣನ್ನು ಗಂಡನೇ ತೊರೆದು ಹೋದರೆ ಅವಳ ಪಾಡೇನು? ಗಂಡಸರು ತಮ್ಮ ಮನಸ್ಸಿನಲ್ಲಿರುವ ಕೊಳಕನ್ನು ಕಳೆದುಕೊಳ್ಳಲೆಂದು ಮನೆ ಬಿಟ್ಟುಹೋಗಿ ಹೆಂಡತಿ ಮಕ್ಕಳನ್ನು ನೋಯಿಸಿದರೆ ಅದನ್ನು ತ್ಯಾಗವೆಂದು ಹೇಳುವರೆ? ಎಂದು ಕೇಳುತ್ತಾಳೆ. ಅವಳ ದೃಷ್ಟಿಯಲ್ಲಿ ಅದು ಸ್ವಾರ್ಥವಾಗಿಯೇ ಕಾಣುತ್ತದೆ. ಇಂತಹ ತ್ಯಾಗಕ್ಕೆ ಅರ್ಥವಿದೆಯೇ ಎಂಬುದು ಅವಳ ಪ್ರಶ್ನೆ. ಈ ಮಾತುಗಳನ್ನು ಪರಿಭಾವಿಸಿದಾಗ ಮಾಸ್ತಿಯವರ ಸ್ತ್ರೀವಾದಿ ನಿಲುವನ್ನು ಕಂಡು ಹೆಮ್ಮೆ ಮೂಡುತ್ತದೆ. ಒಬ್ಬ ವ್ಯಕ್ತಿ ಮುಕ್ತಿ ಪಡೆಯುವ ಭರದಲ್ಲಿ ತನ್ನನ್ನು ನಂಬಿ ಬದುಕುವವರನ್ನು ಕಷ್ಟಕೋಟಲೆಗಳಲ್ಲಿ ಸಿಲುಕಿಸುವ ಪರಿಯನ್ನು ಪ್ರಶ್ನಿಸುವ ಈ ಕ್ರಮ ಅಭಿನಂದನಾರ್ಹವೆನಿಸುತ್ತದೆ. ಸ್ತ್ರೀಯರ ತುಂಬ ಸಮರ್ಥವಾಗಿ ತೆರೆದಿಟ್ಟಿದ್ದಾರೆ ಎನಿಸುತ್ತದೆ. ಈ ಸ್ತ್ರೀಪರ ಮನೋಭಾವ ನಾಟಕದ ಕೊನೆಯವರೆಗೂ ಉಳಿದು ಬರುತ್ತದೆಯೇ ಎಂಬುದನ್ನು ಪರಿಶೀಲಿಸಿದಾಗ ನಿರಾಶೆಯಾಗುತ್ತದೆ. ಈ ಕೆಲವು ಸನ್ನಿವೇಶಗಳಲ್ಲಿ ಸಂಭಾಷಣೆಗಳಲ್ಲಿ ಇದೊಂದು ಸ್ತ್ರೀಪರವಾದ ನಾಟಕ ಎನಿಸಿದರೂ ಕೊನೆಯ ತಿರುವು ಈ ಭಾವನೆಯನ್ನು ಬಹುಸೂಕ್ಷ್ಮವಾಗಿ ಅಲ್ಲಗಳೆಯುತ್ತದೆ. ಯಶೋಧರೆ ತನ್ನ ಪತಿಗೆ ಅನೇಕ ಪ್ರಶ್ನೆಗಳನ್ನು ಹಾಕುತ್ತಾಳೆ. ಹಾಗೆ ಪ್ರಶ್ನಿಸುವಲ್ಲಿ ಅವಳೊಬ್ಬ ದಿಟ್ಟ ಧೀಮಂತ ಹೆಣ್ಣು ಎಂಬಂತೆ ಕಾಣುತ್ತದೆ. ಇದನ್ನು ಗಮನಿಸಿಯೇ ಎಲ್ಲ ವಿಮರ್ಶಕರು ಈ ಪಾತ್ರದ ಬಗೆಗೆ ಮೆಚ್ಚಿಗೆ ಸೂಚಿಸಿದ್ದಾರೆ.

ನಾಟಕದ ಕೊನೆಯ ದೃಶ್ಯದಲ್ಲಿ ಯಶೋಧರೆಯು ಬುದ್ಧನಿಗೆ ಪ್ರಶ್ನೆಗಳನ್ನು ಕೇಳುತ್ತಾಳೆ. ಮನೆಯಲ್ಲಿದ್ದುಕೊಂಡೇ ತಪಸ್ಸು ಮಾಡಬಹುದಾಗಿತ್ತು. ಮನೆ ಬಿಟ್ಟು ಹೋದದ್ದೇಕೆ? ಎಂದಾಗ ಬುದ್ಧ ತಿಳಿವನ್ನು ಸಾಧಿಸಬೇಕಾದರೆ ತನ್ನ ಸ್ವಾರ್ಥವನ್ನು ಮೊದಲು ತೊರೆಯಬೇಕು. ಮನೆಯಲ್ಲಿದ್ದು ಈ ಸಾಧನೆ ಮಾಡುವುದು ಕೋಟಿ ಜೀವಗಳಲ್ಲಿ ಒಬ್ಬರಿಗೆ ಸಾಧ್ಯ. ತಾಯಿಯ ಜೀವಕ್ಕೆ ಅದು ಅತ್ಯಂತ ಸಹಜ ಸಾಧ್ಯ. ತಾನು ಅಷ್ಟು ಪರಿಪಕ್ವನಲ್ಲದ ಕಾರಣ ಮನೆ ಬಿಡಬೇಕಾಯಿತು ಎನ್ನುತ್ತಾನೆ.

ದಾಂಪತ್ಯದಲ್ಲಿ ಎರಡನೆಯ ಜೀವ ಒಪ್ಪುವ ಮುನ್ನ ದಾಂಪತ್ಯ ಮುಗಿಯಬಹುದೇ? ಎಂಬ ಪ್ರಶ್ನೆಗೆ ಬುದ್ಧ "ಸತಿಯ ಸಮ್ಮತಿ ಪಡೆಯದೆ ದಾಂಪತ್ಯವನ್ನು ಮುಗಿಸಬಾರದೆಂಬುದು ಸತ್ಯ ಆದರೆಮ್ಮಯ ವಿರಾಗವೆ ಮುಖ್ಯ, ದಾಂಪತ್ಯ ಕೊನೆಯಾಯಿತೆಂಬ ಮಿತಿ ಗೌಣ" ಎಂದು ಉತ್ತರಿಸುತ್ತಾನೆ. ಧರ್ಮ ಸಾಧನೆಗೆ

ವೈರಾಗ್ಯ ಮುಖ್ಯವೆಂದು ವೈರಾಗ್ಯಕ್ಕೆ ಮಹತ್ವ ಕೊಡುತ್ತಾನೆ. ಈ ಎಲ್ಲವನ್ನು ಕೇಳಿದ ಯಶೋಧರೆ ಆಡುವ ಮಾತು "ಪರಿವರ್ತಿಸಿದ ಭಂಗಿತಳು ನಾನೆಂಬ ಭಯವೊಂದು ಹಿಂಗಿತು" ಎಂಬುದು ಅವಳ ಮಾಗಿದ ವ್ಯಕ್ತಿತ್ವಕ್ಕೆ ಶೋಭೆ ತರುವಂತಹುದೇನೂ ಅಲ್ಲ. ಗಂಡ ಬಿಟ್ಟವಳು ಎಂಬ ಕೊರಗು ಯಶೋಧರೆಯನ್ನು ಕಾಡುವುದು ಸಹಜವೆನಿಸುವುದಿಲ್ಲ. ಇಲ್ಲಿ ತೀರ ಸಾಮಾನ್ಯ ಹೆಣ್ಣುಮಗಳ ಯೋಚನೆಯಂತೆ ಯಶೋಧರೆ ಯೋಚಿಸುವುದು ಸರಿಯೆನಿಸುವುದಿಲ್ಲ. ಇನ್ನೊಂದು ಸಂದರ್ಭದಲ್ಲೂ ಯಶೋಧರೆಯ ಮಾತು ಔಚಿತ್ಯಪೂರ್ಣವೆನಿಸುವುದಿಲ್ಲ. ಅದು ಬುದ್ಧ ಮತ್ತು ಸಂದರ್ಭದಲ್ಲೂ ಯಶೋಧರೆಯರ ಮಧ್ಯೆ ಸಂಭಾಷಣೆ ನಡೆಯುವಾಗ ಆನಂದ ನಾನು ಸ್ವಲ್ಪ ದೂರವಿರಲಿ ಎನ್ನುತ್ತಾನೆ. ಆಗ ಯಶೋಧರೆ "ಸನ್ಯಾಸಿ ಪತಿ ಅವರ ಪೂರ್ವಾಶ್ರಮದ ಸತಿ ಜೊತೆಯೊಳಿದ್ದರು ಎನಲು ಜನತೆಯಲಿ ಅಲ್ಲಸಲ್ಲದ ಮಾತು ಬರಬಹುದು ಅಣ್ಣನಿಗೆ ಇಂತೊಂದಪಖ್ಯಾತಿ ಬರುವಂತೆ ನಡೆಯುವನೆ" ಎನ್ನುವ ಮಾತುಗಳು ಯಶೋಧರೆ ಮತ್ತು ಬುದ್ಧ ಇಬ್ಬರ ವ್ಯಕ್ತಿತ್ವಕ್ಕೂ ತಕ್ಕಂತಹವಲ್ಲ. ಯಶೋಧರೆಯ ಪಾತ್ರ ತುಂಬ ಉನ್ನತ ವ್ಯಕ್ತಿತ್ವವಾಗಿ ಮೂಡಿಬಂದಿದೆ ಎಂದು ಒಪ್ಪಿಕೊಳ್ಳಲು ಈ ಕೆಲವು ಸನ್ನಿವೇಶಗಳು ಅಡ್ಡಿಯಾಗುತ್ತವೆ.

ಈ ಎಲ್ಲ ಮಾತುಗಳಾದ ಮೇಲೆ ದೀಕ್ಷೆಯ ಪ್ರಸಂಗ ಬರುತ್ತದೆ. ಧರ್ಮದೀಕ್ಷೆಯನ್ನು ಸ್ತ್ರೀಯರಿಗೆ ನೀಡಲಾಗದು ಎಂಬುದು ಬುದ್ಧನ ಮನೋಭಾವವಾಗಿತ್ತು. ಆದರೆ ಆಮ್ರಪಾಲಿಯು ಬುದ್ಧನಿಂದ ದೀಕ್ಷೆ ಬೇಡಿ ಪಡೆದ ಮೊದಲ ಮಹಿಳೆ. ಸ್ತ್ರೀಯರಿಗೆ ದೀಕ್ಷೆ ಕೊಡುವಂತೆ ಮಾಡುವಲ್ಲಿ ಆನಂದನ ಪ್ರಯತ್ನವೂ ಇತ್ತು. ಇದು ಚಾರಿತ್ರಿಕ ಸತ್ಯ. ಈ ಸಂಗತಿಯನ್ನೇ ಮಾಸ್ತಿಯವರು ಯಶೋಧರೆಯ ಸಂದರ್ಭದಲ್ಲಿ ನಡೆದಂತೆ ಚಿತ್ರಿಸಿದ್ದಾರೆ. ದೀಕ್ಷೆ ಪಡೆಯುವುದು ಯಶೋಧರೆಗೆ ಸುಲಭದ ಮಾತಾಗಿರಲಿಲ್ಲ. ಅದಕ್ಕಾಗಿ ಅವಳು ಬುದ್ಧನೊಂದಿಗೆ ವಾದಿಸಬೇಕಾಯಿತು. ಅವಳ ಪರವಾಗಿ ಆನಂದ ಮತ್ತು ಆಮ್ರಪಾಲಿಯರೂ ನಿಂತಾಗ ಬುದ್ಧ ಅನಿವಾರ್ಯವಾಗಿ ಅವಳಿಗೆ ದೀಕ್ಷೆ ನೀಡುತ್ತಾನೆ ಎಂಬಂತೆ ಚಿತ್ರಿಸಿದ್ದಾರೆ. ಈ ಘಟನೆಯನ್ನು ಆಧರಿಸಿಯೇ ಮಾಸ್ತಿಯವರು ಈ ವಿಷಯದಲ್ಲಿ ಕ್ರಾಂತಿಕಾರಕ ಮನೋಭಾವ ಪ್ರದರ್ಶಿಸಿದರು. ಇದು ಯಶೋಧರೆ ಪಡೆದ ಗೆಲುವು ಎಂದೇ ಭಾವಿಸುವಂತಿದೆ. ನಿಜವಾಗಿಯೂ ನಾಟಕದ ತುತ್ತತುದಿ ಇದು. ಇಲ್ಲಿಗೆ ನಾಟಕ ಕೊನೆಗೊಳ್ಳಬೇಕಾಗಿತ್ತು, ಆದರೆ ನಾಟಕ ಇಲ್ಲಿಂದ ಬಹುಸೂಕ್ಷ್ಮವಾಗಿ ಹೊಸದೊಂದು ತಿರುವನ್ನು ಪಡೆಯುತ್ತದೆಂಬುದೇ ನಾಟಕವನ್ನು ಅರ್ಥೈಸುವಲ್ಲಿ ಬೇರೆಯ ತರದಲ್ಲಿ ಯೋಚಿಸುವಂತೆ ಮಾಡುತ್ತದೆ. ದೀಕ್ಷೆ ಪಡೆದ ನಂತರದಲ್ಲಿ ಬುದ್ಧನ ಜಯಘೋಷದೊಂದಿಗೆ ಮುಗಿಯಬೇಕಾಗಿದ್ದ ನಾಟಕವನ್ನು ಮಾಸ್ತಿಯವರು ಮುಂದುವರಿಸುತ್ತಾರೆ. ಈ ಬೆಳವಣಿಗೆ ನಿರುದ್ದಿಶ್ಯವೆ? ಈ ಬೆಳವಣಿಗೆಗೆ ಏನು ಅರ್ಥ ಎಂಬ ಪ್ರಶ್ನೆಗಳು ಮೂಡುತ್ತವೆ. ಈ ಮುಂದಿನ

ಬೆಳವಣಿಗೆಯಲ್ಲಿ ಬುದ್ಧನ ತಂದೆ (ಶುದ್ಧೋದನ) 'ರಾಜ' ನ ಪ್ರವೇಶವಾಗುತ್ತದೆ. ಮೊದಲ ದೃಶ್ಯದಲ್ಲಿ ಕಾಣಿಸಿಕೊಂಡ ಪಾತ್ರ ಮತ್ತೆ ಕೊನೆಯ ಹಂತದಲ್ಲಿ ಕಾಣಿಸಿಕೊಳ್ಳುತ್ತದೆ. ಯಶೋಧರೆಗೆ ಧರ್ಮದೀಕ್ಷೆ ನೀಡಿದ ಮೇಲೆ ಬಂದ ರಾಜ ಇಲ್ಲಿ ನಡೆದಿರುವುದೇನು ಎಂದು ಕೇಳಿದಾಗ ಆನಂದ ನಡೆದ ವೃತ್ತಾಂತವನ್ನು ರಾಜನಿಗೆ ಅರುಹುತ್ತಾನೆ. ಆಗ ರಾಜ ಪ್ರತಿಕ್ರಿಯಿಸುವ ರೀತಿ ಹೀಗಿದೆ.

"ಒಳಿತಾಯಿತು. ತನ್ನಾಣ್ಮ ಸನ್ಯಾಸವನು ಕೊಂಡನೆಂಬುದನು ಕೇಳ್ದಂದೆ ಕಾಷಾಯ ವಸ್ತ್ರವನು ಧರಿಸಿದಳು. ಅಂದು ತಾನೇ ಧರಿಸಿದಾ ದೀಕ್ಷೆಯನು ಇಂದು ಗುರುವಾದ ಪತಿಯಿಂದ ಇನ್ನೊಮ್ಮೆ ಪಡೆದಿಹಳು. ತಾಯಿ, ನಿನ್ನಯ ನೋವ ನೋಡಲಾರದೆ ನಾನು ಬಹು ನೊಂದೆನಮ್ಮ ಅದು ಇಂದು ಕೊನೆಯಾಯಿತು. ಎನಗಿನ್ನು ಚಿಂತೆ ಅನಿತಿಲ್ಲ. ನಿಮ್ಮನು ಕಳುಹಿ ಒಬ್ಬನೇ ಇರಬೇಕು; ಅದು ಕಷ್ಟವಾಗುವುದು ಆದರೂ ನಿಮ್ಮ ಸುಖಕ್ಕಾಗಿ ಅದ ಸಹಿಸುವೆನು."

ಈ ಮಾತುಗಳನ್ನು ಕೇಳಿದ ತಕ್ಷಣವೆ ಬುದ್ಧ ಹೇಳುತ್ತಾನೆ. "ಸದ್ಯದಲಿ ದೇವಿ ಭಿಕ್ಷುಣಿ ಇಲ್ಲಿಯೇ ನಿಂದು ಹತ್ತು ವರುಷಗಳಿಂದ ಗೆಯ್ದ ತಪವನು ಇಲ್ಲೆ ಮುಂದುವರಿಸುವರು ರಾಹುಲನ ನಾನೊಯ್ಯುವೆನು" ಎಂದಾಗ ಯಶೋಧರೆ ಅಂಜಿಕೆಯನ್ನು ಕುರಿತು "ಇದೇ ನಿಯಮ ಅಂಜಿಕೆ" ಎಂದು ಬುದ್ಧನ ಮಾತಿಗೆ ಸಮ್ಮತಿ ಸೂಚಿಸುತ್ತಾಳೆ.

ಈ ನಾಟಕದ ಗುರಿಯೇ ಇದು ಎನಿಸುತ್ತದೆ. ಯಶೋಧರೆಗೆ ದೀಕ್ಷೆ ಕೊಟ್ಟು ಸ್ತ್ರೀ ಸಮಾನತೆಯನ್ನು ಪ್ರತಿಪಾದಿಸುವಲ್ಲಿಯೇ ನಾಟಕದ ಸಾರ್ಥಕತೆಯಿದೆ ಎಂಬ ಮಾತು ಪರಿಶೀಲನಾರ್ಹವಾಗುವುದು ಇಲ್ಲಿ. ಬುದ್ಧನ ವ್ಯಕ್ತಿತ್ವವನ್ನು ಬಲ್ಲ ಯಾರಿಗೂ ಬುದ್ಧ ಹೀಗೆ ಹೇಳಿರುವುದು ಸಾಧ್ಯವೆ? ಎಂಬ ಪ್ರಶ್ನೆ ಮೂಡುವುದು ಸಹಜ. ತಾನು ಹೇಳುವುದನ್ನು ಕುರುಡಾಗಿ ಅನುಸರಿಸುವುದು ಬೇಡ. ಕೇಳಿದ ವಿಷಯವನ್ನು ತಮ್ಮ ಮನದ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸಿ ನಿಜವನ್ನರಿತ ಮೇಲೆಯೇ ಅನುಸರಿಸಬೇಕೆಂದು ಹೇಳಿದ ಬುದ್ಧ, ಯಾರ ಮೇಲೆಯೂ ತನ್ನ ಅಭಿಪ್ರಾಯಗಳನ್ನು ಒತ್ತಾಯಪೂರ್ವಕವಾಗಿ ಹೇರಿದವನಲ್ಲ. ಆದರೆ ಈ ನಾಟಕದಲ್ಲಿ ಬುದ್ಧನ ಬಾಯಿಂದ ಈ ಮಾತನ್ನು ಹೇಳಿಸುವಲ್ಲಿ ಮಾಸ್ತಿಯವರ ಉದ್ದೇಶವೇನಿತ್ತು ಎನ್ನುವುದನ್ನು ಪರಿಶೀಲಿಸುವಂತಾಗುತ್ತದೆ. ಇಲ್ಲಿ ನಾಟಕದ ಮುಂದಿನ ಸಂಭಾಷಣೆಗಳನ್ನು ಗಮನಿಸಿದಾಗ ಸತ್ಯ ಹೊಳೆಯುತ್ತದೆ.

ರಾಹುಲನಿಗೆ ದೀಕ್ಷೆ ಕೊಡುವುದನ್ನು ರಾಜ ವಿರೋಧಿಸುತ್ತಾನೆ.

"ಎಳೆ ಸೊಸಿಯು ಕಿತ್ತು ಒಣಗಿಸಿ ಇಂತು ವಂಶವನು ಮುಗಿಸುವರೆ? ಹಿರಿಯರನು ಕೇಳದೆ ಎಳೆಯರಿಗೆ ದೀಕ್ಷೆಯನು ಕೊಡಬಾರದೆಂಬೆನು" ಎಂದಾಗ ಬುದ್ಧ ಅದಕ್ಕೆ ಸಮ್ಮತಿಸುತ್ತಾನೆ. ಆಗ ರಾಜ ಸಂತೋಷ. ಎನ್ನ ಜೀವಿತದಲ್ಲಿ ಒಂದು ವರುಷ ಎರಡು ವರುಷದಲಿ ಒಮ್ಮೆ ಇಲ್ಲಿಗೆಂದು ಅಗಲಿಕೆಯ ನೋವನು ಹರಿಸಿ ಸಂತಯಿಸಬೇಕು

ಮನುಜನಿಗೆ ವೃದ್ಧಾಪ್ಯದಲಿ ಏಳೆಯ ಜೀವವನು. ಆದರಲಿಯು ತನ್ನಿಂದೊಗೆದ ಏಳೆಯುದನು ನೋಡೆ. ಬಳಸಾರುತಿಹ ಮೃತ್ಯುವಿನ ಧೈವಸ್ವನ ಒಂದು ಮೃದುಗೀತದಂತಹುದು' ಎನ್ನುತ್ತಾನೆ. ಇದಕ್ಕೂ ಕೂಡ ಬುದ್ಧ ಒಪ್ಪಿಗೆ ಸೂಚಿಸುತ್ತಾನೆ. ಆಗ ಮತ್ತೆ ಯಶೋಧರೆ ಮಾತನಾಡುತ್ತಾಳೆ.

"ನಾನಿಲ್ಲೆ ಇರುತಿಹೆನು. ಸುತನಂತೆ ಸುತನ ಈ ಸುತನಂತೆ ಸೇವಿಸುತ ಇಲ್ಲಿಯೇ ಸಿದ್ಧಿಯನು ಕಾಣುವೆನು" ಎಂದು ತನ್ನ ಮುಂದಿನ ಕರ್ತವ್ಯವೇನು ಎಂಬುದನ್ನು ನಿಶ್ಚಯಿಸಿಕೊಳ್ಳುತ್ತಾಳೆ. ವೃದ್ಧನಾದ ಮಾವನ ಸೇವೆಯಲ್ಲಿಯೇ ತನ್ನ ತಪದ ಸಿದ್ಧಿಯಿದೆ. ಮಗ ಬಿಟ್ಟು ಹೋದರೂ ಆ ಮಗನ ಸ್ಥಾನದಲ್ಲಿ ತಾನು ನಿಂತು ಸೇವೆ ಸಲ್ಲಿಸುವುದು ಜೀವನದ ಸಾರ್ಥಕತೆ ಅದೇ ಮುಕ್ತಿಯ ದಾರಿ ಎನ್ನುವುದನ್ನು ಧ್ವನಿಸುತ್ತಾಳೆ.

ಈ ನಾಟಕದ ಒಟ್ಟು ಆಶಯವೇ ಇಲ್ಲಿ ಈ ಮಾತುಗಳಲ್ಲಿ ಅಡಗಿದೆ ಎನಿಸುತ್ತದೆ. ನಾಟಕವನ್ನು ಕೇವಲ ಒಂದು ಐತಿಹಾಸಿಕ ಘಟನೆಯ ನಿರೂಪಣೆ ಎಂಬಂತೆ ಗಮನಿಸದೆ ಸಮಕಾಲೀನ ಸಂದರ್ಭಕ್ಕೆ ಒಬ್ಬ ಸೃಜನಶೀಲ ಲೇಖಕ ತೋರುತ್ತಿರುವ ಪ್ರತಿಕ್ರಿಯೆ ಎಂದು ಗಮನಿಸುವುದು ಸೂಕ್ತ.

ಈ ನಾಟಕ ಪ್ರಕಟವಾದ ವರ್ಷ ತುಂಬ ಗಮನಾರ್ಹವಾದುದು. 1933ರಲ್ಲಿ ಇದು ಮೊದಲ ಮುದ್ರಣ ಕಂಡಿದೆ. ಈ ಅವಧಿಯಲ್ಲಿ ಭಾರತದ ಸ್ಥಿತಿಗತಿ ಹೇಗಿತ್ತು ಎನ್ನುವುದು ಗಮನಾರ್ಹ. ಈ 1930 ರಿಂದ 40 ರವರೆಗಿನ ಅವಧಿ ಭಾರತದ ಸಾಮಾಜಿಕ ಹಾಗೂ ರಾಜಕೀಯ ಜೀವನದಲ್ಲಿ ಅನೇಕ ಸ್ಥಿತ್ಯಂತರಗಳು ಉಂಟಾದ ಕಾಲ. ಭಾರತದ ಸ್ವಾತಂತ್ರ್ಯ ಸಂಗ್ರಾಮ ತೀವ್ರ ಸ್ವರೂಪವನ್ನು ಪಡೆದುಕೊಂಡಿತ್ತು. ಗಾಂಧೀಜಿಯವರ ನೇತೃತ್ವದಲ್ಲಿ ಸಹಸ್ರಾರು ಜನ ಸಾಮಾನ್ಯರು ತಮ್ಮ ಮನೆಮಾರು ತೊರೆದು ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿ ಪ್ರಾಣ ತ್ಯಾಗಕ್ಕೂ ಸಿದ್ಧರಾದದ್ದು ಐತಿಹಾಸಿಕ ಸತ್ಯ. ಕೇವಲ ಪುರುಷರು ಮಾತ್ರವಲ್ಲ ಸ್ತ್ರೀಯರು ಕೂಡ ಸಕ್ರಿಯವಾಗಿ ಆ ಹೋರಾಟದಲ್ಲಿ ಭಾಗಿಗಳಾದರೆ ಹೋರಾಟ ಇನ್ನೂ ಬಲಿಷ್ಠವಾಗುತ್ತದೆ ಎಂಬುದು ಗಾಂಧೀಜಿಯವರ ಅನಿಸಿಕೆಯಾಗಿತ್ತು. ತಮ್ಮ ಈ ಅನಿಸಿಕೆಯನ್ನು ಅವರು ಯಂಗ್ ಇಂಡಿಯಾ ಪತ್ರಿಕೆಯ 1930 ಏಪ್ರಿಲ್ ತಿಂಗಳ ಸಂಚಿಕೆಯಲ್ಲಿ ವ್ಯಕ್ತಪಡಿಸಿದರು. ಆನಂತರದಲ್ಲಿ ಆದ ಬೆಳವಣಿಗೆಯನ್ನು ಡಾ. ಎಸ್. ಚಂದ್ರಶೇಖರ ದಾಖಲಿಸಿರುವುದು ಹೀಗೆ. "ಭಾರತೀಯ ನಾರಿಯರಿಗೆ ಚರಕಾದಲ್ಲಿ ನೂಲು ತೆಗೆಯಬೇಕೆಂದೂ ತಮ್ಮ ಗೃಹಕೃತ್ಯದ ಮೂಲೆಗಳಿಂದ ಹೊರಬಂದು ವಿದೇಶಿ ವಸ್ತುಗಳನ್ನು, ಮದ್ಯವನ್ನೂ ಮಾರುತ್ತಿದ್ದ ಅಂಗಡಿಗಳ ಮುಂದೆ ಹಾಗೂ ಸರಕಾರಿ ಸಂಸ್ಥೆಗಳ ಮುಂದೆ ಪಿಕೆಟಿಂಗ್ ನಡೆಸಬೇಕೆಂದೂ ಕರೆ ನೀಡಿದರು. ಅದುವರೆಗೂ ಎಲ್ಲೋ ಕೆಲವರು ಸಿ.ಆರ್. ದಾಸ್. ಮೋತಿಲಾಲ್ ನೆಹರು ಮುಂತಾದ ರಾಷ್ಟ್ರನಾಯಕರ ಮನೆತನಗಳ ಹೆಣ್ಣುಮಕ್ಕಳೂ ಹಾಗೂ ಕಾಲೇಜು ವಿದ್ಯಾರ್ಥಿನಿಯರು ಮಾತ್ರ ಬಹಿರಂಗ ರಾಜಕೀಯ ಪ್ರದರ್ಶನಗಳಲ್ಲಿ

ಪಾಲ್ಗೊಳ್ಳುತ್ತಿದ್ದರು. ಗಾಂಧೀಜಿಯವರು ನೀಡಿದ ಈ ಕರೆಯ ಪರಿಣಾಮವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಭಾಗವಹಿಸಿದರು. ದೆಹಲಿಯಲ್ಲೇ ರಾಜಕೀಯ ಚಟುವಟಿಕೆಗಳಿಗಾಗಿ 1600 ಜನ ಸ್ತ್ರೀಯರನ್ನು ಬಂಧಿಸಲಾಯಿತು. ಮುಂಬಯಿಯಲ್ಲಿ ಬಹುಸಂಖ್ಯೆಯ ಮಧ್ಯಮ ವರ್ಗದ ಸ್ತ್ರೀಯರು ರಾಷ್ಟ್ರೀಯ ಹೋರಾಟವನ್ನು ಸೇರಿದರು. ಈ ಚಳುವಳಿಯು ಇನ್ನೇನನ್ನಾದರೂ ಸಾಧಿಸಲಿಲ್ಲವಾದರೂ ಭಾರತೀಯ ಸ್ತ್ರೀಯರ ಸಾಮಾಜಿಕ ಜಾಗೃತಿಗೆ ಬಹುವಾಗಿ ಕಾರಣವಾಯಿತು ಎಂಬುದಾಗಿ ಬ್ರಿಟಿಷ್ ವಕ್ತಾರರು ಬರೆದರು" ಈ ವಿವರಗಳು 1930ರ ನಂತರದ ವರ್ಷಗಳಲ್ಲಿ ನಡೆದ ಸಂಗತಿಗಳನ್ನು ತಿಳಿಸುತ್ತವೆ. ಮಧ್ಯಮ ವರ್ಗದ ಸ್ತ್ರೀಯರು ಅನೇಕರು ಮನೆಯನ್ನು ತೊರೆದು ಸೆರೆಮನೆಯನ್ನು ಸೇರುವಂತಹ ದಿಟ್ಟ ಮನೋಭಾವವನ್ನು ಪ್ರದರ್ಶಿಸಿದರು. ಇಂತಹ ಸಂಬದರ್ಭದೊಂದಿಗೆ ಈ ಬದಲಾವಣೆಗಳ ಹಿನ್ನಲೆಯಲ್ಲಿ ಮಾಸ್ತಿಯವರ ನಾಟಕವನ್ನು ನೋಡುವುದು ಹೆಚ್ಚು ಅರ್ಥಪೂರ್ಣವೆನಿಸುತ್ತದೆ.

ಇಲ್ಲಿಯ ಮುಕ್ತಿ ಎಂಬುದು ಕೇವಲ ವೈಯಕ್ತಿಕ ಮುಕ್ತಿಯಲ್ಲ ಒಟ್ಟಾರೆ ದೇಶವನ್ನು ದಾಸ್ಯದಿಂದ ಮುಕ್ತಗೊಳಿಸುವುದು ಎಂಬ ಅರ್ಥವನ್ನು ಪಡೆಯುತ್ತದೆ. ಯಶೋಧರೆಯ ಪ್ರಶ್ನೆಗಳು. ಅವಳ ಅಳಲು ಇತಿಹಾಸದ ಯಶೋಧರೆಯ ಪ್ರಶ್ನೆಗಳಾಗದೆ ಸಮಕಾಲೀನ ಸಂದರ್ಭದ ಸ್ವಾತಂತ್ರ್ಯ ಹೋರಾಟಗಾರರ ಹೆಂಡತಿಯರ ಪ್ರಶ್ನೆಗಳಾಗಿ ಕೇಳಿಸುತ್ತವೆ. ಈ ಪ್ರಶ್ನೆಗಳಿಗೆ ಸಮಾಧಾನಕರವಾದ ಉತ್ತರವನ್ನು ಕೊಡುವುದು ಕರ್ತವ್ಯವಾಗುತ್ತದೆ. ಬಿಡುಗಡೆಗಾಗಿ ಮನೆ ಬಿಟ್ಟು ಹೋಗುವುದು ಗಂಡಸರಿಗೆ ಅನಿವಾರ್ಯ. ಮನೆಯಲ್ಲಿದ್ದು ಇದನ್ನು ಸಾಧಿಸುವುದು ಸಾಧ್ಯವುಇಲ್ಲ ಎಂಬುದು ಉತ್ತರವಾಗುತ್ತದೆ. ಯಶೋಧರೆಯ ನೆಪದಲ್ಲಿ ಅಂಥಿಸ ಮಹಿಳೆಯರ ಮನಸ್ಸಿನ ಪ್ರಶ್ನೆಗಳಿಗೆ ಆತಂಕಗಳಿಗೆ ಬುದ್ಧನ ಪಾತ್ರದ ಮೂಲಕ ಮಾಸ್ತಿಯವರು ಉತ್ತರ ಕೊಡುತ್ತಿದ್ದಾರೆನಿಸುತ್ತದೆ. ಮುಂದುವರಿದು. ಮಹಿಳೆಯರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ನೇರವಾಗಿ ಭಾಗವಹಿಸುವುದಕ್ಕಿಂತಲೂ ಮನೆಯ ಮಗನ ಅನುಪಸ್ಥಿತಿಯಲ್ಲಿ ಕುಟುಂಬದ ಹಿರಿಯರ ಕಿರಿಯರ ಯೋಗಕ್ಷೇಮದ ಜವಾಬ್ದಾರಿಯನ್ನು ಹೊತ್ತು ಅವರ ಸೇವೆಯಲ್ಲಿದ್ದು ಈ ಸಂಗ್ರಾಮಕ್ಕೆ ಪೂರಕವಾಗಿ ಕೆಲಸ ನಿರ್ವಹಿಸುವುದೇ ಹೆಚ್ಚು ಸರಿಯಾದ ಕ್ರಮ ಎಂಬುದನ್ನು ಸೂಚ್ಯವಾಗಿ ಹೇಳಿದ್ದಾರೆ. ಅರಮನೆಯಲ್ಲಿಯೇ ಇದ್ದುಕೊಂಡು ಸಾಧನೆಯನ್ನು ಮುಂದುವರಿಸುವಂತೆ ಬುದ್ಧ ಯಶೋಧರೆಗೆ ಹೇಳುವಲ್ಲಿ ಈ ಅರ್ಥವೇ ಧ್ವನಿಸುತ್ತದೆ.

ಮಾಸ್ತಿಯವರು ಸಾಂಪ್ರದಾಯಿಕ ಮನೋಧರ್ಮದವೆಂದು ಡಿ. ಆರ್. ನಾಗರಾಜ ಗುರುತಿಸುತ್ತಾರೆ. ಆ ಮನೋಧರ್ಮವೇ ಈ ನಾಟಕದಲ್ಲಿಯೂ ಮೂಡಿಬಂದಿದೆ. ಕುಟುಂಬ ಜೀವನ ಅಸ್ತವ್ಯಸ್ತಗೊಳ್ಳುವದನ್ನು ಅವರ ಮನೋಧರ್ಮ ಒಪ್ಪುವುದಿಲ್ಲ. ಆದ್ದರಿಂದಲೇ ಸ್ತ್ರೀಯರು ಕುಟುಂಬ ಧರ್ಮವನ್ನು ಕಾಪಾಡುವ

ಹೊಣೆಯನ್ನು ನಿಭಾಯಿಸಬೇಕು ಎಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ. ಯಶೋಧರೆಯ ಪಾತ್ರ ಸಮಗ್ರ ವ್ಯಕ್ತಿತ್ವದ ವಿಶ್ಲೇಷಣೆ ಮಾಡುತ್ತ ಅವರು ಹೇಳುವ ಮಾತುಗಳು.

"ಪತಿಯಗಲಿಕೆಯಿಂದ ಕೊರಗಿ ನಿಂತ ಯಶೋಧರೆ, ಪತಿಯೊಡನೆ ವಾದಿಸಿದ ಯಶೋಧರೆ, ಕೊನೆಯಲ್ಲಿ ಪತಿಯ ಧರ್ಮದಲ್ಲಿ ಒಂದಾಗಿ ಅವನ ಬಾಳ ಬೆಳಕನ್ನು ಪ್ರಪಂಚಕ್ಕೆ ಹರಡುವುದರಲ್ಲಿ ಸಮಪಾಲುಗಾರಳಾಗಿ ನಿಲ್ಲುತ್ತಾಳೆ. ಆ ಸ್ಥಿತಿಯಲ್ಲಿ ಅವಳಿಗೆ ಹಳೆಯ ದುಃಸ್ವಪ್ನಗಳೆಲ್ಲ ಕರಗಿ ಸಮರ್ಪಣೆಯೊಂದೇ ನೆಲೆಯಾಗಿ ನಿಲ್ಲುತ್ತದೆ. ಅವಳು ಪತಿಯ ದಿವ್ಯ ವ್ಯಕ್ತಿತ್ವದಲ್ಲಿ ಕರಗಿ ಹೋಗುತ್ತಾಳೆ. ತಗ ತನ್ನದೆನ್ನುವುದನ್ನೆಲ್ಲಾ ಪತಿಗೆ ಸಮರ್ಪಿಸಿದ್ದಾಳೆ. ಅಂತೆಯೇ ಅವಳ ಹೃದಯ ಶಾಂತ್ವನದಿಂದ ಮಿಡಿಯುತ್ತದೆ. 'ಎನ್ನನು ನೀವು ಜಡದಿರಲು ಜಗವನೇ ನಿಮಗೆ ಜಡುವರೆ ನಾನು ಒಪ್ಪುವೆನು' ಈ ಮಾತಿನಲ್ಲಿ ತೃಪ್ತಿಯಿದೆ. ಯಶೋಧರೆಯ ಬಾಳ ತಪಸ್ಸಿನ ಸಿದ್ಧಿಯಿದೆ. ಈ ಸಿದ್ಧಿಯಲ್ಲಿ ಆನಂದಪೂರ್ಣ ಸೇವಾಭಾವವಿದೆ" ಕೊನೆಯ ಮಾತಾದ ಸೇವಾಭಾವವೆಂಬುದು ಮಾಸ್ತಿಯವರ ಆಶಯವನ್ನು ಬಿಡಿದಿಡುತ್ತದೆ. ಸೇವಾಭಾವದಲ್ಲಿಯೇ ಹೆಣ್ಣಿಗೆ ನಿಜವಾದ ಮುಕ್ತಿಯಿದೆಯೆಂಬುದೂ, ಸೇವೆಯೇ ಮುಕ್ತಿಯ ದಾರಿ ಎಂಬುದೂ ಮಾಸ್ತಿಯವರ ಅಭಿಪ್ರಾಯ. ಈ ನಾಟಕದಲ್ಲಿ ಇನ್ನೊಂದು ಕಡೆಯೂ ಈ ಅಭಿಪ್ರಾಯ ವ್ಯಕ್ತವಾಗುತ್ತದೆ. ಬುದ್ಧ ಯಶೋಧರೆಯ ಪ್ರಶ್ನೆಗೆ ಉತ್ತರ ಕೊಡುತ್ತ ಹೇಳುವ ಮಾತು. "ತನ್ನ ಮರೆವುದೆ ಧರ್ಮ. ತಾಯಾದ ಉಸಿರೆಲ್ಲ ಇರ್ದೆಡೆಯೊಳೇ ಇದನು ಸಾಧಿಪುದು. ಇಂತೇ ಕೋಟಿ ಜೀವದಲೊಂದು ಜೀವ ಪರತೃಪ್ತಿಯಲಿ ಮುಕ್ತಿಯನು ಸಾಧಿಸುವುದುಂಟು" ಎಂದು ಮುಕ್ತಿಯ ಅರ್ಥವ, ನಿಸ್ವಾರ್ಥತೆ, ತ್ಯಾಗ, ಪರರ ತೃಪ್ತಿಯಲ್ಲಿ ಆನಂದವನ್ನು ಕಾಣುವುದು ಹಾಗೂ ಸೇವಾಮನೋಭಾವ ಎಂಬ ಸೂಚನೆ ಇಲ್ಲಿದೆ.

ತಾಯಿ ತನ್ನ ಮಕ್ಕಳ ಹಾಗೂ ಕುಟುಂಬದ ಹಿರಿಯ ಸದಸ್ಯರ ಸೇವೆಯಲ್ಲಿಯೇ ತನ್ನನ್ನು ತಾನು ಮರೆಯುತ್ತಾಳೆ. ತನ್ನ ಮರೆಯುವುದು ಮತ್ತು ಪರರ ತೃಪ್ತಿಯಲ್ಲಿ ಸಂತೋಷವನ್ನು ಕಾಣುವುದು. ಈ ಎರಡೂ ಗೃಹಿಣಿ ಧರ್ಮದಲ್ಲಿ ಸಾಧ್ಯವಿದೆ. ಆದ್ದರಿಂದಲೇ ಸ್ತ್ರೀ ಮನೆ ತೊರೆಯುವುದು ಸಲ್ಲ. ಮನೆಯೊಳಗಿದ್ದುಕೊಂಡೇ ಮನೆಯ ಜವಾಬ್ದಾರಿಯನ್ನು ಹೊರುವ ಮೂಲಕವೇ ಪತಿಯ ಧರ್ಮಕಾರ್ಯಕ್ಕೆ ನೆರವು ನೀಡುವುದು ಹೆಚ್ಚು ಸೂಕ್ತ ಎಂಬುದು ಮಾಸ್ತಿಯವರ ಸೂಚನೆಯಾಗಿದೆ. ಹೀಗೆ ಈ ನಾಟಕವು ಸ್ತ್ರೀಗೆ ಧರ್ಮದೀಕ್ಷೆ ನೀಡಿ ಕ್ರಾಂತಿಕಾರಕವೆನಿಸಿ ಕೊನೆಗೆ ಮನೆಯಲ್ಲಿದ್ದು ಸೇವೆ ಮಾಡುವ ಮೂಲಕ ಸ್ತ್ರೀ ಮುಕ್ತಿ ಕಾಣಲೇಬೇಕೆಂಬ ನಿರ್ಬಂಧವನ್ನು ಹಾಕುತ್ತದೆ. ಈ ಮೂಲಕ ಈ ನಾಟಕದ ಓಲುವಿಕೆ ಯಾವ ಕಡೆಗಿದೆಯೆಂಬುದು ಮತ್ತು ಮಾಸ್ತಿಯವರ ನಿಲುವು ಏನೆಂಬುದು ಒಟ್ಟಿಗೆ ಧ್ವನಿತವಾಗುತ್ತವೆ.

* * *

# ಚಿರಸ್ಮರಣೆ : ಅನಾಗತ ಹಿಂಸಾ ಬೀಜಗಳ ಪರಿಶೋಧನೆ

**ಡಾ. ವೆಂಕಟಗಿರಿ ದಳವಾಯಿ**

“ಚಿರಸ್ಮರಣೆ ಒಂದು ಕಾದಂಬರಿ, ಚರಿತ್ರೆಯಲ್ಲ. ಈ ಕೃತಿಯಲ್ಲಿ ನಾನು ಮಾಡಿರುವುದು ಕಯ್ಯೂರಿನ ಹೋರಾಟದ ಅಂತಸ್ಸತ್ವವನ್ನು, ಆ ಕಾಲಾವಧಿಯ ಚೇತನವನ್ನು, ಕಳೆಯನ್ನು ಸೆರೆ ಹಿಡಿಯುವ ಯತ್ನ.” ಸ್ವತಃ ನಿರಂಜನರ ಮುನ್ನುಡಿಯ ಮಾತುಗಳಿವು. ಆದರೆ ಇಲ್ಲಿ ಹೇಳುವ ಒಂದು ಮಾತು “ಚರಿತ್ರೆಯಲ್ಲ” ಎನ್ನುವುದನ್ನು ಒಪ್ಪಬಹುದೇ? ರಷ್ಯನ್ ಪ್ರಗತಿಶೀಲ ಸಾಹಿತ್ಯದ ಆಶಯಗಳೊಂದಿಗೆ ಗುರುತಿಸಿಕೊಂಡ ನಿರಂಜನರ ತಾತ್ವಿಕತೆಯ ಸಂಕೇತವಾದ ಈ ಕಾದಂಬರಿಯ ವಸ್ತುವಿನ ಘಟನೆ ನಡೆದದ್ದು ಸ್ವಾತಂತ್ರ್ಯ ನಂತರದ ಕಾಲದಲ್ಲಿ (1955) ಆಗ ದೇಶದ ಪ್ರಧಾನಿ ಪಂಡಿತ್ ನೆಹ್ರು. ಒಂದು ಕಾಲದ ಪ್ರಗತಿಪರ ಸಂಘಟಕ, ಸಮಾಜವಾದದ ಕನಸು ಕಂಡ ನೆಹ್ರು ಅಧಿಕಾರಕ್ಕೆ ಬಂದ ನಂತರದ ‘ದ್ವಂದ್ವ’ಗಳಿಗೇನಾದರೂ ಈ ಕಾದಂಬರಿ ಪ್ರತಿಕ್ರಿಯಿಸುತ್ತಿದೆಯೇ? ಅವಕ್ಕೆಂದೇ ಇದು ಚರಿತ್ರೆಯಾಗಿದ್ದರೂ. ಚರಿತ್ರೆಯಲ್ಲ ಎಂದಿರಬಹುದೇ? ಏಕೆಂದರೆ ಹುತಾತ್ಮರ ಚರಿತ್ರೆಯನ್ನು ಮರು ಓದುವ ಬರೆಯುವ ಪರಂಪರೆಯನ್ನು, ಸೂಕ್ಷ್ಮವಾಗಿ ಗ್ರಹಿಸಿದಾಗ ಭವಿಷ್ಯದ ಹಿಂಸಾ ಸ್ವರೂಪದ ಆತಂಕವೇ ಸೃಜನಶೀಲತೆಯ ಅಭಿವ್ಯಕ್ತಿಗೆ ಬಳಕೆಯಾದಂತೆ ಕಾಣುತ್ತದೆ. ಈ ಹಿನ್ನೆಲೆಯಲ್ಲಿ ಈ ಕೃತಿ ಕೇವಲ ಪೂರ್ವದ ಘಟನೆಯನ್ನಷ್ಟೇ ಹೇಳುತ್ತಿಲ್ಲ ಭವಿಷ್ಯದ ಹಿಂಸಾ ಬೀಜಗಳನ್ನು ಸಹ ಸೂಚಿಸುತ್ತಿದೆ ಎನ್ನುವ ಅನುಮಾನಗಳನ್ನಿಟ್ಟು ಕೊಂಡಿದ್ದೇನೆ.

ಮಾರ್ಕ್ಸ್‌ವಾದವು ಹೇಳುವಂತೆ, ಇತಿಹಾಸವನ್ನು ಸೃಜಿಸುವವರು ವ್ಯಕ್ತಿಗಳು. ವೀರರು, ರಾಜಮಹಾರಾಜರು ಹಾಗೂ ಸೈನ್ಯಾಧಿಪತಿಗಳಲ್ಲ. ಆದರೆ ಪ್ರಾಥಮಿಕವಾಗಿ ನಾಗರಿಕತೆಯ ಹಾಗೂ ಸಂಸ್ಕೃತಿಯ ಬುನಾದಿಯಾದ ಭೌತಿಕ ಮೌಲ್ಯಗಳನ್ನು ಸೃಜಿಸುವಂಥ ದುಡಿಯುವ ವಿಶಾಲ ಜನ ಸಮೂಹಗಳು, ಇಡೀ ಜನತೆಗಳು. ಈ ಸಿದ್ಧಾಂತವನ್ನು ಈ ಕಾದಂಬರಿಯಲ್ಲಿ ದಟ್ಟವಾಗಿ ಬಳಸಿಕೊಂಡವರು ನಿರಂಜನರು. “ಮಹಾರಾಜರ ಮೇಲಿನ ಮಹಾಕಾವ್ಯಕ್ಕಿಂತ ದುಡಿವ ಬಡವನ ವಿಚಾರದ ಲಾವಣಿ ನಮ್ಮ ದೃಷ್ಟಿಯಲ್ಲಿ ಶ್ರೇಷ್ಠ” ಎಂದ ಪ್ರಗತಿಪರ ಸಾಹಿತ್ಯಕ ನಿಲುವಿಗೆ ಬದ್ಧರಾದವರು. ಪ್ರಗತಿಶೀಲರ ಸಾಹಿತ್ಯದ ಬಗ್ಗೆ ಒಂದು ಆರೋಪವಿದೆ. ಅವರದು ಕಲಾತ್ಮಕತೆಯಿಂದ ದೂರ ಸರಿದ ಸಾಹಿತ್ಯ ಎಂದು. ಅದು ಅನುಭವಗಳ ಸರಳೀಕರಣ. ಭಾಷೆಯ

ಜಾಳುತನದಿಂದಾಗಿ ಗಂಭೀರ ಸಾಹಿತ್ಯವೆನಿಸಿಕೊಳ್ಳಲಿಲ್ಲ. ಅ.ನ.ಕೃರವರ ಸಾಹಿತ್ಯವನ್ನು ಗಮನಿಸಿ ಕುರ್ತುಕೋಟಿಯವರು ಮಾಡಿದ ವಿಮರ್ಶೆಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು. "ಆ ವಾದ ವಾದವಾಗಿಯೇ ಉಳಿಯಿತೇ ಹೊರತು ನಿಜವಾದ ಸಂಗತಿಯಾಗಲಿಲ್ಲ. ಅದ್ದರಿಂದ ಆ ವಾದದ ದೊಡ್ಡ ಕೊರತೆಯೆಂದರೆ ಅದು ಅನುಭವದಿಂದ ದೂರವಾಗಿ ಉಳಿದದ್ದು. ಅನುಭವಕ್ಕಿಂತ ದೃಷ್ಟಿಕೋನ ಹೆಚ್ಚು ಮಹತ್ವವನ್ನು ಪಡೆಯಿತು. ಸಾಹಿತ್ಯದ ಯಾವುದೇ ಆಂದೋಲನವಾಗಲಿ ಅನುಭವವನ್ನು ಬಿಟ್ಟು ದೃಷ್ಟಿಕೋನವನ್ನಷ್ಟೇ ಅವಲಂಬಿಸಿದರೆ ಇಲ್ಲದ ಗೊಂದಲಕ್ಕೆ ಆಸ್ಪದವಿಟ್ಟಂತಾಗುತ್ತದೆ. ಈ ಮಾತು ನಿರಂಜನರ ಸಾಹಿತ್ಯಕ್ಕೆ ಅನ್ವಯಿಸಿ ಹೇಳುವಂತಿಲ್ಲ. ಅದೇ ಉಳಿದ ಪ್ರಗತಿಶೀಲ ಪಂಥದ ಸಾಹಿತಿಗಳಿಗೆ ಅನ್ವಯಿಸಿದಾಗ ನಿಜವೆನಿಸುತ್ತದೆ. ಇದನ್ನು ದೃಷ್ಟಿಯಲ್ಲಿಟ್ಟುಕೊಂಡೇ ಪ್ರಾರಂಭದಲ್ಲಿಯೇ ನಿರಂಜನರು ಹೇಳುತ್ತಾರೆ. "ಕಲೆಯನ್ನು ಸೆರೆಹಿಡಿಯುವ ಯತ್ನ" ಎಂದು.

ರಾಷ್ಟ್ರೀಯ ವಿಮೋಚನಾ ಚಳುವಳಿಗೆ ಜಾಗತಿಕ ಚರಿತ್ರೆ ಇದೆ. ಜಾಗತಿಕ ಕ್ರಾಂತಿಕಾರಿ ಪ್ರಕ್ರಿಯೆಯ ಒಂದು ಭಾಗವಾಗಿರುವ ಈ ಹೋರಾಟವು ವಸಾಹತುಶಾಹಿಯ ವಿರುದ್ಧ ನಿರಂತರವಾದದ್ದು ಆದರೆ ಆ ಯತ್ನಗಳು ಫಲಕೊಟ್ಟಿಲ್ಲ. ಅದನ್ನು ಅತ್ಯಂತ ಕ್ರೂರೀಯವಾಗಿಯೇ ಹತ್ತಿಕ್ಕಲ್ಪಟ್ಟಿದೆ. ಬಂಡವಾಳಶಾಹಿಗಳ ಮುಂದೆ ಇಂತಹ ಜನ ಹೋರಾಟಗಳು ನಿರರ್ಥಕವಾದ ಸಂದರ್ಭದಲ್ಲಿಯೇ ಸಂಭವಿಸಿದ್ದು ಅಕ್ಟೋಬರ್ ರಷ್ಯನ್ ಕ್ರಾಂತಿ. ಇದು ಜನಚಳುವಳಿಗಳಿಗೆ ಹೊಸ ಶಕ್ತಿಯನ್ನೇ ಕೊಟ್ಟಿತು. ಏಕಕಾಲಕ್ಕೆ ಈ ಹೋರಾಟದ ಸ್ವರೂಪ ಆಂತರಿಕವಾಗಿಯೂ ಇತ್ತು. ತಮ್ಮವರೇ ತಮ್ಮನ್ನು ಶೋಷಣೆ ಮಾಡುವುದರ ವಿರುದ್ಧ ಸಂಘಟಿತರಾಗುವ ಪ್ರಜ್ಞೆ ಚಾರಿತ್ರಿಕ ಹಿನ್ನೆಲೆಯಲ್ಲಿ ಆರಂಭಗೊಳ್ಳತೊಡಗಿತು. ಪ್ರತಿಗಾಮಿ ಶಕ್ತಿಗಳ ವಿರುದ್ಧವಲ್ಲದೇ ವಸಾಹತುಶಾಹಿ ಸರ್ಕಾರದೊಂದಿಗೆ ಕೈ ಜೋಡಿಸಿದ ದೇಶೀಯ ಶ್ರೀಮಂತರು ಬಡ್ಡಿಗೆ ಸಾಲ ಕೊಡುವವರು. ಸ್ವಾರ್ಥಿಕಾರಿಗಳ ವಿರುದ್ಧ ರೈತಾಪಿವರ್ಗವೂ ಬಂಡೆದ್ದದ್ದು ಮಹತ್ವದ ಬೆಳವಣಿಗೆಯಾಗಿತ್ತು. ಇಂತಹ ಚಳುವಳಿಗೆ ಬಲಿಯಾದವರು ನೇತೃತ್ವವನ್ನು ವಹಿಸಿದ ಒಂದು ಎಳೆಯ ತಲೆಮಾರನ್ನೇ ನಾವು ಗುರುತಿಸಬಹುದು. ಭಗತ್‌ಸಿಂಗ್ ಸುಖದೇವ್‌ನಂತಹವರು ಇದೇ ವರ್ಗದ ಪ್ರತಿನಿಧಿಗಳಾಗಿದ್ದಾರೆ. ಈ ಕಾದಂಬರಿಯ ಕಥಾನಾಯಕರು.

"ಕೈಯೂರು" ಒಂದು ಚಿಕ್ಕ ಗ್ರಾಮವಾದರೂ ಚಳುವಳಿಯ ದೃಷ್ಟಿಯಿಂದ ಅದೊಂದು ಮಹಾನಗರ. ವೀರಯೋಧರ ನಾಡು. ಆಳುವ ವರ್ಗದ ವಿರುದ್ಧ ರೈತಾಪಿ ವರ್ಗ ನಡೆಸಿದ ವಿಫಲ ಹೋರಾಟದ ಕಥಾನಕವನ್ನು ಸೈದ್ಧಾಂತಿಕ ಹಿನ್ನೆಲೆಯಲ್ಲಿ ನಿರಂಜನರು ನಿರೂಪಿಸಿದ್ದಾರೆ. ಅದೊಂದು ಊಳಿಗಮಾನ್ಯ ವ್ಯವಸ್ಥೆಯನ್ನು ಒಪ್ಪಿಕೊಂಡ ಹಳ್ಳಿ. ಆ ಹಳ್ಳಿಯನ್ನು ಆಳುವ ಎರಡು ಮನೆತನಗಳು ಒಂದು ನಂಬಿಯಾರ. ಮತ್ತೊಂದು ನಂಬೂದ್ರಿ. ಇವೆರಡು ಕುಟುಂಗಳು ಈ ಹಳ್ಳಿಯನ್ನು ಅಕ್ಷರದಿಂದ ಭೂ ಒಡೆತನದಿಂದ ತಲೆ ತಲೆಮಾರುಗಳಿಂದ ದೂರವಿಟ್ಟಿದೆ. ಅಷ್ಟೇ ಅಲ್ಲ ಆಧುನಿಕ

ಗಾಂಧೀಯನ್ನು ಸಹ. ಗಾಂಧೀವಾದಿಗಳನ್ನು ದೇಶದ್ರೋಹಿಗಳೆಂದು ಕರೆಯಲಾಗುತ್ತದೆ. ಇಲ್ಲಿ ಮಾಸ್ತರರ ಪ್ರೇರಣೆಯಿಂದ ಅದುವರೆಗೂ ಸಹಿಸಿಕೊಂಡ ಶೋಷಣೆಯ ವಿರುದ್ಧ ಒಂದು ಯುವಪಡೆ ಸಿದ್ಧಗೊಳ್ಳುತ್ತದೆ. ಅಕ್ಷರಗಳೊಂದಿಗೆ ಹೋರಾಟದ ಚರಿತ್ರೆಯನ್ನು ಹೇಳುತ್ತಾ ಹೋಗುವ ಮಾಸ್ತರರು ಚಳುವಳಿಗೆ ಪ್ರೇರಕವಾಗಿದ್ದಾರೆ. ಮಾಸ್ತರರ ಶಿಷ್ಯರಾದ ಎಳೆಯ ಮುಗ್ಧ ಅಷ್ಟೇ ವೈಚಾರಿಕವಾಗಿ ಗಟ್ಟಿಯಾದ ಮಠದ ಅಪ್ಪು, ಓಯಿತಪ್ಪಿನ ಚಿರಕಂಡ, ಪೊಡವರ ಕುಂಞಂಬು, ಅಬೂಬಕರ್‌ರ ಕನಸುಗಳು ಆ ಕನಸುಗಳ ದುರಂತತೆಯನ್ನು ಕಾದಂಬರಿ ವಾಸ್ತವಿಕ ನೆಲೆಯಲ್ಲಿಯೇ ಬಿಚ್ಚಿಡುತ್ತದೆ.

ಕಥಾ ಪ್ರದೇಶದ ಮುನ್ನವೇ ಚಳುವಳಿಯ ಪೂರ್ವದ ಸ್ಥಿತಿಗೂ, ನಂತರದ ಸ್ಥಿತಿಗೂ ಸಾಮಾನ್ಯರು ತೋರಿದ ನಿತಾಂತತೆಗೆ ಕಾರಣಗಳನ್ನು ಗುರುತಿಸುತ್ತದೆ. "ನೀವು ಮೌನವಾಗಿದ್ದಿರಿ. ಮೌನಕ್ಕೂ ಅರ್ಥವಿದೆ. ನಾನು ಬಲ್ಲೆ. ಭಾವನೆಗಳು ಒತ್ತಿರಸರಿದಾಗ ಎಷ್ಟೋ ಸಾರೆ ನಾವು ಮೌನ ತಳೆಯುತ್ತೇವೆ. ಕಯ್ಯೂರಿನ ನಮಗೆಲ್ಲ ಈ ಅನುಭವ ಹೊಸದಲ್ಲ. ಈ ಹಲವು ವರ್ಷಗಳ ಕಾಲ ಆಡಬೇಕೆನಿಸಿದ್ದನ್ನೆಲ್ಲ ನಾವು ಆಡಿದ್ದರೆ ಈ ಮಾತುಗಳು ಬೆಟ್ಟದಷ್ಟು ಎತ್ತರವಾಗುತ್ತಿದ್ದವು. ಆಳಬೇಕು ಎನಿಸಿದಾಗಲೆಲ್ಲಾ ನಾವು ಅತ್ತಿದ್ದರೆ, ತೇಜಸ್ವಿನಿ ಹೊಳೆಯಲ್ಲಿ ಎಂದಿಗೂ ಬತ್ತದ ಮಹಾಪೂರ ಬರುತ್ತಿತ್ತು. ಆದರೆ ಮನಸ್ಸಿನಲ್ಲಿದುದನ್ನೆಲ್ಲ ಯಾವಾಗಲೂ ನಾವು ಮಾಡುವುದಿಲ್ಲ. ತೋಚಿದ್ದನ್ನೆಲ್ಲ ಎಂದೂ ಆಡುವುದಿಲ್ಲ. (ಪುಟ : 17) ಆದರೆ ಈ ಯುವಕರು ಮೌನವಾದವರಲ್ಲ ಬೆಟ್ಟದಷ್ಟು ಮಾತನಾಡಿದವರೂ ಅಲ್ಲ. ಬೆಟ್ಟವೇ ಆದವರು. ಮಾಸ್ತರರ ಚರಿತ್ರೆಯ ಪಾಠಗಳು ಅಪ್ಪು ಚಿರಕಂಡರನು ಬೆರಗುಗೊಳಿಸುತ್ತಲೇ ಹೋಗುತ್ತವೆ. ಅದಕ್ಕೆಂತಲೇ ಅವರು ಕೂಗುವ ಪೋಷಣೆಗಳು ಈ ರೀತಿಯಾಗಿರುತ್ತವೆ.

"ಭೂಮಿ ಯಾರದು?"
"ರೈತರದು"
"ಉಳುವವನೇ"
"ಹೊಲದೊಡೆಯ"
"ಹಳೆಯ ಸಾಲ"
"ಮನ್ನಾಮಾಡಿ"
"ಜಮೀನ್ದಾರಿ ಪದ್ಧತಿ"
"ಅಳಿಸಿ ಹೋಗಲಿ"
"ಸಾಮ್ರಾಜ್ಯಶಾಹಿ"
"ನಾಶವಾಗಲಿ"

ಈ ವಾತಾವರಣ ಮೂಡಬಾರದೆಂತಲೇ ನಂಬಿಯಾರರು ನಂಬೂದ್ರಿಗಳು ಶಾಲೆಯನ್ನೇ ತೆರೆದಿರುವುದಿಲ್ಲ. ಅದನ್ನು ನಂಬಿಯಾರ ಹೀಗೆ ಸಮರ್ಥಿಸಿಕೊಳ್ಳುತ್ತಾನೆ: "ನಿಮಗೆ ತಿಳಿಯೋದಿಲ್ಲ ಮಾಸ್ತರ. ಈ ಜನ ಎಂಥವರು ಅನ್ನೋದು ನನಗೆ ಗೊತ್ತಿದೆ." ನಾವು ಅವರನ್ನು ದೂರವಿಟ್ಟರೆ ಮಾತ್ರ ಅವರು ನಮ್ಮನ್ನು ಗೌರವಿಸುತ್ತಾರೆ.

* * *

